ಸಮರ್ಪಣ :

ಹಿರಿಯ ಸಾಹಿತಿ, ಹಿರಿಯ ಜೀವ

**ಶ್ರೀ ಸಿದ್ದವನಹಳ್ಳಿ ಕೃಷ್ಣಶರ್ಮರಿಗೆ**

ಆದರಪೂರ್ವಕವಾಗಿ.

# ಬಲೆಯ ಬೀಸಿದರು

ಮಾತಿನ ಮಾತಿಂಗೆ ನಿನ್ನ ಕೊಂದಿಹರೆಂದು
ಎಲೆ ಹೋತೇ, ಅಳು ಕಂಡೆಯಾ !
—ಬಸವಣ್ಣನವರು



ತಿವಿಗತ್ತಿಯ ಬಂದೂಕವನ್ನು ಎಡಭುಜದ ಮೇಲಿರಿಸಿಕೊಂಡು, ಸೆರೆಮನೆ ಕಚೇರಿಯೆದುರಿಗೆ ಅಡಿಯಿಡುತ್ತಲಿದ್ದ ಸಿಪಾಯಿ ಹಠಾತ್ತಾಗಿ ತಡೆದು ನಿಂತ, ಒಳಬಾಗಿಲಿನ ಪುಟ್ಟ ಕಿಂಡಿಯಲ್ಲಿಣಿಕಿ ನೋಡಿದ, ಬಲಗೈಯನ್ನು ಬಂದೂಕದ ಕೆಳಭಾಗದ ಮೇಲಿರಿಸಿದ, ಅಂಗಳದಲ್ಲಿ ಕುಳಿತಿದ್ದ ಇತರ ಸಿಪಾಯಿಗಳತ್ತ ತಿರುಗಿ ಹೇಳಿದ :

" ಬಂದ....ಅವ ಬಂದ....ಬರ್‍ತಾ ಇದಾನೆ.... !"

" ಯಾರು ? " ಎಂದು ಕೇಳಿದ ಒಬ್ಬ ಸಿಪಾಯಿ.

" ಸದಾಶಿವ....ಸದಾಶಿವ.... !"

" ಸದಾಶಿವ ? ಇವತ್ತು ಅವರ ಬಿಡುಗಡೆ ಅಲ್ಲೇನು ? "

ಅಂಗಳದಲ್ಲಿ ಕುಳಿತುಕೊಂಡಿದ್ದ ಸಿಪಾಯಿಗಳೂ ವಾರ್ಡರುಗಳೂ ಒಡನೆಯೇ ಎದ್ದು ನಿಂತರು—ಯಾಂತ್ರಿಕವಾಗಿ. ಆ ಸಮಯದಲ್ಲಿ ಅವರು ಎದ್ದು ನಿಲ್ಲಬೇಕಾದ ಆವಶ್ಯಕತೆಯೇನೂ ಇರಲಿಲ್ಲ. ಬಿಡುಗಡೆ ಹೊಂದಲಿದ್ದ ಸೆರೆಯಾಳುವಿಗೆ ಎದ್ದು ನಿಂತು ಮರ್‍ಯಾದೆ ತೋರಿಸಬೇಕೆಂಬ ನಿಯಮವೂ ಇರಲಿಲ್ಲವಲ್ಲ. ಆ ಸೆರೆಮನೆಯಲ್ಲಿದ್ದ ಸಾವಿರಾರು ಸೆರೆಯಾಳುಗಳಲ್ಲಿ ಸದಾಶಿವನೂ ಒಬ್ಬ ಅಷ್ಟೆ. ಸೆರೆಮನೆಯ ನಿಯಮಗಳ ಪ್ರಕಾರ ಸೆರೆಯಾಳುಗಳೇ ಸಿಪಾಯಿಗಳೆದುರಿಗೆ ಎದ್ದು ನಿಲ್ಲಬೇಕು. ಅಂಥ ನಿಯಮಗಳಿಗೆ ಸದಾಶಿವ ಕಾಸಿನ ಬೆಲೆಯನ್ನೂ ಕೊಟ್ಟಿರಲಿಲ್ಲ. ಆ ಮಾತು ಬೇರೆ.

ಅವನು ಸೆರೆಯಾಳಾಗಿದ್ದುದೇನೊ ನಿಜ. ಆದರೆ ಎಂಥ ಸೆರೆಯಾಳು! ಅಂಥವರು ವರ್ಷ ವರ್ಷವೂ ತಿಂಗಳು ತಿಂಗಳೂ ಬರುತ್ತಿರುವುದಿಲ್ಲ. ಅಲ್ಲಿದ್ದಷ್ಟು ದಿನವೂ ಅವನು ಕೈದಿಯಂತಿರದೆ ಆ ಸೆರೆಮನೆಯ ರಾಜನಂತೆ ವರ್ತಿಸಿದ್ದ.

ಪ್ರತಿಯೊಬ್ಬರೂ ಅವನೆದುರಲ್ಲಿ ನಮ್ರರಾಗಿ ನಡೆದುಕೊಳ್ಳುತ್ತಿದ್ದರು. ಅವನು ಬಂದಾಗಲೆಲ್ಲ ಎದ್ದು ನಿಲ್ಲುವುದು ಅಭ್ಯಾಸವಾದ ಹಾಗಾಗಿತ್ತು ಎಲ್ಲರಿಗೂ. ಕೇವಲ ಸಿಪಾಯಿಗಳು ಮಾತ್ರವಲ್ಲ, ಸುಭೇದಾರರು, ಜಮೇದಾರರು, ಡೆಪ್ಯುಟಿ ಜೇಲರು, ಜೇಲರು, ಸುಪರಿಂಟೆಂಡೆಂಟು ಎಲ್ಲರೂ ಅವನೊಡನೆ ತುಂಬಾ ಗೌರವದಿಂದ ನಡೆದುಕೊಳ್ಳುತ್ತಿದ್ದರು. ಅದಕ್ಕೇನು ಕಾರಣವೆಂದು ಯಾರಾದರೂ ವಿಚಾರಿಸಿದ್ದರೆ ಅವರು ಉತ್ತರವೀಯಲು ಅಸಮರ್ಥರಾಗಬಹುದಾಗಿತ್ತು. ಅವನಲ್ಲಿದ್ದ ಯಾವುದೋ ಒಂದು ಅದೃಶ್ಯ ಶಕ್ತಿಯಿಂದ ಪ್ರಭಾವಿತರಾಗಿ ಅವರು ಹಾಗೆ ವರ್ತಿಸುತ್ತಿದ್ದುದು ಸ್ಪಷ್ಟವಾಗಿತ್ತು. ಅವನ ದೃಷ್ಟಿಯೊಂದಿಗೆ ದೃಷ್ಟಿ ಬೆರೆತಾಗಲೆಲ್ಲ ಪುಲಕಿತರಾಗುತ್ತಿದ್ದವರು ಅನೇಕ ಜನ. ಅವನೊಬ್ಬ ವಿಭೂತಿಯೆಂದು ಭಾವಿಸಿ ಅಂತರಂಗದಲ್ಲಿ ಅವನನ್ನು ಆರಾಧಿಸುತ್ತಿದ್ದವರಿಗೂ ಕೊರತೆಯಿರಲಿಲ್ಲ. ಅವನ ಸಾಹಸ ಕೃತ್ಯಗಳ ಬಗೆಗೆ ಸೆರೆಮನೆಯಲ್ಲಿ ಹರಡಿದ್ದ ರಮ್ಯ ಕಥೆಗಳು ನೂರಾರು. ನಲವತ್ತೆರಡರ ಚಳುವಳಿಯ ಕಾಲಕ್ಕೆ ಸಶಸ್ತ್ರ ಕ್ರಾಂತಿಗಾರಂಭಿಸಿ ಹಲವು ತಿಂಗಳುಗಳ ಕಾಲ ಬ್ರಿಟಿಷರಿಗೆ ಚಳ್ಳೆಹಣ್ಣು ತಿನ್ನಿಸಿದ ಪ್ರಸಿದ್ಧ ಕ್ರಾಂತಿಕಾರ ಸ್ವಾಮಿಯ ಬಲಗೈಯಂತಿದ್ದು ಹೋರಾಡಿದವನು ಸದಾಶಿವ. ಆ ಸಮಯದ ಘಟನೆಗಳನ್ನು ಕುರಿತು ಅವನು ಹೇಳುತ್ತಿದ್ದಾಗ ಸೆರೆಯಾಳುಗಳು, ವಾರ್ಡರುಗಳು, ಸಿಪಾಯಿಗಳು ಎಲ್ಲರೂ ಮಂತ್ರಮುಗ್ಧರಂತೆ ಕುಳಿತು ಕೇಳುತ್ತಿದ್ದರು. ಹೆಂಡತಿಯ ಕತ್ತು ಹಿಸುಕಿ ಕೊಲೆ ಮಾಡಿದ ಅಪಾದನೆಗೊಳಗಾಗಿ ಆಜನ್ಮ ಕಾರಾವಾಸದ ಶಿಕ್ಷೆ ಹೊಂದಿ ಸೆರೆಮನೆಯಲ್ಲಿದ್ದ ಲಾವಣಿಕಾರ ಭರಮು, ಸದಾಶಿವನ ವೀರಕೃತ್ಯಗಳನ್ನು ಬಣ್ಣಿಸುವ ರಸಭರಿತ ಲಾವಣಿಯೊಂದನ್ನು ರಚಿಸಿದ್ದ. ಸೆರೆಮನೆಯಲ್ಲಿನ ಎಲ್ಲ ಬರಾಕುಗಳ ಕೈದಿಗಳಿಗೂ ಚಿರಪರಿಚಿತವಾದುದಾಗಿತ್ತು ಆ ಲಾವಣಿ. ಆ ಹಾಡಿನಲ್ಲಿನ ವೀರಪುರುಷ ತಮ್ಮ ಸೆರೆಮನೆಯಲ್ಲಿ ತಮ್ಮೊಡನೆಯೇ ವಾಸಿಸಿದ್ದುದು ಅವರ ಅಭಿಮಾನ ಆನಂದಗಳಿಗೆ ಕಾರಣವಾಗಿತ್ತು. ಸಿಪಾಯಿಗಳು, ಜೇಲರುಗಳು ಕೂಡಾ ಅನೇಕ ಬಾರಿ ಆ ಲಾವಣಿಯನ್ನು ಕೇಳಿದ್ದರು. ಅಂಥ ಕ್ರಾಂತಿಕಾರನನ್ನು ಕಾಯುವ ಕರ್ತವ್ಯ ತಮ್ಮ ಪಾಲಿಗೆ ಬಂದುದಕ್ಕಾಗಿ ಹೆಮ್ಮೆಯೂ ಎನ್ನಿಸಿತ್ತು ಅನೇಕರಿಗೆ.

ಅವನ ಹೆಮ್ಮೆಗೆ ಕಾರಣವಾಗಿದ್ದ ಆ ಸದಾಶಿವ ಇಂದು ಹೊರಟು ನಡೆದಿದ್ದ, ಸೆರೆಮನೆಯಿಂದ.

ಸಹಜವಾಗಿಯೆ ಅವರಲ್ಲನೇಕರಿಗೆ ಬಲು ವ್ಯಸನವಾಗಿತ್ತು.

ಒಳಬಾಗಿಲು ಮೆಲ್ಲನೆ ಬಿಚ್ಚಿಕೊಂಡು ಸದಾಶಿವನನ್ನು ಅಂಗಳಕ್ಕಿಳಿಸಿತು. ನಿಧಾನವಾಗಿ ಅಡಿಯಿಡುತ್ತಾ ರಾಜಠೀವಿಯಲ್ಲಿ ಬಂದ ಸದಾಶಿವ. ಸೆರೆಮನೆಯ ಅಂಗಳದಲ್ಲಿದ್ದವರ ಕಣ್ಣುಗಳೆಲ್ಲ ಅವನತ್ತ ತಿರುಗಿದುವು.

ಸುತ್ತಲಿನ ಜನರ ಕಣ್ಮನಗಳನ್ನು ಸೆಳೆದುಕೊಳ್ಳುವಂಥ ಶಕ್ತಿಪೂರ್ಣವೂ ಅದ್ವಿತೀಯವೂ ಆದ ಅದ್ಭುತ ವ್ಯಕ್ತಿತ್ವ ಸದಾಶಿವನದು. ಎಲ್ಲಕ್ಕೂ ಮೊದಲನೆಯದಾಗಿ ಚಿತ್ತಹರಣ ಮಾಡುವುದೆಂದರೆ ಅವನ ದೇಹಪುಷ್ಟಿ. ಆರು ಅಡಿಗಳಿಗೂ ಮಿಕ್ಕಿ ಬೆಳೆದ ಎತ್ತರ, ಆ ಎತ್ತರಕ್ಕೆ ತಕ್ಕುದೆನ್ನಿಸುವಂಥ ಪುಷ್ಟಿ. ನೋಡಿದೊಡನೆ ಉಕ್ಕಿನ ಕವಚವನ್ನು ನೆನಪಿಗೆ ತರುವಂಥ ವಿಶಾಲ, ಬಲಶಾಲಿ ಎದೆ, ಮಾಂಸಖಂಡಗಳಿಂದ ಎದ್ದು ಕಾಣುವ ಹರವಾದ ಭುಜಗಳು, ಮೊಳಕಾಲುಗಳವರೆಗೂ ಇಳಿಯುವ ಕೈಗಳು, ನಡೆಯುವಾಗ ಒಂದಕ್ಕೊಂದು ತಾಕಲಾಡುವಷ್ಟು ಪುಷ್ಟಿಗೊಂಡಿದ್ದ, ಕಂಬದಂಥ ತೊಡೆಗಳು, ಭಯ[illegible]ತ ಆದರ ಹುಟ್ಟಿಸುವ ಶಕ್ತಿಯನ್ನುಳ್ಳ ಮುಂಗೈಗಳು, ಖಾದಿಯ ಬುಶ್‌ಕೋ[illegible]ನ ತೆರೆದ ಕಾಲರಿನೊಳಗಿಂದ ಎದ್ದು ಕಾಣುವ, ಹೋರಿಯ ಕತ್ತ[illegible]ಪಿಸುವ ಪ್ರಚಂಡ ಕತ್ತು, ಕಲ್ಲಿನಂತೆ ದೃಢವಾಗಿದ್ದ ಗದ್ದ, ಕೆನ್ನೆ[illegible]ದಿಕೊಂಡ ಹಾಗಿದ್ದ ಸಣ್ಣ ಸಣ್ಣ ಕಿವಿಗಳು, ಉದ್ದವಾಗಿ ನೇರವಾಗಿ [illegible]ಲ್ಭಾಗದಲ್ಲಿ ಕೊಂಚ ಬಾಗಿದಂತಿದ್ದ ನಾಸಿಕ, ಅದರ ಕೆಳಗಡೆ, ಸ್ಪೈನಿ[illegible]ನ, ಸೊಗಸಾಗಿ ಕತ್ತರಿಸಿದ ಮೀಸೆ, ತಲೆಯ ತುಂಬಾ ದಟ್ಟವಾಗಿ ಬೆ[illegible]ದ್ದ ಗುಂಗುರುಗೂದಲು, ಅಷ್ಟೇ ಹುಲುಸಾಗಿ ಬೆಳೆದಿದ್ದ ಹುಬ್ಬುಗಳ ಕೆಳ[illegible]ದ ದಿಟ್ಟತನದಿಂದ ಇಣಿಕುವ ಬೂದಿಬಣ್ಣದ ಕಣ್ಣುಗೊಂಬೆಗಳು. ಸಾ[illegible] ಜನರ ಸಮೂಹದಲ್ಲೂ ಥಟ್ಟನೆದ್ದು ಕಾಣುವಂಥ ರೂಪು ಸದಾಶಿವನದು. [illegible] ಹೊಸ ಯೋಚನೆ ಹೊಳೆದಾಗಲೆಲ್ಲ ಬಲಗೈ ಎತ್ತಿ ಮೀಸೆಯ ಕುಡಿಯ[illegible] ತಿದ್ದುವುದೊಂದು ಅವನ ವಿಶಿಷ್ಟ ಅಭ್ಯಾಸವಾದಂತಾಗಿತ್ತು. ಹಾಗೆ [illegible]ನು ಕೈಯೆತ್ತಿದಾಗ, ಅವನ ತೋಳಿನ ಸ್ನಾಯುಗಳು ವಿಸ್ತಾರಗೊಂಡು [illegible]ಟಿನ ಬಟ್ಟೆಯೊಳಗಡೆ ಉಕ್ಕಿನ

ಗುಂಡೊಂದು ರೂಪುಗೊಂಡಂತಾಗುವುದು. ಆಗ, ಅವನ ಸನಿಯದವರೆಲ್ಲ ಆ ದೈತ್ಯತೋಳುಗಳನ್ನೇ ಎವೆಯಿಕ್ಕದೆ ದಿಟ್ಟಿಸುತ್ತಿರುವರು. ಅವನನ್ನು ದಿಟ್ಟಿಸಿ ನೋಡುವುದಕ್ಕು ಕೂಡ ಭೀತಿಯಾಗುವುದು ಅನೇಕರಿಗೆ.

ಮದ್ದಾನೆಯಂತೆ ಗಂಭೀರವಾಗಿ ಅಡಿಯಿಡುತ್ತ ಸುಪರಿಂಟೆಂಡೆಂಟರ ಕೊಟಡಿಯಲ್ಲಿ ಪ್ರವೇಶಿಸಿದ ಸದಾಶಿವ.

ಸಾಕಷ್ಟು ದೊಡ್ಡದಾದ ಕೊಟಡಿ. ಪೂರ್ವದಿಕ್ಕಿನ ಕಿಟಕಿಯ ಹತ್ತಿರವಿದ್ದ ದೊಡ್ಡ ಮೇಜಿನ ಹಿಂದೆ ಕುಳಿತು, ಕೈಯಲ್ಲಿ ಲೆಕ್ಕಣಿಕೆ ಹಿಡಿದು, ಫೈಲುಗಳ ಮೇಲೆ ದೃಷ್ಟಿಯಿರಿಸಿದ್ದ ಸುಪರಿಂಟೆಂಡೆಂಟ್ ನಿಧಾನವಾಗಿ ಕತ್ತೆತ್ತಿ ನೋಡಿದರು. ಅವರ ಬಳಿಯಲ್ಲಿಯೆ ನಿಂತುಕೊಂಡಿದ್ದ ಜೇಲರು ಮೆಲ್ಲಗಿನ ಧ್ವನಿಯಲ್ಲಿ ನುಡಿದರು :

"ಮಿಸ್ಟರ್ ಸದಾಶಿವ."

ಸುಪರಿಂಟೆಂಡೆಂಟರ ಮುಖದ ಮೇಲೆ ಗೊಂದಲದ ಗೆರೆಗಳೆದ್ದು ಮಾಯವಾದುವು. ಸದಾಶಿವನನ್ನು ಕಂಡಾಗಲೆಲ್ಲ ಹಾಗೆಯೆ ಆಗುತ್ತಿತ್ತು ಅವರಿಗೆ. ಏಳು ವರ್ಷಗಳ ಹಿಂದೆ, ಅವನು ಮೊದಲನೆಯ ಸಲ ಆ ಸೆರೆಮನೆಗೆ ಬಂದಾಗ ಜೇಲರ್ ಸ್ಥಾನದಲ್ಲಿದ್ದವರು ಅವರು. ಮೊದಲ ನೋಟಕ್ಕೇ ಅವನು ಅವರ ಮೇಲೆ ಪ್ರಭಾವ ಬೀರಿದ್ದ. ಇತರ ಕೈದಿಗಳಿಗೆಲ್ಲ ಕಾಲದೂತನಂತಿದ್ದ ಅವರನ್ನು ಕಂಡು ಉಪಹಾಸದಿಂದ ನಕ್ಕು ನಿರ್ಭಯವಾಗಿ ವರ್ತಿಸುತ್ತಿದ್ದ ಸದಾಶಿವನ ಬಗ್ಗೆ ಅಂದಿನಿಂದಲೂ ಅವರ ಎದೆಯಲ್ಲಿ ಭಯಮಿಶ್ರಿತ ಆದರ ಮನೆ ಮಾಡಿಕೊಂಡಿತ್ತು. ಒಂದೂವರೆ ವರ್ಷದ ಹಿಂದೆ ಎರಡನೆಯ ಸಲ ಅವನು ಅಲ್ಲಿಗೆ ಬಂದಾಗ ಅವರು ಸುಪರಿಂಟೆಂಡೆಂಟರಾಗಿದ್ದರು. ಸೆರೆಮನೆಯ ಮೇಲೆಲ್ಲ ಸರ್ವಾಧಿಕಾರಿಯಂತೆ ಆಡಳಿತ ನಡಸುವ ಅಧಿಕಾರ ಅವರಿಗಿತ್ತು. ತಪ್ಪು ಮಾಡಿದ ಸೆರೆಯಾಳುವನ್ನು ತಮಗಿಷ್ಟ ಬಂದ ಹಾಗೆ ಶಿಕ್ಷಿಸುವ ಅಧಿಕಾರ ಅವರಿಗಿತ್ತು. ಸದಾಶಿವನಂಥ ಒಬ್ಬ ಸಾಧಾರಣ ಕೈದಿಗೆ ಅವರು ಹೆದರಿಕೊಂಡಿರುವ ಅಗತ್ಯವೇನೂ ಇರಲಿಲ್ಲ. ಆದರೂ ಏಳು ವರ್ಷಗಳಿಂದ ಬೆಳೆದು ಬಂದಿದ್ದ ಭಯ, ಅವರೆಷ್ಟು ಯತ್ನಿಸಿದರೂ ಅವರೆದೆಯಿಂದ ತೊಲಗಿರಲಿಲ್ಲ. ಭವಿಷ್ಯಕಾಲದ ಯೋಚನೆಗಳೂ ಆ ಭಯಕ್ಕೆ ಕಾರಣವಾಗಿದ್ದುವು. ಗಾಂಧಿ

ಟೊಪ್ಪಿಗೆಯ ಜನರ ಕೈಗೆ ಅಧಿಕಾರ ಒಪ್ಪಿಸಿಕೊಟ್ಟು ಬ್ರಿಟಿಷರು ಹೊರಟು ಹೋಗಬಹುದೆಂದು ಯಾರು ತಿಳಿದಿದ್ದರು ? ಸುಪರಿಂಟೆಂಡೆಂಟರಂತೂ ಎಂದೂ ಹಾಗೆ ಯೋಚಿಸಿರಲಿಲ್ಲ. ನಲವತ್ತೆರಡರ ಚಳುವಳಿಯ ಪುಕ್ಕಲು ಹೃದಯದ ಹಸುಳೆಗಳನ್ನು ಕಂಡು ನಕ್ಕವರು ಅವರು; ಇಂಥ ದುರ್ಬಲರು ಸ್ವರಾಜ್ಯ ಗಳಿಸುವುದುಂಟೇ? ಎಂದು ಹೀಯಾಳಿಸಿ ನಕ್ಕವರು ಅವರು. ಆ ದುರ್ಬಲರೇ, ಅವರ ಕಣ್ಣೆದುರಿನಲ್ಲೇ ಅಧಿಕಾರಕ್ಕೆ ಬರಲಿಲ್ಲವೆ ? ಯಾರು ಬಲ್ಲರು ? ನಾಳೆ ಇದ್ದುದಿದ್ದ ಹಾಗೆ ದೇಶದಲ್ಲಿ ಕ್ರಾಂತಿಯಾಗಿ ಸದಾಶಿವನ ಪಕ್ಷ ಅಧಿಕಾರಕ್ಕೆ ಬಂದರೂ ಬರಬಹುದು. ಚೀಣಾದಲ್ಲಿ ಆಗಲಿಲ್ಲವೆ ? ಇನ್ನೂ ಎಷ್ಟೋ ದೇಶಗಳಲ್ಲಿ ಆಗಲಿಲ್ಲವೆ ? ಹಾಗೆ ಹಿಂದೂ ದೇಶದಲ್ಲೂ ಆಗಲಿಕ್ಕಿಲ್ಲವೆಂದು ಏನು ಭರವಸೆ ? ಇಂದಿನ ಕಾಲದಲ್ಲಿ ಯಾವುದರದೂ ಭರವಸೆಯಿಲ್ಲ. ನಾಳೆ ಏನಾಗುವುದೆಂಬುದು ತಿಳಿಯುವಂತಿಲ್ಲ. ಐದು ವರ್ಷಗಳ ಹಿಂದೆ ಗಾಂಧಿ ಟೊಪ್ಪಿಗೆಯವರನ್ನು ಕಾಲಿನಿಂದೊದೆಯುತ್ತಿದ್ದ ತಾವು ಇಂದು ಅವರೆದುರಿಗೇ ತಲೆಬಾಗಿ ನಮಸ್ಕರಿಸಬೇಕಾದ ಸಂದರ್ಭ ಬಂದಿಲ್ಲವೆ ? ಕಾಂಗ್ರೆಸ್ಸಿನವರೇನೋ ಅಹಿಂಸಾವಾದಿ ಜನ. ಬ್ರಿಟಿಷರ ಕಾಲದಲ್ಲಿ ದಬ್ಬಾಳಿಕೆ ನಡಸಿದ ತಮ್ಮಂಥ ಅಧಿಕಾರಿಗಳ ಮೇಲೆ ಸೇಡು ತೀರಿಸಿಕೊಳ್ಳುವ ಹವ್ಯಾಸಕ್ಕೆ ಅವರು ಬೀಳಲಿಲ್ಲ. ಕಾಂಗ್ರೆಸ್ಸಿನವರ ರೀತಿ ಬೇರೆ, ಈ ಕ್ರಾಂತಿಕಾರರ ರೀತಿಯೇ ಬೇರೆ. ತಮ್ಮನ್ನು ಕೆಟ್ಟ ರೀತಿಯಿಂದ ನಡಸಿಕೊಂಡ ಅಧಿಕಾರಿಗಳನ್ನೂ ಅವರ ಆತ್ಮೀಯರನ್ನೂ ಗುಂಡು ಹಾಕಿ ತೀರಿಸಿಬಿಡುವ ಉಗ್ರಜನರಿವರು. ನಾಗಸರ್ಪದಂಥ ಸ್ವಭಾವದ ಈ ಜನರ ದ್ವೇಷ ಕಟ್ಟಿಕೊಳ್ಳುವುದು ಜಾಣತನವಲ್ಲ.

—ಹಾಗೆ ಯೋಚಿಸಿ, ಸದಾಶಿವನೊಡನೆ ಸದಾಕಾಲವೂ ನಯಭಯಗಳಿಂದ ವರ್ತಿಸುತ್ತ ಬಂದವರು ಸುಪರಿಂಟೆಂಡೆಂಟರು.

"ಕೂತುಕೊಳ್ಳಿರಿ ಮಿಸ್ಟರ್ ಸದಾಶಿವ್" ಎಂದು ಅವರು ಆದರದ ಧ್ವನಿಯಲ್ಲಿ ನುಡಿದರು.

"ಓ ! ಥ್ಯಾಂಕ್ ಯೂ."

ಅವನು ಕುಳಿತುಕೊಳ್ಳಲಿಲ್ಲ. ಅವನ ಮುಖಮುದ್ರೆಯಲ್ಲೂ ಬದಲಾವಣೆಯಾಗಲಿಲ್ಲ. ಸುಪರಿಂಟೆಂಡೆಂಟರ ಹಿಂಭಾಗದ ಗೋಡೆಯ ಮೇಲೆ

ನೇತಾಡುತ್ತಿದ್ದ ಗಾಂಧೀ ಪಟದ ಮೇಲೆ ತನ್ನ ತೀಕ್ಷ್ಣ ದೃಷ್ಟಿಯನ್ನು ಸ್ಥಿರವಾಗಿಸಿ ಅವನು ನಿಂತುಕೊಂಡಿದ್ದ.

"ನಿಮ್ಮ ರಿಲೀಸ್ ಆಯಿತಲ್ಲಾ ಅಂತ ನನಗೆ ಬಹಳ ಸಂತೋಷ" ಎಂದರು ಸುಪರಿಂಟೆಂಡೆಂಟರು.

"ನಿಮ್ಮ ಸಂತೋಷ ಬಹಳ ದಿನ ಉಳಿಯುವುದೋ ಇಲ್ಲವೋ" ವ್ಯಂಗ್ಯ ಬೆರೆತ ಧ್ವನಿಯಲ್ಲಿ ಅವನು ಹೇಳಿದ.

"ಅದೇನು, ಹೀಗಂತೀರಲ್ಲಾ ?"

"ಯಾರಿಗೆ ಗೊತ್ತು. ಇಂದು ನಾಳೆ ಅಷ್ಟರಲ್ಲೇ ಮತ್ತೆ ನಾ ನಿಮ್ಮ ಕೈದಿಯಾಗಿ ಬರುವ ಪ್ರಸಂಗ ಬಂದರೂ ಬಂದೀತು."

"ಹಾಗಾಗಬಾರದೆಂತಲೇ ನನ್ನ ಇಚ್ಛೆ."

"ಥ್ಯಾಂಕ್ ಯೂ" ಎಂದು ಮುಗುಳ್ನಕ್ಕ ಸದಾಶಿವ.

"ನೀವಿಲ್ಲಿ ಇದ್ದಾಗ ನಮ್ಮಿಂದೇನಾದರೂ ಅಪ್ಪಿ-ತಪ್ಪಿ ಪ್ರಮಾದವಾಗಿದ್ದರೆ ಕ್ಷಮಿಸಿ. ನಿಮಗೂ ಗೊತ್ತು. ನಾವೆಲ್ಲ ಶಿಸ್ತಿಗೊಳಪಟ್ಟು ಯಂತ್ರದಂತೆ ಕೆಲಸ ಮಾಡಬೇಕಾಗುತ್ತದೆ."

ಸದಾಶಿವ ಮತ್ತೆ ತುಟಿ ಬಿಚ್ಚಲಿಲ್ಲ. ಪರಮ ನಿರ್ಲಕ್ಷ್ಯದಿಂದ ಒಂದು ಸಲ ಕತ್ತು ಕೊಡಹಿದ, ಅಷ್ಟೆ.

"ಇದೋ ನಿಮ್ಮ ಬ್ಯಾಗು. ನಿಮ್ಮ ಹಣ."

ಜೇಲರ್ ಕೊಟ್ಟ ನೋಟುಗಳನ್ನು ಪ್ಯಾಂಟಿನ ಕಿಸೆಗೆ ತುರುಕಿದ ಸದಾಶಿವ.

"ದಯವಿಟ್ಟು ಇಲ್ಲಿ ಸಹಿ ಹಾಕಿರಿ"

ಸಹಿ ಹಾಕಿ ಮುಗಿಸಿ, ಒಂದು ಸಲ ಸುಪರಿಂಟೆಂಡೆಂಟರ ಕಡೆ ನೋಡಿ ಕತ್ತು ಕೊಡಹಿ ಕೊಟಡಿಯಿಂದ ನಡೆದ ಸದಾಶಿವ. ಬಿಡುಗಡೆ ಹೊಂದಿ ಹೊರಟ ಈ ವೇಳೆಯಲ್ಲಾದರೂ ಅವನೊಮ್ಮೆ ತನಗೆ ನಮಸ್ಕಾರ ಮಾಡಬಹುದೆಂದು ನಿರೀಕ್ಷಿಸಿದ್ದ ಸುಪರಿಂಟೆಂಡೆಂಟರಿಗೆ ಮುಖಭಂಗವಾದಂತಾಯಿತು. ಸದಾಶಿವ ಈ ರೀತಿ ಒರಟುತನದಿಂದ ವರ್ತಿಸುವುದೇಕೆಂಬುದೇ ಅವರಿಗೊಂದು ಸಮಸ್ಯೆಯಾಗಿತ್ತು. ಬಳಕೆಯಲ್ಲಿರುವ ಶಿಷ್ಟಾಚಾರವೊಂದನ್ನೂ ಪಾಲಿಸುವುದಿಲ್ಲವಲ್ಲ

ಈತ ! ಹಾಗೆ ಅವನು ಅಶಿಕ್ಷಿತನೇನೂ ಅಲ್ಲ, ಅಸಂಸ್ಕೃತನೂ ಅಲ್ಲ. ಕಾಲೇಜು ಕಟ್ಟೆ ಹತ್ತಿದ ಸುಶಿಕ್ಷಿತ ಯುವಕ. ಅಂಥವನೂ ಈ ರೀತಿಯಾಗಿ ವರ್ತಿಸುವುದೇಕೋ? ಈ ಪಕ್ಷದ ಶಿಷ್ಟಾಚಾರವೇ ಹೀಗೆ ಇದೆಯೊ ಏನೊ, ಯಾರು ಬಲ್ಲರು. ತಮ್ಮ ಪಕ್ಷದ ಜನರನ್ನುಳಿದು ಇನ್ನಾರನ್ನೂ ಇವರು ನಂಬುವುದಿಲ್ಲವೆಂಬುದಂತೂ ಸರಿಯೆ. ತೋರಿಕೆಗಾಗಿಯಾದರೂ ಒಂದು ನಮಸ್ಕಾರ ಹಾಕಿದರೇನು ಹಾನಿಯೊ ತಿಳಿಯದು. ಅವನು ಸೆರೆಮನೆಗೆ ಬಂದಂದಿನಿಂದ ಅಪ್ಪಿತಪ್ಪಿಯೂದರೂ ತಾನು ಅನುಚಿತವಾದ ರೀತಿಯಲ್ಲಿ ವರ್ತಿಸಿಲ್ಲ. ಅವನು ಕೇಳಿದ ಪುಸ್ತಕಗಳನ್ನೂ ಪತ್ರಿಕೆಗಳನ್ನೂ ಸಕಾಲಕ್ಕೆ ಒದಗಿಸಲು ತಪ್ಪಿರಲಿಲ್ಲ. ತನ್ನಂತೆ ಇನ್ನಾವ ಅಧಿಕಾರಿಯೂ ಇಷ್ಟು ಉದಾರವಾಗಿ ವರ್ತಿಸಲಾರರು. ತನ್ನಂಥವನ ಜತೆಗೂ ಒರಟುತನವೇ ಇವನದು. ಎಂಥ ವಿಲಕ್ಷಣ ಮನುಷ್ಯ.

ಸೆರೆಮನೆಯ ಹೊರಬಾಗಿಲಿನ ಕೆಳಗಡೆಯ ಕಿರುಬಾಗಿಲು ತೆರೆಯಿತು. ತುಂಬಾ ಕಷ್ಟದಿಂದ ತನ್ನ ಭೀಮಕಾಯವನ್ನು ಅದರೊಳಗಿನಿಂದ ದಾಟಿಸಿ ಹೊರಗಡೆ ಬಂದ ಸದಾಶಿವ.

ಹೆಬ್ಬಾಗಿಲಿನೆದುರಿಗೆ ಪಹರೆ ಮಾಡುತ್ತಿದ್ದ ಸಿಪಾಯಿ, ಸದಾಶಿವನನ್ನು ಕಂಡೊಡನೆ ಬಂದೂಕದ ಮೇಲೆ ಕೈಯಿಟ್ಟು ವಂದನೆಯನ್ನರ್ಪಿಸುವ ಭಂಗಿಯಲ್ಲಿ ಸೆಟೆದು ನಿಂತುಕೊಂಡ. ಅವನ ಕಡೆಗೂ ದೃಷ್ಟಿ ಹೊರಳಿಸದೆ ಮುಂದೆ ಸಾಗಿದ ಸದಾಶಿವ.

“ ಸದಾಶಿವಣ್ಣಾ ! ”

ಸೆರೆಮನೆಯ ಹೂದೋಟದಲ್ಲಿ ಕೆಲಸ ಮಾಡುತ್ತಿದ್ದ ಸೆರೆಯಾಳುಗಳು ಅವನನ್ನು ಕಂಡು ಕೆಲಸ ಬಿಟ್ಟೆದ್ದು ವಂದಿಸಿದರು. ಅನೇಕ ಕಣ್ಣುಗಳಲ್ಲಿ ನೀರೂರಿತ್ತು. ಒಂದೂವರೆ ವರ್ಷದ ಅವಧಿಯಲ್ಲಿ ಸೆರೆಯಾಳುಗಳಿಗೆಲ್ಲ ಪ್ರಿಯ ಮೂರ್ತಿಯಾಗಿದ್ದ ಸದಾಶಿವನ ಬಿಡುಗಡೆಯ ವಾರ್ತೆ ಬಂದಾಗ ಅವರಿಗೆಲ್ಲ ಸಂತೋಷವೂ ಆಗಿತ್ತು ; ದುಃಖವೂ ಆಗಿತ್ತು. ಮುನ್ನಾದಿನ ಭಾನುವಾರ; ಕೈದಿಗಳಿಗೆಲ್ಲಾ ಬೆಲ್ಲವೂ ಎಣ್ಣೆಯೂ ದೊರೆಯುವ ದಿನ. ಸದಾಶಿವನನ್ನು ಬೀಳ್ಕೊಳ್ಳುವುದಕ್ಕಾಗಿ ಸೆರೆಯಾಳುಗಳೆಲ್ಲ ಸೇರಿ ರೊಟ್ಟಿಯ ಉಂಡೆ ಮಾಡಿದ್ದರು. ವಾತಾವರಣ ಹಬ್ಬದ ಹರ್ಷದಿಂದ ಕಾವೇರಿತ್ತು. ಎಲ್ಲರ ಎದೆಗಳಲ್ಲೂ

ವ್ಯಸನ ಕುದಿಯುತ್ತಿದ್ದಿತಾದರೂ ಅವನ್ನು ಬಹಿರಂಗಪಡಿಸದೆ ನಗುತ್ತ ಕೆಲೆಯುತ್ತ ಊಟ ಸಾಗಿಸಿದ್ದರು. ಊಟ ಮುಗಿದ ಬಳಿಕ ಕೆಲವರು ಹಾಡು ಹಾಡಿದ್ದರು. ಕೆಲವರು ಕಥೆ ಹೇಳಿದ್ದರು, ಸದಾಶಿವನ ಬಗೆಗೇ ರಚಿತವಾಗಿದ್ದ ಲಾವಣಿಯನ್ನೂ ಹಾಡಿದ್ದರು. ಬೆಳಿಗ್ಗೆ ಅವನು ಹೊರಟುನಿಂತಾಗ ಎಲ್ಲರಿಗೂ ಕೊರಳು ಬಿಗಿದು ಬಂದಿತ್ತು. ಒಬ್ಬಿಬ್ಬರು ಹುಡುಗರಂತೂ ಅವನನ್ನು ಅಗಲಲಾರದೆ, ಅವನನ್ನೇ ತಬ್ಬಿನಿಂತು ಕಂಬನಿಗರೆದಿದ್ದರು. ಸದಾಶಿವ ಮಾತ್ರ ಬೆಟ್ಟದಂತೆ ಅಚಲವಾಗಿದ್ದ. ಕಣ್ಣೀರು ಸುರಿಸುತ್ತಿದ್ದವರ ಬೆನ್ನು ತಟ್ಟಿ, ಸಂತೈಸಿ ಹೊರಟುಬಿಟ್ಟಿದ್ದ.

"ನಮಸ್ತೆ."

"ನಮಸ್ಕಾರ ಸದಾಶಿವಣ್ಣಾ."

"ಸಲಾಂ ಸದಾಶಿವಸಾಬ್."

"ನಮ್ಮನ್ನ ಮರಿಯಬ್ಯಾಡ್ರಿ ಸದಾಶಿವಣ್ಣಾ."

"ಹೋಗಿ ಬರ್ತೀರಾ ಅಣ್ಣಾ ?"

"ನಮಸ್ತೆ."

"ನಮಸ್ಕಾರ"

"ಸಲಾಂ ಸಲಾಂ."

ಸುಪರಿಂಟೆಂಡೆಂಟರಿಗೆ ವಂದಿಸದೆ ಹಾಗೆಯೇ ಹೊರಟು ಬಂದಿದ್ದ ಸದಾಶಿವ ಒಂದೂವರೆ ವರ್ಷ ತನ್ನ ಜತೆಗಾರರಾಗಿದ್ದ ಕೈದಿಗಳಿಗೆ ಮಾತ್ರ ನಮಸ್ಕರಿಸದಿರಲಿಲ್ಲ. ಕಿರುನಗೆ ತುಳುಕಿಸುತ್ತಾ ಎಲ್ಲರಿಗೂ ನಮಸ್ಕಾರ ಸಲ್ಲಿಸಿ ಅವನು ಮುಂದೆ ಸಾಗಿದ.

"ಸದಾಶಿವಣ್ಣನ್ನ ಕರಕೊಂಡು ಹೋಗೂದಕ್ಕೆ ಯಾರೂ ಬಂದಾಂಗ ಕಾಣೂದಿಲ್ಲ," ಎಂದು ಒಬ್ಬ ಸೆರೆಯಾಳು ಹೇಳಿದ.

"ಮೂರು ಮೈಲು ನಡಕೊಂಡೇ ಹೋಗಬೇಕಾಗುತ್ತೈತ್ಯೋ ಏನೋ!" ಎಂದು ಇನ್ನೊಬ್ಬ ಹೇಳಿದ.

"ಈ ಜೇಲಿನ ಮುಂದೆ ಟಾಂಗಾ ಕೂಡ ಸಿಗುವುದಿಲ್ಲ," ಎಂದು ಮತ್ತೊಬ್ಬ ಹೇಳಿದ.

ಆ ಮಾತು ಕಿವಿಗೆ ಬೀಳುತ್ತಲೂ ಸದಾಶಿವ ಕೈಯೆತ್ತಿ ಮೀಸೆಯ ಕುಡಿಯನ್ನು ತಿದ್ದುತ್ತ ತನ್ನಲ್ಲಿಯೆ ಹೇಳಿಕೊಂಡ.

"ಯಾರಾದರೂ ಬಂದಿರಬಹುದೇ?"

ಅವನು ಇನ್ನೂ ಕೊಂಚ ಮುಂದೆ ಬಂದ, ಹೂದೋಟದ ಆಚೆಗಿದ್ದ ಗಿಡಗಳ ಗುಂಪಿನತ್ತ ದೃಷ್ಟಿ ತಿರುಗಿಸಿದ. ಬಿಡುಗಡೆ ಹೊಂದುವ ಕೈದಿಗಳನ್ನು ಬರಮಾಡಿಕೊಳ್ಳುವುದಕ್ಕೂ, ಶಿಕ್ಷೆಯನ್ನನುಭವಿಸುತ್ತಿರುವ ಸೆರೆಯಾಳುಗಳನ್ನು ಭೇಟಿ ಮಾಡುವುದಕ್ಕೂ ಅಲ್ಲಿಗೆ ಬರುವ ಜನರು ಆ ಗಿಡಗಳ ಕೆಳಗಡೆ ಕಾದಿರುವುದು ವಾಡಿಕೆ.

ಸದಾಶಿವ ತನ್ನಲ್ಲಿಯೆ ಕೇಳಿಕೊಂಡ:

"ಯಾರೂ ಬಂದಿಲ್ಲವೆ ?"

ಇಲ್ಲ. ಯಾರೂ ಬಂದಿರಲಿಲ್ಲ.

ತನ್ನ ತಂದೆಯಂತೂ ಅಲ್ಲಿಯ ತನಕ ಬರುವಂತಿರಲಿಲ್ಲ. ಈಚೆಗೆ ಅವರ ದೇಹಸ್ಥಿತಿಯೂ ಸರಿಯಾಗಿರಲಿಲ್ಲ. ವಯಸ್ಸಾಗುತ್ತ ಬಂದ ಹಾಗೆ ಮೈಯಲ್ಲಿ ಶಕ್ತಿಯೂ ಕಡಮೆಯಾಗುತ್ತ ಬಂತು. ತನ್ನ ಬಗೆಗೆ ಮೊದಲು ಅವರಲ್ಲಿದ್ದ ಗಾಢ ಪ್ರೇಮವೂ ಇಂದು ಉಳಿದಿಲ್ಲ. ತನ್ನ ಚಟುವಟಿಕೆಗಳಾವುವೂ ಅವರಿಗೆ ಒಪ್ಪಿಗೆಯಾಗಿಲ್ಲ. ತನ್ನ ವಿಚಾರವಾಗಿ ತುಂಬಾ ಅಸಮಾಧಾನದಿಂದಲೇ ಇದ್ದಾರೆ ಒಂದೂವರೆ ವರ್ಷದ ಅವಧಿಯಲ್ಲಿ ಒಂದು ಸಲವೂ ಅವರು ತನ್ನನ್ನು ಭೇಟಿ ಮಾಡಲು ಬರಲಿಲ್ಲ. ಅಂಥವರು ಇಂದು ತನ್ನನ್ನು ಎದುರುಗೊಳ್ಳಲು ಬರುವುದೆಲ್ಲಿ ಸಾಧ್ಯ!

ಅವನು ತನ್ನಲ್ಲಿಯೆ ಹೇಳಿಕೊಂಡ:

"ಮಾವಾ ಅಂತೂ ಬರುವುದು ಸಾಧ್ಯವೇ ಇಲ್ಲ."

ಅವರೂ ಬರುವಂತಿರಲಿಲ್ಲ. ತನ್ನ ಚಟುವಟಿಕೆಗಳು ಅವರಿಗೂ ಒಪ್ಪಿಗೆಯಾಗಿರಲಿಲ್ಲ. ಅವರಿಂದ ಒಂದೆರಡು ಪತ್ರಗಳೇನೊ ಬಂದಿದ್ದುವಾದರೂ ಅವುಗಳಲ್ಲಿ ಆತ್ಮೀಯತೆಯ ಧ್ವನಿಯಿರಲಿಲ್ಲ. ಮನೆಯವರ ಕ್ಷೇಮಸಮಾಚಾರದ ಕೇವಲ ಔಪಚಾರಿಕ ಪತ್ರಗಳವು, ಅಷ್ಟೆ. ತಾನು ಅವರ ಸಂಬಂಧಿಕನೆಂದು ಒಪ್ಪಿಕೊಳ್ಳುವುದಕ್ಕೂ ಸಹ ಅವರಿಗೆ ಭೀತಿಯನ್ನಿಸುತ್ತಿದ್ದುದು ಸ್ಪಷ್ಟ

ವಾಗಿತ್ತು. ಅಂತೆಯೆ, ತಾನು ಬಂಧಿಸಲ್ಪಟ್ಟಂದಿನಿಂದ ಅವರು ದೂರ ದೂರ ದಲ್ಲೇ ಇದ್ದುಬಿಟ್ಟಿದ್ದರು. ಹೈಕೋರ್ಟಿನ ವರೆಗೂ ಹೋಗಿ ತನ್ನನ್ನು ಬಿಡಿಸಿ ಕೊಳ್ಳಲು ಅವರು ಯತ್ನಿಸಬಹುದಾಗಿತ್ತು. ಸ್ವತಃ ಅವರೇ ಅಡ್ವೊಕೇಟರಾ ದುದರಿಂದ ಅಂಥ ವಿಶೇಷ ಖರ್ಚೂ ಆಗುತ್ತಿರಲಿಲ್ಲ. ಅವರು ಮನಸ್ಸು ಮಾಡಿ ದ್ದರೆ ಆಗಲೆ ತನ್ನ ಬಿಡುಗಡೆಯಾಗುವ ಹಾಗಿತ್ತು. ಮುಖ್ಯ ಅವರಿಗೆ ಅದೆಲ್ಲ ತಾಪತ್ರಯ ಬೇಕಿರಲಿಲ್ಲ. ಬಿಡುಗಡೆಯಾಗಿ ಹೊರಗೆ ಹೋಗಿ ಕೆಲಸ ಮಾಡುವ ಅಪೇಕ್ಷೆ ತನಗಿದ್ದಿತಾದರೂ ವಿಧಿಯಿಲ್ಲದೆ ಸೆರೆಮನೆಯಲ್ಲಿಯೆ ಕೊಳೆಯಬೇಕಾಗಿ ಬಂದಿತ್ತು. ಮಾವ ತನ್ನ ಕರ್ತವ್ಯ ಮಾಡದಿರಲು ಭೀತಿಯೇ ಮುಖ್ಯ ಕಾರಣ ವಾಗಿತ್ತು. ಮೊದಲಿನಿಂದಲೂ ಅವರು ಹಾಗೆಯೆ. ಪುಕ್ಕ. ಮಹಾ ಪುಕ್ಕ. ಗಂಡಸಿನಲ್ಲಿರಬೇಕಾದ ಎದೆಗಾರಿಕೆಯಿಲ್ಲ, ಧೈರ್ಯವಿಲ್ಲ, ದೃಢತೆಯಿಲ್ಲ. ಹುಟ್ಟಿ ದಂದಿನಿಂದ ಹಾಗೆ. ಸಾಯುವ ವರೆಗೂ ಹಾಗೇ. ಇಂಥವರು ತನ್ನನ್ನು ಎದುರುಗೊಳ್ಳಲು ಬರುವುದುಂಟೇ–ಸೆರೆಮನೆಯ ಬಾಗಿಲಿಗೆ? ತನ್ನ ಮೇಲಿನ್ನೂ ಪೋಲೀಸರ ವಕ್ರದೃಷ್ಟಿಯಿರುವ ವಿಚಾರವನ್ನು ಅವರು ಬಲ್ಲರು. ಹಿಂದಿನಂತೆ ತಾನಿಂದು ' ದೇಶಭಕ್ತ ' ಸೆರೆಯಾಳುವಲ್ಲ, ಸತ್ಯಾಗ್ರಹಿಯಲ್ಲ. ಇಂದು ಸದಾ ಶಿವನೊಬ್ಬ ಕ್ರಾಂತಿಕಾರ. ಕಾಂಗ್ರೆಸ್ ಸರಕಾರದ ದೃಷ್ಟಿಯಲ್ಲಿ ಅವನೊಬ್ಬ 'ಹಿಂಸಾವಾದಿ' 'ಗುಂಡಾ'. ಇಂಥ ಭಯಂಕರ ವ್ಯಕ್ತಿಯನ್ನು ಬರಮಾಡಿಕೊ ಳ್ಳಲು ತನ್ನ ಪುಕ್ಕಲು ಹೃದಯದ ಮಾವ, ಕಾಂಗ್ರೆಸ್ ಮುಖಂಡನಾಗಿರುವ ಮಾವ ಬರುವುದುಂಟೇ ?

ಸದಾಶಿವ ಕೊಂಚ ನಕ್ಕು ಮತ್ತೆ ತನ್ನನ್ನು ತಾನೇ ಕೇಳಿಕೊಂಡ:

"ಗುಂಪಿನ ಜನರಲ್ಲಿ ಯಾರಾದರೂ ಬಂದಿರಬಹುದೇ ?"

ಇಲ್ಲ. ಅವರೂ ಬರುವಂತಿರಲಿಲ್ಲ. ಗುಂಪಿನ ನಾಯಕಮಣಿ ಸ್ವಾಮಿ ಇನ್ನೂ ಸೆರೆಮನೆಯಲ್ಲಿಯೇ ಇದ್ದಾರೆ. ಹಿಂಬಾಲಕರನೇಕರೂ ಇನ್ನೂ ಕೈದಿ ಗಳು. ಕೆಲವರಿನ್ನೂ ಅಜ್ಞಾತವಾಸಿಗಳು; ತನ್ನನ್ನೆದುರುಗೊಳ್ಳಲು ಬರುವು ದೆಂದರೆ ಬಂಧನವನ್ನು ತಾವೇ ಬರಮಾಡಿಕೊಂಡ ಹಾಗೆ. ತಾನು ಹೊರ ಬರುವುದನ್ನೇ ಕಾಯುತ್ತ ಕುಳಿತಿರಲು ಸಾಕು ಸಿ.ಐ.ಡಿ. ಗಳ ತಂಡ. ತನ್ನ ಪ್ರತಿಯೊಂದು ಚಲನವಲನವನ್ನೂ ಅದು ನಿರೀಕ್ಷಿಸುವುದು, ತನ್ನನ್ನು ಕಾಣಲು

ಬಂದವರ ಮೇಲೆಲ್ಲ ಕಣ್ಣಿಡುವುದು, ಅವರ ಹಿಂದೆಯೂ ನೆರಳಿನಂತೆ ತಿರುಗುವುದು, ಸಾವಿರ ಕಿರುಕುಳಗಳಿಗೀಡುಮಾಡುವುದು. ತನ್ನನ್ನು ಭೇಟಿಯಾಗಲು ಬರುವುದಕ್ಕೂ ಬಹಳ ಸಾಹಸ ಬೇಕು. ಅಂಥ ಸಾಹಸದ ಗೆಳೆಯರು ವಿರಳವೇ.

ಅವನು ರಸ್ತೆಗೆ ಬಂದು ಮುಟ್ಟಿದ. ಎದುರಿಗೆ ಅಂಗಡಿಗಳ ಸಾಲು. ಕಿರಾಣಿ ಸಾಮಾನಿನಂಗಡಿಗಳು, 'ಚಾ ಕಾಫಿ ದುಕಾನ'ಗಳು, 'ಹೇರ್ ಕಟಿಂಗ್ ಸೆಲೂನು'ಗಳು, ಸಿಂಪಿಗರ ಅಂಗಡಿಗಳು. ಬೀಡಿ ಸಿಗರೇಟ್ ವಾಸನೆ, ಚರಂಡಿ ನೀರಿನ ವಾಸನೆ, ಹುಡುಗರು ಹರಡಿದ್ದ ಮಲಮೂತ್ರಗಳ ವಾಸನೆ. "ದೋ ಇಸಂ ಚಾರ್ ಆನಾ!" ಚಹದಂಗಡಿಯ ಆಳಿನ ಕರ್ಕಶ ಕೂಗು, "ಮೇರೀ ಪ್ಯಾರೀತೋ ಕಭೀ ನ ಭೂಲೂಂಗಾ." ತಾರ ಸ್ವರದಲ್ಲಿ ಕಿರಿಚುವ ಗ್ರಾಮಫೋನ್, ಚಹದಂಗಡಿಗಳಲ್ಲಿನ ಹೊಲಸು ಮೇಜುಗಳ ಮೇಲೆ ಕೈಯೂರಿ ಕುಳಿತು ಬೀಡಿಗಳ ಹೊಗೆಯನ್ನೆಳೆಯುತ್ತಾ ಹಾಡಿನ ರಾಗಕ್ಕೆ ತಲೆದೂಗುತ್ತಿದ್ದ ಹರಕು ಬಟ್ಟೆಯ ಜನರು. ಸದಾಶಿವ ತಿರಸ್ಕಾರದಿಂದ ಉಗುಳಿದ. "ಜನಜಂಗುಳಿ ಅಂದರೆ ಯಾವಾಗಲೂ ಹೀಗೇ. ತಮ್ಮ ಬಡತನ, ಹೀನಸ್ಥಿತಿ, ಹರಕು ಬಾಳಿನ ಅರಿವಿಲ್ಲ. ಅದನ್ನು ಸುಧಾರಿಸಿಕೊಳ್ಳುವ ವಿಚಾರವಿಲ್ಲ. ಯಾವಾಗಲೂ ಚಹದಂಗಡಿಯ ಸಹವಾಸ. ಬೀಡಿ ಸಿಗರೇಟು ಚಹ ಚೂಡಾಗಳ ದುರ್ವ್ಯಸನ. ಪ್ಯಾರಿಯರ ಸಂಗೀತದಲ್ಲಿ ಆಸಕ್ತಿ. ಥೂ! ಇವರ ಬಾಳೋ... ಇವರ ಪ್ಯಾರಿಯರೋ . ಇವರ ಮೊಸಡಿಗಳೋ...." ಹಾಗೆ ಹೇಳಿಕೊಳ್ಳುತ್ತಾ ಮತ್ತೊಮ್ಮೆ ಉಗುಳಿದ ಸದಾಶಿವ.

ಆ ವೇಳೆಗೆ ಎದುರಿನಿಂದ ಒಂದು ಮೋಟಾರು ಸೈಕಲ್ ಫಟ್‌ಫಟೆಂದ್ದ ಸದ್ದು ಮಾಡುತ್ತಾ ಪೂರ್ಣ ವೇಗದಲ್ಲಿ ಓಡಿ ಬರುತ್ತಿದ್ದುದ್ದನ್ನು ಕಂಡು ಅತ್ತ ತಿರುಗಿದ ಸದಾಶಿವ. ರಸ್ತೆಯಲ್ಲಿನ ಧೂಳನ್ನು ಹಾರಿಸುತ್ತಾ ಬಿಂಕದಿಂದ ಧಾವಿಸಿ ಬರುತ್ತಿದ್ದ ಆ ಯಂತ್ರ ದೃಷ್ಟಿಗೆ ಬೀಳುತ್ತಲೂ ಅವನ ಮನಸ್ಸು ಕೊಂಚ ಉಲ್ಲಸಿತವಾಯಿತು. ಗಂಡಾಂತರಗಳ ಬಗೆಗೆ ಕೊಂಚವೂ ಯೋಚಿಸದೆ ಧೃತಗತಿಯಿಂದಲೂ ನಿರ್ಲಕ್ಷದಿಂದಲೂ ಮುನ್ನುಗ್ಗುವ ಸ್ವಭಾವದ ಸದಾಶಿವನಿಗೆ ತನ್ನಂತೆಯೆ ಸಾಹಸಪ್ರಿಯರಾಗಿದ್ದವರನ್ನು ಕಂಡಾಗಲೆಲ್ಲ ಪರಮಸಂತೋಷವಾಗುತ್ತಿತ್ತು.

ಮೋಟಾರು ಸೈಕಲ್ಲಿನ ಮೇಲಿದ್ದ ಯುವಕನನ್ನು ದೂರದಿಂದಲೇ ಗುರುತಿಸಿದ ಸದಾಶಿವ. ಅವನು ಕಲ್ಲನಗೌಡ. ನಲವತ್ತೆರಡರ ಚಳುವಳಿಯ ಕಾಲಕ್ಕೆ ಸದಾಶಿವನ ಗುಂಪಿನಲ್ಲಿ ಸೇರಿ ಹಲವಾರು ಸಾಹಸಕೃತ್ಯಗಳಲ್ಲಿ ಭಾಗವಹಿಸಿದ್ದವನು. ಗುಂಪಿನ ನಾಯಕರ ಬಂಧನ ನಡೆದಾಗ ಕಲ್ಲನಗೌಡನೂ ಸಿಕ್ಕಿಬಿದ್ದಿದ್ದನಾದರೂ ಅವನ ವಿರುದ್ಧ ಸಾಕ್ಷಿ ಪುರಾವೆ ದೊರೆತಿರಲಿಲ್ಲವಾದುದರಿಂದ ಶಿಕ್ಷೆಗೊಳಗಾಗದೆ ಉಳಿದುಕೊಂಡಿದ್ದ.

ಕಿವಿಗಳನ್ನು ಕೊರೆಯುವಂತೆ ಸದ್ದು ಮಾಡುತ್ತ ಮೋಟಾರು ಸೈಕಲ್ ನಿಂತುಕೊಂಡಿತು. ಕಲ್ಲನಗೌಡ ಚಪಲತೆಯಿಂದ ಕೆಳಗೆ ಹಾರಿ ಬಲಗೈ ಎತ್ತಿ ಸೈನಿಕ ಸಲಾಮು ಸಲ್ಲಿಸಿದ.

"ಅಂತೂ ನೀನಾದರೂ ಬಂದೆಯಲ್ಲಾ !" ಎಂದ ಸದಾಶಿವ.

ಕಲ್ಲನಗೌಡ ನಸುನಾಚಿ, ದೃಷ್ಟಿಯನ್ನು ನೆಲದ ಕಡೆ ತಿರುಗಿಸಿ ಹೇಳಿದ :

"ಹೊರಟು ಬಹಳ ಹೊತ್ತಾಗಿತ್ತು ಸದಾಶಿವಣ್ಣಾ. ಪೆಟ್ರೋಲ್ ತುಂಬಿಸಿಕೊಳ್ಳುವುದಕ್ಕೆ ನಿಂತು ತಡ ಆಯ್ತು."

"ಅಂತೂ ಬಂದೆಯಲ್ಲಾ !"

ಕಲ್ಲನಗೌಡ ಲಗುಬಗೆಯಿಂದ ಮೋಟರ್‌ಸ್ಟಾರು ಮಾಡಿದ. ಬ್ಯಾಗನ್ನು ತೊಡೆಯ ಮೇಲಿರಿಸಿಕೊಂಡು ಹಿಂಬದಿಯ ಜಾಗದಲ್ಲಿ ಕುಳಿತ ಸದಾಶಿವ. ಸೈಕಲ್ಲು ತಿರುಗಿಕೊಂಡು ಕಳ್ಳೀಕಾಯಿ ನಗರದತ್ತ ಧಾವಿಸತೊಡಗಿತು.

ನಗರದ ಗಡಿ ಸಮೀಪಿಸುವ ವರೆಗೆ ಇಬ್ಬರೂ ಮೌನವಾಗಿದ್ದರು. ತಾನಾಗಿಯೆ ಮಾತಿಗಾರಂಭಿಸಲು ಕಲ್ಲನಗೌಡನಿಗೆ ಭಯ. ಸದಾಶಿವನಾದರೋ ತುಟಿ ಬಿಚ್ಚದೆ ಕುಳಿತುಕೊಂಡಿದ್ದ.

"ಎಲ್ಲಿಗೆ ಹೊಡೀಲಿ ಸದಾಶಿವಣ್ಣಾ ?"

"ನೀನೀಗ ಇರುವದೆಲ್ಲಿ ?"

"ಮೋಟಾರು ಸ್ಟ್ಯಾಂಡಿನ ಹತ್ತಿರ ಒಂದು ರೂಂ ಮಾಡಿಕೊಂಡಿದ್ದೇನೆ."

"ರೂಮು ?"

"ಹೌದಣ್ಣಾ."

"ಮನೆಯವರೋ ?"

"ಅವರೆಲ್ಲಾ ಊರಲ್ಲೇ ಇದಾರಣ್ಣಾ "

"ಆಯ್ತು, ರೂಮಿಗೇ ನಡೆ."

ನಗರದ ತಾರು ರಸ್ತೆಯನ್ನು ಹಿಡಿದು ಓಡತೊಡಗಿತು ಮೋಟಾರು ಸೈಕಲ್. ಇನ್ನೂ ಹತ್ತುಗಂಟೆಯ ಸಮಯ. ಚಳಿಗಾಲದ ದಿನವಾದುದರಿಂದ ತಣ್ಣನೆಯ ಗಾಳಿ ಬೀಸುತ್ತಿತ್ತು. ಬಂಗಲೆಗಳನ್ನು ಮನೆಗಳನ್ನು ಹಿಂದೆ ಹಾಕುತ್ತ ಧಾವಿಸುತ್ತಿತ್ತು ಸೈಕಲ್. ಚಹದಂಗಡಿಗಳು, ಬೀಡಿ ಸಿಗರೇಟು ಪಾನ್‌ಬೀಡಾ ಅಂಗಡಿಗಳು, ರೇಡಿಯೋ ಗಾನ. ಚೌಕದಲ್ಲಿ ನಿಂತು ವಾಹನಗಳಿಗೆ ದಾರಿತೋರಿಸುತ್ತಿದ್ದ ಪೋಲೀಸ್ ಸಿಪಾಯಿ. ಮಡಿ ಮಾಡಿದ ಸೂಟು ಧರಿಸಿ ಬಿಂಕದಿಂದ ಓಡಿಯಾಡುತ್ತಿದ್ದ ಯುವಕರು, ತೆಳ್ಳನೆಯ ಸೀರೆಯುಟ್ಟು ಶರೀರದ ಉಬ್ಬುತಗ್ಗುಗಳನ್ನು ಪ್ರದರ್ಶಿಸುತ್ತಾ ಒಯ್ಯಾರದಿಂದ ಹೊರಟಿದ್ದ ಯುವತಿಯರು. ಸಿನಿಮಾಗಳ ಪ್ರಚಾರಕಾರ್ಯದಲ್ಲಿ ನಿರತವಾಗಿದ್ದ ಗೋಡೆಗಳು. ಕಣ್ಣುಗಳಲ್ಲಿ ಕಾಮಾತುರತೆಯನ್ನು ತುಳುಕಿಸುತ್ತ ನಿಂತಿದ್ದ ಬಜಾರಿಯರ ಚಿತ್ರಗಳು, ಟಾಯಿಲೆಟ್ ಸೋಪಿನ ವರ್ಣರಂಜಿತ ಜಾಹಿರಾತು, ಗುಲಾಬಿಗೆನ್ನೆಯ ಸುಂದರಿಯ ಚಿತ್ರ. ಸೈಕಲ್ ಮುಂದೆ ಸಾಗುತ್ತಿತ್ತು. ಇನ್ನೊಂದು ಚೌಕ. ಕಳ್ಳೇಕಾಯಿ ನಗರದ ಪ್ರಖ್ಯಾತ ದೇವಾಲಯ. ಬಳೆಯಂಗಡಿಗಳು, ಫ್ಯಾನ್ಸಿ ವಸ್ತುಗಳ ಅಂಗಡಿಗಳು, ಸೀರೆಗಳ ಅಂಗಡಿಗಳು, ಸ್ಟೇಶನರಿ ಅಂಗಡಿಗಳು, ಔಷಧದಂಗಡಿಗಳು ರಸ್ತೆಯ ಇಕ್ಕೆಲಗಳಲ್ಲಿ ಕುಳಿತು ಭಿಕ್ಷೆ ಬೇಡುತ್ತಿದ್ದ ಕುರುಡರು ಕುಂಟರು ಅಂಗವಿಕಲರ ತಂಡ 'ಹೇರ್ ಕಟಿಂಗ್ ಸೆಲೂನು' ಗಳು, ಮತ್ತೆ ಚಹದಂಗಡಿಗಳು, ಚಹದಂಗಡಿಗಳು, ಚಹದಂಗಡಿಗಳು. ಎಲ್ಲ ಕಡೆಗೂ ರೇಡಿಯೋವಿನ ಕೀರಲುರಾಗ ಸಿನಿಮಾಗಳ ಹೊಲಸು ಹಾಡುಗಳ ಹಾರಾಟ. ಹೋಗುವ ಜನ, ಬರುವ ಜನ. ಯುವತಿಯರನ್ನು ನುಂಗಿಬಿಡುವಂತೆ ದಿಟ್ಟಿಸುವ ಯುವಕರು; ಕಡೆಗಣ್ಣು ಬಾಣಗಳಿಂದ ಯುವಕರನ್ನು ಗಾಯಗೊಳಿಸುವ ಯುವತಿಯರು. ಮನೆಬಾಗಿಲುಗಳಲ್ಲಿ ನಿಂತು ಹೋಗಿಬರುವವರನ್ನು ದಿಟ್ಟಿಸುವ ಹುಡುಗಿಯರು. ಹೈಸ್ಕೂಲಿಗೆ ಹೋಗುವ ವಿದ್ಯಾರ್ಥಿಗಳು ಕಾಲೇಜಿಗೆ ಹೋಗುವ ವಿದ್ಯಾರ್ಥಿಗಳು, ವಿದ್ಯಾರ್ಥಿನಿಯರು ದೇಶದ ಭಾವಿ ಆಧಾರಸ್ಥಂಭಗಳು.....ಸದಾಶಿವ ಉಗುಳಿದ...ಜುಗುಪ್ಸೆಯಿಂದ ಉಗುಳಿದ.

ಅವನ ಉಗುಳಿನಿಂದಾದ ಸದ್ದು ಕೇಳಿ, ಬೀದಿಯಲ್ಲಿ ನಡೆದಿದ್ದ ಯುವತಿಯೊಬ್ಬಳು ಅತ್ತ ತಿರುಗಿ, ಬುಶ್‌ಕೋಟು ಪ್ಯಾಂಟುಗಳಲ್ಲಿ ಎದ್ದು ಕಾಣುತ್ತಿದ್ದ ಅವನ ಭವ್ಯಾಕೃತಿಯನ್ನು ಕಂಡು ಚಕಿತಳಾದಳು. ಅಷ್ಟರಲ್ಲಿ ಮುಂದೆ ಸಾಗಿತ್ತು ಸೈಕಲ್.

ಮೋಟಾರು ನಿಲ್ದಾಣದ ಸಮೀಪದಲ್ಲಿ, ಭೋಜನಾಲಯವೊಂದರ ಪಕ್ಕದಲ್ಲಿತ್ತು ಕಲ್ಲನಗೌಡನ ಕೊಠಡಿ ಬಾಗಿಲಲ್ಲಿ ಇಪ್ಪತ್ತರ ಪ್ರಾಯದ ಯುವಕನೊಬ್ಬ ನಿಂತು ಎದುರಿನ ಮನೆಯ ಕಡೆಗೇ ದಿಟ್ಟಿಸುತ್ತಿದ್ದ. ಬೀದಿಗಳಲ್ಲಿನ ನೂರಾರು ಯುವಕರ ಹಾಗೆ ಅವನೂ ಚೆನ್ನಾಗಿ ಮಡಿಮಾಡಿದ ಶರ್ಟು ಪ್ಯಾಂಟು ಧರಿಸಿದ್ದ. ಬ್ರಿಲಿಯಂಟೈನ್ ಪೂಸಿ ಕ್ರಾಪ್ ಕೂದಲು ಮಿನುಗುವಂತೆ ತಲೆ ಬಾಚಿಕೊಂಡಿದ್ದ, ಕಾಲುಗಳಲ್ಲಿ ಕನ್ನಡಿಯಂತೆ ಹೊಳೆಯುವ ಆಕ್ಸ್‌ಫರ್ಡ್ ಷೂ ಹಾಕಿಕೊಂಡಿದ್ದ, ಬಾಗಿಲಿಗೊರಗಿ ನಿಂತು, ಸಿಗರೇಟಿನ ಹೊಗೆಯೆಳೆಯುತ್ತಾ ಮುಖದ ಮೇಲೆ ಮಂದಹಾಸ ತುಳುಕಿಸುತ್ತ ಎದುರು ಮನೆಯ ಕಿಟಕಿಯ ಕಡೆ ದಿಟ್ಟಿಸುತ್ತಿದ್ದ. ಸದಾಶಿವನ ದೃಷ್ಟಿ ಸಹಜವಾಗಿಯೆ ಅತ್ತ ಇತ್ತ ಹೊರಳಿದಾಗ ಎದುರು ಮನೆಯ ಕಿಟಕಿಯಲ್ಲಿ ಪ್ರೌಢ ಸ್ತ್ರೀಯೊಬ್ಬಾಕೆ ಆ ಯುವಕನನ್ನು ಕಂಡು ನಗುತ್ತ ನಿಂತುಕೊಂಡಿದ್ದುದು ಕಾಣಿಸಿತು.

ಬಂದು ನಿಂತ ಮೋಟಾರು ಸೈಕಲನ್ನೂ ಅದರಿಂದಿಳಿಯುವವರನ್ನೂ ಕಂಡೊಡನೆ ಕಿಟಕಿಯಲ್ಲಿನ ಹೆಣ್ಣು ತ್ವರೆಯಿಂದ ಮರೆಯಾದಳು. ಕೊಟಡಿಯ ಬಾಗಿಲಲ್ಲಿ ನಿಂತಿದ್ದ ಯುವಕನೂ ತುಂಟತನದ ನಗು ಬೀರುತ್ತಾ ಒಳಗಡೆ ನುಸುಳಿಕೊಂಡ. ಸದಾಶಿವನ ತುಟಿಗಳ ಮೇಲೆ ಅತ್ಯಂತ ಕ್ರೂರವಾದ ಕಟು ನಗು ಮೂಡಿ ಮಾಯವಾಯಿತು.

ಸ್ವಲ್ಪ ಚಿಕ್ಕದೇ ಎನ್ನುವಂತಿದ್ದ ಕೊಟಡಿ ಒಂದು ಗೋಡೆಗೆ ಹೊಂದಿಕೊಂಡು ಕಬ್ಬಿಣದ ಮಂಚ, ಅದರ ಮೇಲೆ ಹಾಸುಗೆ. ಹತ್ತಿರದಲ್ಲೊಂದು ಪುಟ್ಟ ಮೇಜು, ಎರಡು ಕುರ್ಚಿಗಳು. ಮೇಜಿನ ಮೇಲೊಂದು ಟೈಂಪೀಸ್, ಒಂದು ಕನ್ನಡಿ, ತುಂಬಿದ ಸ್ತನಗಳನ್ನು ಪ್ರದರ್ಶಿಸುತ್ತ ನಿಂತ ವಿದೇಶೀಯ ನಟಿಯೊಬ್ಬಳ ಚಿತ್ರದ ಕಟ್ಟು, ದೇಶೀಯ ನಟಿಯೊಬ್ಬಳ ದೇಹದ ಮೋಹಕತೆಯನ್ನು ಮೂಬಣ್ಣಗಳಲ್ಲಿ ತೆರೆದು ತೋರಿಸುವ ರಕ್ಷಾಪತ್ರವನ್ನೊಳಗೊಂಡ

ಸಿನಿಮಾ ಪತ್ರಿಕೆಯೊಂದು, ಕೆಲವು ಸಿನಿಮಾ ಗೀತೆಗಳ ಪುಸ್ತಕಗಳು. ಗೋಡೆಗಳ ಮೇಲೆ ಉಬ್ಬಿಡೆದೆಗಳ, ಚುಚ್ಚು ನೋಟಗಳ ಸಿನಿಮಾ ತಾರೆಯರ ಚಿತ್ರಗಳು ಅವುಗಳ ಮಧ್ಯೆ ಹಾಸ್ಯಾಸ್ಪದವಾಗಿ ಕಾಣಿಸುವ ಜವಾಹರಲಾಲ ನೆಹರೂ ಚಿತ್ರವೊಂದು. ಮೇಜಿನ ಮೇಲಿದ್ದ ಗೂಡಿನಲ್ಲಿ ಸುಗಂಧದೆಣ್ಣೆಯ ದೊಡ್ಡ ಸೀಸೆ, ಬ್ರಿಲಿಯಂಟ್ಯೆನ್ ಸೀಸೆ, ಸ್ನೋ ಡಬ್ಬ, ಪೌಡರ್ ಡಬ್ಬ. ಅಮೆರಿಕದಲ್ಲಿ ತಯಾರಾದ ಟೂತ್‌ಪೇಸ್ಟ್ ಟ್ಯೂಬು. ಗೋಡೆಗಿದ್ದ ಬೀರುವಿನಲ್ಲಿ ಮಡಿ ಮಾಡಿದ ಬಟ್ಟೆಗಳು. ಬಾಗಿಲ ಬಳಿ ಪಾದರಕ್ಷೆಗಳ ರಾಶಿ.

ಕೈಲಿದ್ದ ಬ್ಯಾಗನ್ನು ಮಂಚದ ಮೇಲೆಸೆದು, ಹಾಸುಗೆಯ ಸುರುಳಿಗೊರಗಿ ಕುಳಿತು ಒಂದು ಕ್ಷಣ ಕಣ್ಮುಚ್ಚಿಕೊಂಡ ಸದಾಶಿವ.

"ಇವರು ಮಗದುಮ್ ಅಂತ. ಕಾಲೇಜಿನಲ್ಲಿ ಕಲೀತಿದಾರೆ. ಇವರೇ ಸದಾಶಿವಣ್ಣ" ಕಲ್ಲನಗೌಡ ಪರಿಚಯದ ಶಾಸ್ತ್ರ ಮುಗಿಸಿದ.

ಉರಿಯುತ್ತಿದ್ದ ಸಿಗರೇಟನ್ನು ತುಟಿಗಳಲ್ಲಿ ಕಚ್ಚಿ ಹಿಡಿದಿದ್ದ ಹಾಗೆಯೆ ಮಗದುಮ್ ಹೇಳಿದ: "ಗ್ಲ್ಯಾಡ್ ಟು ಸೀ ಯೂ ಮಿಸ್ಟರ್ ಸದಾಶಿವ !"

ಸದಾಶಿವ ಕತ್ತು ಕೊಡವಿ ಹೇಳಿದ:

"ಕಾಲೇಜು ವಿದ್ಯಾರ್ಥಿ ಅಂತೀಯಾ ?"

"ಹೌದು. ಈ ವರ್ಷ ಇಂಟರಿನಲ್ಲಿದ್ದಾರೆ."

"ಚಿಂತೆಯಿಲ್ಲ. ಇಂಗ್ಲೀಷು ಚೆನ್ನಾಗಿ ಮಾತಾಡುತಾರೆ. ಇಂಟರ್ ಅಂದೆಯಾ? ಇಂಟರಿಗೆ ಈ ಸಲ ಈ ಸಿನಿಮಾ ಪತ್ರಿಕೆಯೇ ಟೆಕ್ಸ್ಟ ಆಗಿದೆಯೋ ಏನೊ!."

ಮಗದುಮನಿಗೆ ಮುಖಭಂಗವಾದಂತಾಯಿತು. ಅವನು ಕುರ್ಚಿಯಲ್ಲಿ ಸೆಟೆದು ಕುಳಿತು, ಎದುರಿನ ಗೋಡೆಯ ಮೇಲಿನ ಸಿನಿಮಾ ತಾರೆಯರ ಮುದ್ದು ಮುಖಗಳನ್ನು ದಿಟ್ಟಿಸುತ್ತ ಸಿಗರೇಟಿನ ಹೊಗೆಯೆಳೆಯತೊಡಗಿದ.

ಅರ್ಥ ತನ್ನಷ್ಟಕ್ಕೇ ಎನ್ನಿಸುವಂತೆ ಸದಾಶಿವ ಮಾತನಾಡಿದ:

"ಈ ರೂಮು ನೋಡಿದರೆ ಯಾರೋ ಸಿನಿಮಾ ನಟರದಿದ್ದಂತೆ ಕಾಣುತ್ತದೆ. ಇಂದಿನ ಕಾಲೇಜು ವಿದ್ಯಾರ್ಥಿಗಳಿಗೆಲ್ಲಾ ಕ್ಲಾಸಿನಲ್ಲಿ ಬರಿಯ ಸಿನಿಮಾ ವಿಚಾರ ಕಲಿಸುತ್ತಿಲ್ಲವಷ್ಟೆ ?"

"ಸ್ವಂತದ ಹೊಲವೇನು ?"

"ಅಲ್ಲ. ಬೇರೆಯವರದನ್ನು ಲಾವಣಿಗೆ ಹಿಡಿದಿದಾರೆ."

"ಇವನಿಗಿಲ್ಲಿ ತಿಂಗಳಿಗೆಷ್ಟು ಖರ್ಚು ಬರುತ್ತಿರಬಹುದು ?"

"ನನಗೂ ನೆಟ್ಟಗೆ ಗೊತ್ತಿಲ್ಲ. ಐವತ್ತು ಅರುವತ್ತು ರೂಪಾಯಿಯಾದರೂ ಬರುತಿದ್ದೀತು."

"ಇವನ ಈ ಷೋಕಿಗೆ ಅರುವತ್ತು ಯಾವ ಮಣ್ಣಿಗೆ ಸಾಕಾದೀತು. ಏನಿಲ್ಲ ಅಂದರೂ ನೂರು ರೂಪಾಯಿಯಾದರೂ ತರಿಸುತ್ತಿರಬಹುದು ಈತ"

"ಇರಬಹುದು. ಅವರಪ್ಪಗೂ ಅಂಥ ತ್ರಾಸ ಏನೂ ಇಲ್ಲ. ತೋಟ ಗೀಟ ಮಾಡಿದಾರೆ. ಕಬ್ಬು ತಂಬಾಕು ಬೆಳೀತಾರೆ. ಬೆಲ್ಲಕ್ಕೂ ತಂಬಾಕಿಗೂ ಬಹಳ ಲಾಭ ಈಗ."

"ಲಾಭ...ಬಹಳ ಲಾಭ...ತಂಬಾಕು ...ಬೆಲ್ಲ ! ಆ ಬೆಲ್ಲದಿಂದ ಬಂದ ಹಣ ಇಲ್ಲಿ ಈ ಹೆಣ್ಣಿನ ತುಟಿ ಬೆಲ್ಲಕ್ಕಾಗಿ ಕರಗಿ ಹೋಗುತ್ತಿದ್ದೀತು. ಅಂ ಹಂ ಹಂ ಹಂ ಹಂ....ಇರಲಿ. ಇರಲಿ ಹೂಂ. ನಿನ್ನ ಸುದ್ದಿಯೇನು ? ಈಗ ಏನು ಮಾಡಿಕೊಂಡಿದ್ದೀ ?"

ಲಜ್ಜೆ ಬೆರೆತ ಧ್ವನಿಯಲ್ಲಿ ಕಲ್ಲನಗೌಡ ಹೇಳಿದ :

"ಏನು ಮಾಡಲಿ ?"

"ಏನೂ ಇಲ್ಲ ಹಾಗಾದರೆ....?"

"ನಾನು ಮಾಡಬೇಕಾದರೂ ಏನು ಸದಾಶಿವಣ್ಣಾ ? ಚಳುವಳಿಯಂತೂ ಎಂದೋ ಮುಗಿದು ಹೋಯ್ತು. ಸ್ವಾಮಿಯ ಗುಂಪೆಲ್ಲಾ ಜೇಲು ಸೇರಿತು. ನಾನಾದರೂ ಏನು ಮಾಡಲಿ ?"

"ಹೂಂ. ಸರಿ. ಸರಿ. ನೀನಾದರೂ ಏನು ಮಾಡಬೇಕು ? ಒಳ್ಳೆಯ ಪ್ರಶ್ನೆ. ನಿಜ, ನಿಜ. ಊಟಕ್ಕೇನು ಮಾಡುತ್ತಿದ್ದೀ ?"

ಕಲ್ಲನಗೌಡನ ಮುಖಕ್ಕೆ ರಕ್ತವೇರಿತು. ಆತ ತಲೆ ತಗ್ಗಿಸಿ ಮೌನವಾಗಿ ಕುಳಿತುಬಿಟ್ಟ.

"ಹೂಂ. ಗೊತ್ತಾಯಿತು, ಗೊತ್ತಾಯಿತು. ಎಲ್ಲರೂ ಏನು ಮಾಡುತ್ತಿರುವರೋ ಅದನ್ನೇ ನೀನೂ ಮಾಡುತ್ತಿರಬಹುದು. ಸ್ವಾತಂತ್ರ್ಯ ಬಂತು.

ಚಳುವಳಿ ಮಾಡುವ ಅಗತ್ಯವಿಲ್ಲ. ಅವಕ್ಕೆಂದೇ ಆರಾಮಾಗಿ ಇರುವುದು. ಸಿನಿಮಾ ನಾಟಕ ಹಾಡು ಹೆಣ್ಣು ಷೋಕಿ. ಸರಿ. ಸರಿ. ನೀನಾದರೂ ಅದನ್ನೇ ಮಾಡಬೇಕಲ್ಲಾ ! ಹೇಗೂ ಹಳ್ಳಿಯಲ್ಲಿ ಮಾವನ ಮನೆಯಿದೆ. ಉದಾರ ಬುದ್ಧಿಯ ಮಾವ. ನೀನೆಷ್ಟು ದಿನ ಹಾಗೇ ಕೂತು ಉಂಡರೂ ಬೇಡ ಅನ್ನುವವನಲ್ಲ. ಹೂಂ. ಮಕ್ಕಳೆಷ್ಟು ಈಗ ?"

"ಎರಡು. ಒಂದು ಗಂಡು, ಒಂದು ಹೆಣ್ಣು "

"ಸಂತೋಷ. ಇಷ್ಟಾದರೂ ಕೆಲಸ ಮಾಡಿದ್ದೀಯಲ್ಲಾ ! ಇರಲಿರಲಿ." ಒಂದು ಕ್ಷಣ ಸುಮ್ಮನಿದ್ದು ಸದಾಶಿವ ಮತ್ತೆ ಕೇಳಿದ : "ನಿಮ್ಮ ಗುಂಪೆಲ್ಲಾ ಎಲ್ಲಿದೆ ಈಗ ?"

"ಗುಂಪು ? ಅದೆಂದೋ ದಿಕ್ಪಾಪಾಲಾಗಿ ಹೋಯ್ತಲ್ಲ ಸದಾಶಿವಣ್ಣ. ಬಾಳಪ್ಪ ಹುಬ್ಬಳ್ಳಿಗೆ ಹೋಗಿ ಕಾರಖಾನೆ ಸೇರಿದ."

"ಹುಂ."

"ಕರೆಪ್ಪ ತಮ್ಮೂರಲ್ಲಿ ಕೂಲಿ ಮಾಡಿಕೊಂಡಿದಾನೆ."

"........... ...."

"ಇಮಾಮುಸಾಹೇಬು ಎಲ್ಲಿದ್ದಾನೋ ಗೊತ್ತಿಲ್ಲ."

" .. ........ ..."

"ಬಸಪ್ಪ ಚಹಾದಂಗಡಿ ಇಟ್ಟಿದಾನೆ."

"................"

"ರಾಮಣ್ಣಗೆ ಮದುವೆಯಾಯ್ತು. ಹೊಲಾಮನೆ ನೋಡಿಕೊಂಡಿದಾನೆ."

"................"

"ಬ್ಯಾರೆಯವರೆಲ್ಲಾ ಎಲ್ಲೆಲ್ಲೋ ಇದಾರೆ. ಯಾವಾಗಲಾದರೊಮ್ಮೆ ಭೆಟ್ಟಿಯಾಗುತಿರುತಾರೆ."

"ಪುಡಾರಿಗಳಿಬ್ಬರೂ ?"

"ಕಡುಗಲಿ ? ಅವನು ರಾಜಕಾರಣವನ್ನೇ ಬಿಟ್ಟ ಹಾಗಾಯಿತಲ್ಲ. ವೀರಣ್ಣನೊಬ್ಬ ಓರೆಕೋರೆ ಜಿಲ್ಲೆಯಲ್ಲಿ ಏನೇನೋ ಮಾಡುತಾ ಇದಾನೆ."

"ಏನೇನೋ ಅಂದರೆ ?"

"ರೈತ ಸಂಘಟನೆ ಮಾಡುತಾನೆ ಅಂತ ಕೇಳಿದ್ದೆ."

"ಅವನು ಮಾಡುವ ರೈತಸಂಘಟನೆಯೆಂಥಾದ್ದು ಅನ್ನುವುದು ಗೊತ್ತೇ ಇದೆಯಲ್ಲ! ಇಬ್ಬರನ್ನೂ ನೋಡಿದ್ದೆಯಾ ಈಚೆಗೆ?"

"ಕಡುಗಲಿ ಸಿಕ್ಕಿದ್ದ ಮೊನ್ನೆ–ಮುಂಬಯಿಗೆ ಹೋಗುವಾಗ."

"ಏನು ಕೆಲಸ ಅವನಿಗೆ ಮುಂಬಯಿಯಲ್ಲಿ? ಹೂಂ. ಗೊತ್ತಾಯಿತು. ಗೊತ್ತಾಯಿತು. ಕಾಂಗ್ರೆಸ್ ಕಾರ್ಯಕರ್ತರೆಲ್ಲಾ ಮಾಡುತ್ತಿದ್ದ ಕೆಲಸವನ್ನೇ ಇವನೂ ಮಾಡಬೇಕಲ್ಲವೆ? ಊರಲ್ಲಿ ಹೊತ್ತು ಹೇಗೆ ಹೋದೀತು, ಪಾಪ! ಅದಕ್ಕೇ ಇಂಥ ಕೆಲಸ. ಪುಣೆ ಮುಂಬಯಿಗೆ ಅವರಿವರನ್ನು ಕಟ್ಟಿಕೊಂಡು ಹೋಗಿ ಮಂತ್ರಿ ಉಪಮಂತ್ರಿಗಳ ವಶೀಲಿ ಹಚ್ಚಿ, ಅವರ ಕೆಲಸ ಸಾಧಿಸಿ ಕೊಡುವ ಕೆಲಸ....ವೀರಣ್ಣನದೂ ಇದೇ ಸಂಘಟನೆ ನಡೆದಿರಬಹುದು ... ಚೆನ್ನಯ್ಯಶಾಸ್ತ್ರಿಯೆಲ್ಲಿದಾನೆ?"

"ಅವನ ಉದ್ಯೋಗವಿದೆಯಲ್ಲಾ ಮೊದಲಿಂದ–ಕೀರ್ತನ ಮಾಡುವದು. ಹೇಗೋ ಸಾಗಿಸಿದ್ದಾನೆ. ಮನೆಯಲ್ಲಿ ಮಕ್ಕಳು ಬಹಳ. ಆರ್ಥಿಕ ಪರಿಸ್ಥಿತಿ ನೆಟ್ಟಗಿಲ್ಲ. ಪಾಪ, ಬಹಳ ತ್ರಾಸದಲ್ಲಿದಾನೆ. ಆದರೂ ಧೈರ್ಯವಂತ, ಕಾಂಗ್ರೆಸ್ಸು ಬಿಟ್ಟು ಹೊರಗೆ ಬಂದು ಏನಾದರೂ ಸಂಘಟನೆ ಮಾಡಬೇಕು ಅಂತಿರುತಾನೆ. ಚುನಾವಣೆ ಬೇರೆ ಹತ್ತಿರ ಬಂತಲ್ಲ. ಪುರೋಗಾಮಿ ಪಕ್ಷದವರು ಶಾಸ್ತ್ರಿಯನ್ನು ಎಳೆದುಕೊಳ್ಳುವಂತೆ ಕಾಣುತ್ತದೆ."

"ಹೂಂ! ಅವರಾದರೂ ಜೀವದಿದಿಂದಾರೆ ಅನ್ನು."

"ಯಾವಾಗಲಾದರೂ ಏನಾದರೂ ಚಟುವಟಿಕೆ ಅಂದರೆ ಅವರದೇ ನೋಡು ಸದಾಶಿವಣ್ಣಾ. ಆದರೆ ಜನ ಅವರನ್ನು ನಂಬುವುದಿಲ್ಲ. ಕಡುಗಲಿ ಯನ್ನೂ, ವೀರಣ್ಣನನ್ನೂ ಕಾಂಗ್ರೆಸ್ಸಿನಿಂದ ಹೊರಗೆಳೆಯಬೇಕಂತ ಬಹಳ ಪ್ರಯತ್ನಿಸಿದ ಜೋಶಿ. ಎಲ್ಲಾ ವ್ಯರ್ಥವಾಯಿತು."

"ಜೋಶಿ ಲಿಂಗಾಯತರಾಗಿ ಹುಟ್ಟಿಬಂದಿದ್ದರೆ ಈ ಮಂದಿ ಅವರನ್ನು ನಂಬುತ್ತಿತ್ತು. ಅವರು ಬ್ರಾಹ್ಮಣರಾದದ್ದೇ ಮೂಲವಾಯಿತು. ಈ ಹೊಲಸು ಕರ್ನಾಟಕದ ಹಣೇಬರಹವೇ ಇಷ್ಟು. ಕಮ್ಯೂನಿಸ್ಟ್ ಪಾರ್ಟಿಯಂತೂ ಇಲ್ಲಿ ಬೆಳೆಯುವಂತಿಲ್ಲ. ಅದನ್ನು ಕಂಡರೆ ಹುಲಿ ಕಂಡ ಹಾಗೆ ಹೆದರುತ್ತಾರೆ. ಸರಿ. ಸೋಶಲಿಸ್ಟರಾದರೂ ಏನಾದರೂ ಚಟುವಟಿಕೆ ನಡಸಿರುವರೇ?"

"ಸೋಶಲಿಸ್ಟರೇ ! ಅವರೆಲ್ಲಿದ್ದಾರೆ ಅನ್ನುವುದು ಯಾರಿಗೂ ಗೊತ್ತಿಲ್ಲಣ್ಣಾ. ಇಲ್ಲಿ, ಈ ಊರೊಳಗೆ ಮೂರು ನಾಲ್ಕು ಕಾಲೇಜು ಹುಡುಗರು ವರ್ಷಕ್ಕೊಮ್ಮೆ ಏನಾದರೊಂದು ಸಭೆ ಮಾಡುತಿರುತಾರೆ. ಅವರೆಲ್ಲಾ ಮರಾಠಿ ಮಂದಿ. ತಮ್ಮ ಭಾಷೆಯ ದುರಭಿಮಾನ ಅವರ ತಲೆಗೇರಿಬಿಟ್ಟದೆ. ಅವರ ಪ್ರಚಾರವೆಲ್ಲಾ ಬರಿಯ ಮರಾಠಿಯಲ್ಲಿ. ಹೀಗಾಗಿ ಕನ್ನಡಿಗರಾರೂ ಅವರತ್ತ ಕಣ್ಣು ತಿರುಗಿಸದಂತಾಗಿದೆ. ಹಳ್ಳಿಗಾಡಿನಲ್ಲಂತೂ ಸೋಶಲಿಸ್ಟರೆಂದರೆ ಯಾರೆನ್ನುವುದು ಯಾರಿಗೂ ಗೊತ್ತಿಲ್ಲ. ಅಂತೂ ಈಗ ಕಾಂಗ್ರೆಸ್ಸನ್ನು ಬಿಟ್ಟರೆ ಬೇರೆ ರಾಜಕೀಯ ಪಕ್ಷವೇ ಇಲ್ಲ ಅಂತ ಹೇಳಬಹುದು.

"ಸಾರ್ವತ್ರಿಕ ಚುನಾವಣೆ ಹತ್ತರ ಬಂದಿತಲ್ಲ ಕಲಗೌಡಾ. ಬೇರೆ ಪಕ್ಷವೇ ಇಲ್ಲ ಅಂದ ಮೇಲೆ ಕಾಂಗ್ರೆಸ್ಸಿಗರೇ ಅವಿರೋಧವಾಗಿ ಆರಿಸಿ ಹೋಗುವರೋ ಏನೊ."

"ಹೂಂ. ಹಾಗೇ ಕಾಣುತ್ತದೆ ಸದಾಶಿವಣ್ಣಾ. ಪುರೋಗಾಮಿ ಪಕ್ಷದವರೊಬ್ಬರು ವಿರೋಧ ಮಾಡಿದರೆ ಮಾಡಬಹುದು. ಬೇರೆ ಯಾರಲ್ಲೂ ಜೀವವೇ ಇಲ್ಲ. ಕಾಂಗ್ರೆಸ್ಸನ್ನು ಎದುರಿಸಬಲ್ಲ ಶಕ್ತಿ ಯಾರಲ್ಲೂ ಇಲ್ಲ."

"ಕಡುಗಲಿ, ವೀರಣ್ಣ, ವಿಶಾಲಪ್ಪ, ನಮ್ಮ ಮಾಮಾ ಇವರೆಲ್ಲಾ ಕಾಂಗ್ರೆಸ್ಸಿನಿಂದ ಹೊರಬಂದು ಪುರೋಗಾಮಿ ಪಕ್ಷವನ್ನೇ ಕೂಡಿಕೊಂಡು ಕೆಲಸ ಮಾಡಿದರೆ ಏನಾದರೂ ಆಗಬಹುದು. ಅಲ್ಲವೇನು ?"

"ಆಗದೆ ಬಿಟ್ಟೀತೇ ? ಆದರೆ ಇವರೆಲ್ಲಾ ಕಾಗ್ರೆಸ್ಸು ಬಿಡಬಹುದೆಂದು ನನಗನ್ನಿಸುವುದಿಲ್ಲ. ವೀರಣ್ಣ ಈ ಸಲ ತಾನೂ ಕಾಂಗ್ರೆಸ್ ಹುರಿಯಾಳಾಗಿ ಚುನಾವಣೆಗೆ ನಿಲ್ಲುವ ವಿಚಾರದಲ್ಲಿದಾನೆ. ವಿಶಾಲಪ್ಪನವರಂತೂ ಮುಂದಿನ ಸಲ ಮಂತ್ರಿಗಳಾಗುವ ಕನಸು ಕಾಣುತ್ತಿದಾರೆ. ನಿಮ್ಮ ಮಾಮಾ ಪಾರ್ಲಿಮೆಂಟಿಗೆ ಹೋಗುವ ಲೆಕ್ಕ ಹಾಕಿದಂತೆ ಕಾಣುತ್ತದೆ. ಕಡುಗಲಿಯಂತೂ ವಿಶಾಲಪ್ಪನವರ ಶಿಷ್ಯ; ಅವರು ಹೇಳಿದ ಹಾಗೆ ಮಾಡುವವನು. ಅಂತೂ ನನಗೇನೂ ಆಸೆಯಿಲ್ಲ ಸದಾಶಿವಣ್ಣಾ."

"ಹಾಗೆ ಆಸೆ ಬಿಟ್ಟು ಕೂತರೆ ಉಪಯೋಗವಿಲ್ಲ ಕಲಗೌಡಾ. ನಾವು ಏನಾದರೂ ಮಾಡಲೇಬೇಕು. ಜನರನ್ನು ತುಳಿಯುತ್ತಿರುವ ಈ ಕಾಂಗ್ರೆಸ್ಸನ್ನು ಚುನಾವಣೆಯಲ್ಲಿ ಮಟ್ಟ ಹಾಕಬೇಕು."

"ಕರ್ನಾಟಕದಲ್ಲಂತೂ ಅದು ತ್ರಾಸ ಅಂತ ನನಗನ್ನಿಸುತ್ತದೆ. ಇಲ್ಲಿ ಕಾಂಗ್ರೆಸ್ ಅಂದರೆ ಕುರುಡು ಭಕ್ತಿ ಜನರಿಗೆ...."

"ಕಾಂಗ್ರೆಸ್....ಕಾಂಗ್ರೆಸ್...." ಎಂದು ತನ್ನಷ್ಟಕ್ಕೆ ತಾನೇ ಹೇಳಿಕೊಂಡು ಸದಾಶಿವ ಕೊಟಡಿಯಲ್ಲಿ ಅಡಿಯಿಡತೊಡಗಿದ. ಅವನ ಹುಬ್ಬುಗಳೆರಡೂ ಬಾಗಿ ಗಂಟುಕಟ್ಟಿಕೊಂಡುವು. ತುಟಿಗಳ ಮೇಲೆ ಕ್ರೂರ ಅಣಕದ ನಗು ತೇಲತೊಡಗಿತು. ದೃಷ್ಟಿ ತೀಕ್ಷ್ಣವಾಗುತ್ತ ಬಂದು ತಿವಿಗತ್ತಿಯ ಮೊನೆಯಂತಾಯಿತು. ಆ ರೌದ್ರ ಭಾವವನ್ನು ಕಂಡು ಕಲ್ಲನಗೌಡ ಮೆಲ್ಲನೆದ್ದು, "ಊಟಕ್ಕೆ ಹೇಳಿ ಬರ್‍ತೀನಣ್ಣಾ," ಎಂದು ನುಡಿದು ಕೊಟಡಿಯಿಂದ ಜಾರಿಕೊಂಡ.

## ೨

" ಕಾಂಗ್ರೆಸ್....ಕಾಂಗ್ರೆಸ್.... " ಎಂದು ತನ್ನಲ್ಲಿಯೇ ಹೇಳಿಕೊಳ್ಳುತ್ತ ಸದಾಶಿವ ಗೋಡೆಯ ಮೇಲಿದ್ದ ಕೆಲೆಂಡರನ್ನು ದಿಟ್ಟಿಸುತ್ತಿದ್ದ ಹಾಗೆ, ಇಪ್ಪತ್ತು ವರ್ಷಗಳ ಹಿಂದಿನದೊಂದು ಕೆಲೆಂಡರು ಅವನ ಒಳಗಣ್ಣಿನೆದುರು ಕಾಣಿಸಿ ಕೊಂಡಿತು. ೧೯೨೯ ಸೆಪ್ಟಂಬರ್ ಹದಿಮೂರು. ನೆತ್ತರಿನ ಮಸಿಯಲ್ಲಿ ಎದ್ದು ಕಾಣಿಸಿದಂತಾಯಿತು ಆ ತಾರೀಕು. ಅಂದು, ಓರೆಕೋರೆ ನಗರದಲ್ಲಿನ ತನ್ನ ಕೊಟಡಿಯಲ್ಲಿ ಇಂದಿನಂತೆಯೇ ತುಂಬಾ ಉದ್ವೇಗದಿಂದ ತಾನು ಶತಪಥ ಹಾಕುತ್ತಿದ್ದುದರ ನೆನಪು ಬಂತು.

ನೆನಪು ಬಂತು. ಎಲ್ಲದರ ನೆನಪು ಬಂತು. ಜತೀಂದ್ರನಾಥದಾಸ್ ಅನ್ನ ಸತ್ಯಾಗ್ರಹಕ್ಕಾರಂಭಿಸಿ ಅಂದಿಗೆ ಅರುವತ್ತು ದಿನವಾಗಿತ್ತು. ಭಗತಸಿಂಗ್ ಮತ್ತು ಬಟುಕೇಶ್ವರದತ್ತರೂ ಉಪವಾಸ ಮಾಡುತ್ತಿದ್ದರು. ದಿನಗಳುರುಳಿದ ಹಾಗೆಲ್ಲ ಅವರ ಜೀವಗಳ ಬಗೆಗೆ ವಿಮಂಚನೆಗೊಳಗಾಗಿ ಉದ್ರಿಕ್ತವಾಗುತ್ತಿತ್ತು ದೇಶದ ಜನ. ಆಗ ತಾನಿನ್ನೂ ಹುಡುಗ. ಹದಿನೈದು ವರ್ಷಗಳ ಹುಡುಗ. ತನ್ನ ಮಾವ ಸೋಮಶೇಖರಪ್ಪವನರು ವಕೀಲಿಯ ಸನದು ಪಡೆದೊಡನೆಯೆ ಕಾಂಗ್ರೆಸ್ ಚಳುವಳಿಯಲ್ಲಿ ಸೇರಿಕೊಂಡಿದ್ದುದರಿಂದ ಅವರ ಪ್ರಭಾವಕ್ಕೊಳ ಗಾಗಿದ್ದ ತನಗೂ ಚಿಕ್ಕಂದಿನಿಂದಲೇ ಆ ಕಡೆ ಮನಸ್ಸು ಹರಿಯುತ್ತಿತ್ತು. ಹೈಸ್ಕೂಲಿಗೆ ಸೇರಿದ ತರುವಾಯ, ಪತ್ರಿಕೆ ಪುಸ್ತಕಗಳನ್ನೋದತೊಡಗಿದ ತರು ವಾಯ, ದೇಶಭಕ್ತರ ಭಾಷಣಗಳನ್ನು ಕೇಳಿದ ಹಾಗೆಲ್ಲ, ದೇಶದಲ್ಲಿ ನಡೆದ ದಬ್ಬಾಳಿಕೆಯ ವಿವರಗಳನ್ನು ತಿಳಿದ ಹಾಗೆಲ್ಲ ತನ್ನ ರಕ್ತವೂ ಬಿಸಿಯಾಗತೊಡ ಗಿತ್ತು. ಭಗತಸಿಂಗನ ಶೌರ್ಯ ಸಾಹಸಗಳ ಕಥೆಗಳನ್ನು ಕೇಳಿದಾಗಲೆಲ್ಲ ಶರೀರ ರೋಮಾಂಚಿತವಾಗುತ್ತಿತ್ತು. ಸ್ಯಾಂಡರ್ಸ್ ಹತ್ಯಾಕಾಂಡ....ಅಸೆಂಬ್ಲಿಯಲ್ಲಿ

ಬಾಂಬ್ ಸ್ಫೋಟ....ಅನಂತರ ಸೆರೆಮನೆಗಳಲ್ಲಿ ಅನ್ನಸತ್ಯಾಗ್ರಹ....ತನ್ನ ಎಳೆ ಹೃದಯ ಪುಲಕಿತವಾಗಿತ್ತು. ಶಾಲೆಯ ಪುಸ್ತಗಳಲ್ಲಿನ ಲಕ್ಷ್ಯ ಹಾರಿಹೋಗಿತ್ತು. ಊಟದಲ್ಲಿ ಆಟದಲ್ಲಿ ಯಾವುದರಲ್ಲೂ ಆಸಕ್ತಿಯುಳಿದಿರಲಿಲ್ಲ. ಜತೀಂದ್ರನಾಥ ದಾಸ್....ಸರದಾರ್ ಭಗತಸಿಂಗ್ ಅವರಿಗೇನಾಗುವುದೋ....ಉಪವಾಸ ಅವರ ಪ್ರಾಣಗಳನ್ನೆಲ್ಲಿ ಆಹುತಿಗೊಳ್ಳುವುದೋ ಎಂಬ ಚಿಂತೆಯೇ ಹಗಲಿರುಳೂ....

೧೯೨೯ ಸೆಪ್ಟಂಬರ್ ಹದಿಮೂರು.

ಅಂದು ಹೊರಟುಹೋಗಿತ್ತು ಒಂದು ವೀರ ಜೀವ.

ಹೋಗಿಬಿಟ್ಟಿದ್ದ ಜತೀಂದ್ರನಾಥದಾಸ್. ಅವನ ಜೀವದೊಡನೆ ತನ್ನದೂ ಹೋದ ಹಾಗಾಗಿತ್ತು. ಮೂರು ದಿನಗಳವರೆಗೆ ಅನ್ನ ಮುಟ್ಟದೆ ಕೊಟಡಿಯಲ್ಲಿ ಬಿದ್ದುಕೊಂಡಿದ್ದ. ನಾಲಗೆಯ ಮೇಲೆ ಜತೀಂದ್ರನ ಹೆಸರು. ಮನಸ್ಸಿನಲ್ಲೆಲ್ಲ ಅವನೇ. ಜತೀಂದ್ರ... ಜತೀಂದ್ರ....ಆಗ ತಾನು ಸುರಿಸಿದ ಕಣ್ಣೀರು ... ಕೋಪದ ಕಣ್ಣೀರು. ಕಳವಳದ ಕಣ್ಣೀರು. ತಾನೇನನ್ನೂ ಮಾಡಲಾರೆನಲ್ಲಾ ಎಂಬ ಅಸಹಾಯಕತೆಯ ಕಣ್ಣೀರು, ದೇಶದ ದುರ್ಗತಿಯ ಬಗ್ಗೆ ಕಣ್ಣೀರು....

ಹೈಸ್ಕೂಲಿನ ಬಗೆಗೆ, ಶಿಕ್ಷಣದ ಬಗೆಗೆ ಅಂದಿನಿಂದಲೇ ಬೇಸರಿಕ್ಕಾರಂಭವಾಗಿತ್ತು. ಪರಕೀಯ ಸರಕಾರದ ಚಾಕರಿಗೆ ಮಾತ್ರ ಉಪಯೋಗವಾಗುವ ಈ ಶಿಕ್ಷಣ ನಿಷ್ಪ್ರಯೋಜಕವೆಂಬ ವಿಚಾರ ಮೂಡಿತ್ತು. ಹೈಸ್ಕೂಲಿಗೆ ಶರಣು ಹೊಡೆದು, ಭಗತಸಿಂಗನಂತೆ ತಾನೂ ಒಂದು ಕ್ರಾಂತಿಕಾರರ ಗುಂಪು ಕಟ್ಟಿ ದೇಶದ ಸ್ವಾತಂತ್ರ್ಯಕ್ಕಾಗಿ ಏನಾದರೊಂದು ಭಯಂಕರ ಕೆಲಸ ಮಾಡಬೇಕು, ಮಾಡುತ್ತ ಮಾಡುತ್ತ ಮಡಿಯಬೇಕು ಎಂಬ ಯೋಚನೆ ಬಲಿಯತೊಡಗಿತ್ತು. ಆಗ ಕಾಲೇಜಿನಲ್ಲಿ ಓದುತ್ತಿದ್ದ ವೀರಣ್ಣ ತನ್ನನ್ನೇ ಹುರಿದುಂಬಿಸುತ್ತ ಬಂದಿದ್ದ. ಅವನು ಸ್ಥಾಪಿಸಿದ್ದ 'ತರುಣರ ತಂಡ'ದಲ್ಲಿ ತಾನೂ ಒಬ್ಬ ಮುಖ್ಯ ಸದಸ್ಯನಾಗಿದ್ದ. ವ್ಯಾಯಾಮ, ಲಾಠಿ ಶಿಕ್ಷಣ, ಸೈನಿಕ ಕವಾಯತು ಎಲ್ಲವೂ ಗುಪ್ತರೀತಿಯಲ್ಲಿ ನಡೆಯುತ್ತಿತ್ತು. ಶಾಲೆ ಕಾಲೇಜುಗಳನ್ನು ತೊರೆದು ತರುಣರೆಲ್ಲರೂ ಕ್ರಾಂತಿಯ ಯೋಧರಾಗಬೇಕೆಂದು ವೀರಣ್ಣ ಉಪದೇಶಿಸುತ್ತಿದ್ದ. ಅವನ ಜತೆಗಿದ್ದ ಇಪ್ಪತ್ತೈದು ಮಂದಿ ಯುವಕರು....

೧೯೨೯....೧೯೩೦... ೧೯೩೧....

೧೯೩೧ ರ ಮಾರ್ಚ್ ಇಪ್ಪತ್ಮೂರು.

ನೆತ್ತರಿನ ಅಕ್ಷರಗಳಲ್ಲಿ ಅಮರವಾದ ದಿನ ಅದೂ ಒಂದು.

ಅಂದು ಗಲ್ಲಿಗೇರಿಸಲ್ಪಟ್ಟಿದ್ದ ಭಗತಸಿಂಗ್. ಸರದಾರ್ ಭಗತಸಿಂಗ್. ತರುಣರ ಕಣ್ಮಣಿ ಭಗತಸಿಂಗ್. ಅವನ ಜತೆಗೇ ಫಾಸೀ ಹೋಗಿದ್ದರು ರಾಜ ಗುರು ಮತ್ತು ಸುಖದೇವ್.

ಅಂದೇ ತಾನು ಹೈಸ್ಕೂಲಿಗೆ ಶರಣು ಹೊಡೆದುದಾಗಿತ್ತು. ಸಾವಿರಾರು ವಿದ್ಯಾರ್ಥಿಗಳು ಶಾಲೆ ಕಾಲೇಜು ತ್ಯಜಿಸಿದ್ದರು. ಕಾಶ್ಮೀರದಿಂದ ಕನ್ಯಾಕುಮಾ ರಿಯ ವರೆಗೂ ಪ್ರಚಂಡ ಬೆಂಕಿಯೆದ್ದು ಧಗಧಗಿಸತೊಡಗಿತ್ತು. ಆ ಸಭೆಗಳೊ, ಆ ಮೆರವಣಿಗೆಗಳೊ, ಮುಖಂಡರ ಭಾಷಣಗಳೊ! ದುಃಖಪ್ರದರ್ಶನ, ರೋಷ ಪ್ರದರ್ಶನ, ಹರತಾಳ, ಲಾಠೀ ಚಾರ್ಜ್. ಗೋಳೀಬಾರ್. ಸರಕಾರಿ ಕಚೇರಿ ಗಳಿಗೆ ಬೆಂಕಿ. ದೇಶಕ್ಕೆ ದೇಶವೆಲ್ಲಾ ಕೆರಳಿ ಆಕ್ರೋಶಮಾಡುತ್ತಿತ್ತು. ವೀರಾ ಗ್ರಣಿ ಭಗತಸಿಂಗನನ್ನೂ ಅವರ ಜತೆಯ ಹುತಾತ್ಮರನ್ನೂ ನೆನೆದುನೆನೆದು ಭಾರತ ವೆಲ್ಲಾ ರೋದಿಸಿತ್ತು. ಕಣ್ಣುಗಳಲ್ಲಿ ಕಂಬನಿ ತುಂಬಿದ್ದ ಹಾಗೆಯೆ ತರುಣ ತರುಣಿಯರು "ಇನ್ಕಿಲಾಬ್ ಜಿಂದಬಾದ್", ಎಂದು ಘೋಷಿಸಿದ್ದರು. ಇನ್ಕಿ ಲಾಬ್ ಜಿಂದಾಬಾದ್... ದೇಶದ ಯುವಜನಾಂಗಕ್ಕೆ ಭಗತಸಿಂಗ್ ಕೊಟ್ಟ ಸಂದೇಶ ಅದು. ಕ್ರಾಂತಿಗೆ ಜಯವಾಗಲಿ... ಕ್ರಾಂತಿ....ಅಂದು ಇನ್ನೂ ಯುವಕ ರಾಗಿದ್ದ ಜವಾಹರಲಾಲ್ ನೆಹರೂ ಕೂಡ ಅದೇ ಘೋಷಣೆ ಮೊಳಗಿಸಿದ್ದರು. ಅಂದಿನ ಅವರ ಮಾತುಗಳು ಇನ್ನೂ ಚೆನ್ನಾಗಿ ನೆನಪಿದೆ ತನಗೆ. "ಭಗತಸಿಂಗರ ಮತ್ತು ಅವರ ಜತೆಗಾರರ ಮಹಾತ್ಯಾಗಸಾಹಸಗಳು ಭಾರತದ ನವಯುವಕರಿ ಗೆಲ್ಲಾ ಪ್ರೇರಣೆಯ ವಿಷಯಗಳಾಗಿವೆ, ಇನ್ನು ಮುಂದೂ ಆಗಿರುವವು. ಈ ಸ್ವರ್ಗೀಯ ಆತ್ಮಗಳ ಬಗ್ಗೆ ನಮಗೆ ಹೆಮ್ಮೆಯಿದೆ. ಬ್ರಿಟಿಷರೊಡನೆ ಒಪ್ಪಂದದ ಮಾತು ಬಂದಾಗ ಭಗತಸಿಂಗರ ಶವವನ್ನು ನಾವು ಮರೆಯುವುದಿಲ್ಲ."

ಜವಾಹರಲಾಲ್ ಹೇಳಿದ ಮಾತು ಅವು....

ಸದಾಶಿವ ತನ್ನಲ್ಲಿಯೆ ಹೇಳಿಕೊಂಡ.

**"ಮಾತು! ಬರಿಯ ಮಾತು. ಜೊಳ್ಳು ಮಾತು!"**

—ಭಗತಸಿಂಗ್ ಎಂದರೆ ಕ್ರಾಂತಿಯ ಸಂಕೇತ. ಕ್ರಾಂತಿ? ಎಲ್ಲಿದೆ ಕ್ರಾಂತಿ ಇಂದು? ಅಂದು ಅಂಥ ಮಾತನಾಡಿದ ಇದೇ ಜವಾಹರಲಾಲರ ರಾಜ್ಯದಲ್ಲೇ ಇಂದು ಕ್ರಾಂತಿಯ ಕತ್ತು ಹಿಸುಕಲ್ಪಟ್ಟಿದೆ. ಅಧಿಕಾರ ಸ್ವೀಕರಿಸುವಾಗ, ಮತ್ತು ಅನಂತರ ಭಗತಸಿಂಗನ ಶವದ ನೆನಪು ಬರಲಿಲ್ಲ ಜವಾಹರಲಾಲರಿಗೆ; ಫಾಸೀ ಕಂಬಗಳಿಗೆ ನೇತಾಡಿದ ರಾಜಗುರು ಮತ್ತು ಸುಖದೇವರ ಶವಗಳ ನೆನಪು ಬರಲಿಲ್ಲ. ಜತೀಂದ್ರನಾಥದಾಸನ ನೆನಪು ಬರಲಿಲ್ಲ. ಕ್ರಾಂತಿಗಾಗಿ ಪ್ರಾಣಗಳನ್ನರ್ಪಿಸಿದ ಸಾವಿರಾರು ಹುತಾತ್ಮರ ನೆನಪು ಬರಲಿಲ್ಲ. ಹದಿನಾರೇ ವರ್ಷಗಳಲ್ಲಿ ಭಗತಸಿಂಗನನ್ನು ಮರೆತರು ಜವಾಹರ್....

ಭಗತಸಿಂಗ್ . ಅವನ ಶವ. ..

ಭಗತಸಿಂಗನ ತೇಜಸ್ವಿ ಮುಖ ಸದಾಶಿವನ ಬಗೆಗಣ್ಣಿನೆದುರು ಮೂಡಿತು. ಆಹ್, ಆ ತೇಜಃಪೂರ್ಣ ಕಣ್ಣು, ತುಟಿಗಳ ಮೇಲಿನ ಗಂಡು ಸಂಕಲ್ಪ, ಮುಖದ ಚೆಲುವನ್ನು ಅಧಿಕಗೊಳಿಸುವ ಟೋಪಿ, ಅರ್ಪಣೆಗಾಗಿಯೆ ತೆರೆದು ನಿಂತಂತಿದ್ದ ನೀಳವಾದ ಕೊರಳು ...ಭಗತಸಿಂಗ್....ಸರದಾರ್ ಭಗತಸಿಂಗ್.... ಕ್ರಾಂತಿಗೆ ಜಯವಾಗಲೆಂದು ಜೀವ ಕೊಟ್ಟ ಭಗತಸಿಂಗ್....

ಕ್ರಾಂತಿ ? ತರುಣರು ? ಸ್ಫೂರ್ತಿ ? ಪ್ರೇರಣೆ ?

" ಇನ್ಕಿಲಾಬ್ ಜಿಂದಾಬಾದ್ ? "

ಭಗತಸಿಂಗನ ಸಂದೇಶವನ್ನು ಜವಾಹರ್ ಅಷ್ಟೆ ಮರೆಯಲಿಲ್ಲ; ದೇಶದೆಲ್ಲ ತರುಣರೂ ಮರೆತುಬಿಟ್ಟರು.

ಕ್ರಾಂತಿ ?

—ಭ್ರಾಂತಿ.

ತರುಣರು ?

—ನುಗದುಮ್.

ಸ್ಫೂರ್ತಿ ?

—ಎದುರು ಮನೆಯ ಹೆಣ್ಣು. ಸಿನಿಮಾ ತಾರೆಯರ ಸ್ತನಗಳು. ಸಿಗರೇಟು.

ಇನ್ಕಿಲಾಬ್ ಜಿಂದಾಬಾದ್ ?

—ಮೇರೀ ಪ್ಯಾರೀತೋ....ಮೇರೀ ಪ್ಯಾರೀತೋ... !

ಸದಾಶಿವ ಉಗುಳಿದ. ತಿರಸ್ಕಾರದಿಂದ ಉಗುಳಿದ.

ಉಗುಳಲೆಂದು ಅವನು ಬಾಗಿಲ ಬಳಿ ಹೋಗಿದ್ದಾಗ ಎದುರು ಮನೆಯ ಕಿಟಕಿಯ ಕಡೆ ಅಕಸ್ಮಾತ್ತಾಗಿ ಅವನ ದೃಷ್ಟಿ ತಿರುಗಿತು. ಮಗದುಮನ ಮೇಲೆ ಸಮ್ಮೋಹನಾಸ್ತ್ರವೆಸೆಯುತ್ತ ನಿಂತಿದ್ದ ಅದೇ ಹೆಣ್ಣು ಈಗ ತನ್ನ ಮೇಲೂ ಬಾಣಪ್ರಯೋಗ ಮಾಡಲು ಹೊಂಚು ಹಾಕುತ್ತಿದ್ದುದು ಕಾಣಿಸಿತು. ಸದಾಶಿವ ಉಗುಳಿದ, ಮತ್ತೊಮ್ಮೆ ಉಗುಳಿದ. ಅನಂತರ ರಭಸದಿಂದ ಬಾಗಿಲು ಮುಚ್ಚಿ ಬಂದು ಮಂಚದ ಮೇಲೊರಗಿದ. ಎದುರಿನ ರಸ್ತೆಯನ್ನು, ಆ ಮನೆಯನ್ನು, ಆ ಹೆಣ್ಣು ನಿಂತ ಕೊಟಡಿಯನ್ನು, ಅವಳನ್ನು ತನ್ನ ಉಗುಳಿನಲ್ಲಿ ಮುಳುಗಿಸಿದರೂ ಕಡಿಮೆಯಾಗುವಂತಿರಲಿಲ್ಲ ಅವನ ರೋಷ.

"ಸ್ನಾನ ಮಾಡ್ತೀರಾ ಸದಾಶಿವಣ್ಣಾ ?"

ಬಾಗಿಲು ತೆರೆದು ಒಳಗಡೆ ಅಡಿಯಿಡುತ್ತ ಕೇಳಿದ ಕಲ್ಲನಗೌಡ.

ಸ್ನಾನ? ಎಷ್ಟು ಗಂಟೆಗಳ ಕಾಲ ಸ್ನಾನ ಮಾಡಿದರೆ ಆರೀತು ತನ್ನೆದೆಯ ಬೆಂಕಿ ?

"ಏನೂ ಬೇಡ ಕಲಗೌಡಾ. ಬೆಳಿಗ್ಗೆ ಜೇಲಿನಲ್ಲಿ ಮಾಡಿದ್ದೇನೆ."

ಭೋಜನಾಲಯದ ಆಳು ಊಟ ತಂದಿಟ್ಟು ಹೋದ. ಮೌನದಲ್ಲಿಯೆ ಊಟ ಮುಗಿಯಿತು.

ಅಂಗವಸ್ತ್ರದಿಂದ ಕೈಬಾಯಿಗಳನ್ನೊರೆಸುತ್ತಾ ಸದಾಶಿವ ಗೂಡಿನಲ್ಲಿದ್ದ ಪುಸ್ತಕಗಳನ್ನು ತೆಗೆದು ನೋಡಿದ.

ಅಗ್ಗದ ಅಮೆರಿಕನ್ ಕಾದಂಬರಿಗಳು ಕೆಲವು. 'ಪ್ರೇಮಕಲಾ.' 'ರತಿರಹಸ್ಯ' 'ಅನಂಗರಂಗ.' 'ಹುಡುಗಿಯರನ್ನು ಚುಂಬಿಸುವ ಸಾವಿರ ವಿಧಾನಗಳು.' 'ಕಾಮಕಳಾಶಾಸ್ತ್ರ.' 'ಗರ್ಭನಿರೋಧ.' 'ಗುಹ್ಯರೋಗ ನಿವಾರಣೆ.' 'ಪಾಪಪೂರಿತ ಪಟ್ಟಣಗಳು.' 'ಮೈಸೂರು ಮಲ್ಲಿಗೆ.' 'ರುಬಾಯಿಯಾತ್.' 'Abolish marrige' 'Free Love' ಹೆಣ್ಣಿನ ನಗ್ನಚಿತ್ರಗಳದೊಂದು ಸಂಪುಟ.

ಒಂದೊಂದೇ ಪುಸ್ತಕವನ್ನು ಕೈಗೆತ್ತಿಕೊಂಡು ನೋಡಿ ಮತ್ತೆ ಗೂಡಿಗೆ

ಬಿಸುಟ ಸದಾಶಿವ. ಆ ಕೊಟಡಿಯ ವಾತಾವರಣ ದುಸ್ಸಹವಾಗತೊಡಗಿತು. ತಕ್ಷಣ ಅಲ್ಲಿಂದ ಹೊರಟುಬಿಡಬೇಕು ಎನ್ನಿಸಿತು. ಆದರೆ ಹೋಗುವುದಾದರೂ ಎಲ್ಲಿಗೆ? ಮಾವನ ಮನೆಗೆ ಹೋಗಬಹುದಾದರೂ ಅಲ್ಲಿಯೂ ತನ್ನ ಜೀವಕ್ಕೆ ಸಮಾಧಾನ ಲಭಿಸುವಂತಿಲ್ಲ. ಮೊದಲಿನಿಂದಲೂ ಹಾಗೆಯೆ. ಮಾವನ ಮಕ್ಕಳೇನೋ ತನ್ನನ್ನು ಪ್ರೀತಿಸುತ್ತಾರೆ. ಆದರೆ ತನಗೆ ಮಾತ್ರ ಅವರ ಬಗೆಗೆ ಅಂಥ ವಾತ್ಸಲ್ಯಭಾವವೇನೂ ಉಳಿದಿಲ್ಲ. ಹೃದಯದಲ್ಲಿ ಕೋಮಲ ಭಾವಗಳುಳಿದಿದ್ದರೆ ತಾನೆ ವಾತ್ಸಲ್ಯದ ಮಾತು? ಎಲ್ಲಾ ಎಂದೋ ಸತ್ತುಹೋದುವು. ಕಲ್ಲಾಯಿತು ತನ್ನ ಹೃದಯ....ಬಂಡೆಗಲ್ಲಾಯಿತು.

"ಗೌಡರೇ" ಎಂದು ಯಾರೋ ಕರೆದುದು ಕೇಳಿಸುತ್ತಲೂ ಸದಾಶಿವ ಕತ್ತೆತ್ತಿ ನೋಡಿದ. ಹನ್ನೆರಡು ವರ್ಷದ ಹುಡುಗಿಯೊಬ್ಬಳು ಬಾಗಿಲಲ್ಲಿ ನಿಂತುಕೊಂಡಿದ್ದಳು.

"ಯಾರ ಹುಡುಗಿಯಿವಳು ಕಲಗೌಡಾ?"

"ಟೋಪಿ ಶಾಂತಣ್ಣನವರ ಮಗಳು, ಸದಾಶಿವಣ್ಣಾ."

"ಓ, ಅವರ ಮಗಳೋ? ನನಗೆ ಗುರುತೇ ಆಗಲಿಲ್ಲ. ಎಷ್ಟುದ್ದ ಬೆಳೆದಿದ್ದಾಳಲ್ಲ. ನೋಡಿ ನಾಲ್ಕೈದು ವರ್ಷವಾಗುತ್ತಾ ಬಂತು. ಹೇಗಿದ್ದಾರೆ ವಕೀಲರು ಈಗ?"

"ಅರಾಮಾಗೇ ಇದ್ದಾರೆ."

"ವಕೀಲಿ ಚೆನ್ನಾಗಿರಬೇಕಲ್ಲಾ?"

"ಸಾಧಾರಣ ಇರಬೇಕು ಇತ್ತಿತ್ತಲಾಗಿ ಅವರು ಸಾರ್ವಜನಿಕ ಕೆಲಸಗಳಲ್ಲೇ ಬಹಳ ವೇಳೆ ಕಳೆಯುತ್ತಾರೆ. ಶರಣ ಶರಣೆಯರ ಸಂಘ ಅಂತ ಒಂದು ಸಂಘ ಸ್ಥಾಪನವಾಗಿದೆ ಎರಡು ವರ್ಷದ ಹಿಂದೆ. ಶಾಂತಣ್ಣನವರೇ ಅದರ ಕಾರ್ಯದರ್ಶಿಗಳು. ಅದರ ಕೆಲಸದಲ್ಲೇ ಇರುತಾರೆ ಯಾವಾಗಲೂ."

"ಈಗಲೂ ಆ ಸಂಘದ ಕೆಲಸಕ್ಕಾಗಿಯೆ ಕರೆಯುತ್ತಿರುವರೇನು ನಿನ್ನ?"

ಸದಾಶಿವನೆದುರಲ್ಲಿ ಸುಳ್ಳು ಹೇಳಲು ಧೈರ್ಯವಾಗಲಿಲ್ಲ ಕಲ್ಲನಗೌಡನಿಗೆ. ಅವನು ನಿಜಸಂಗತಿಯನ್ನೇ ಅರುಹಿದ:

" ಮಧ್ಯಾಹ್ನ ಒಂದೆರಡು ತಾಸು ಅವರೂ ನಾನೂ ಇಸ್ಪೀಟು ಆಡುತಿರುತೀವಿ ಅಣ್ಣಾ. ? "

" ಶರಣರು ಇಸ್ಪೀಟು ಆಟಕ್ಕೂ ಶರಣು ಹೋಗುತ್ತಾರೇನು ? ರೊಕ್ಕ ಹಚ್ಚಿ ಆಡುತ್ತೀರಾ, ಇಲ್ಲ, ಹಾಗೇಯೋ ? "

" ರೊಕ್ಕ ಹಚ್ಚದಿದ್ದರೆ ಇಸ್ಪೀಟಾಟದಲ್ಲಿ ಮಜಾ ಹ್ಯಾಗೆ ಬರಬೇಕು ಸದಾಶಿವಣ್ಣಾ ? "

" ಮಜಾ ! ಅಂತೂ ನೀನೂ ಮಜಾಕ್ಕೆ ನಿಂತಂತಾಯಿತಲ್ಲ ! "

ನಾಚಿಕೆಯಿಂದ ತಲೆ ತಗ್ಗಿಸಿದ ಕಲ್ಲನಗೌಡ. ವಕೀಲರ ಮಗಳು ಹೆದರಿ ಹೊರಟುಹೋದಳು.

ಕೆಲವು ನಿಮಿಷ ಮೌನ.

ಇನ್ನು ಅಲ್ಲಿಂದ ಹೊರಡುವುದೆಂದು ಸದಾಶಿವ ಯೋಚಿಸುತ್ತಿದ್ದ ಹಾಗೆ ಟೋಪಿ ಶಾಂತಣ್ಣನ ಕುಳ್ಳಗಿನ ಬೆಳ್ಳಗಿನ ಮೂರ್ತಿ ಬಾಗಿಲಲ್ಲಿ ಕಾಣಿಸಿಕೊಂಡಿತು. ಸದಾಶಿವನಿಗೆ ಅಪರಿಚಿತನೇನೂ ಅಲ್ಲ ಶಾಂತಣ್ಣ. ಕಾಲೇಜಿನಲ್ಲಿ ಅವರಿಬ್ಬರೂ ಸಹಪಾಠಿಗಳಾಗಿದ್ದರು. ಕಾಂಗ್ರೆಸ್ ಚಳುವಳಿ ಸೇರಿಕೊಂಡ ಸದಾಶಿವ ಇಂಟರಿಗೇ ಕಾಲೇಜಿಗೆ ಶರಣು ಹೊಡೆದಿದ್ದ. ಶಾಂತಣ್ಣ ಬಿ.ಎ. ಮುಗಿಸಿ, ಎಲ್‌ಎಲ್.ಬಿ. ಮಾಡಿ ಕಳ್ಳೀಕಾಯಿ ನಗರದಲ್ಲಿ ವಕೀಲಿಗಾರಂಭಿಸಿದ್ದ. ಕ್ರಿಮಿನಲ್ ಕೇಸುಗಳಲ್ಲಿ ಹಣ ಸಂಪಾದಿಸಿ ಮನೆಯೊಂದನ್ನು ಕೊಂಡುಕೊಂಡಿದ್ದ. ನಲ್ಲದೆ ಚಿಕ್ಕದೊಂದು ಕಾರನ್ನು ಮಡಗಿಕೊಂಡಿದ್ದ. ಈಚೆಗೆ ಕಕ್ಷಿಗಾರರು ಬರುವುದು ಕಡಿಮೆಯಾಗುತ್ತ ಬಂದುದರಿಂದ ಅವನು ಸಂಘ ಸಂಸ್ಥೆಗಳತ್ತ ತನ್ನ ದೃಷ್ಟಿ ತಿರುಗಿಸಿದ್ದ.

ಬಾಯಿಯನ್ನು ಅಗಲವಾಗಿ ತೆರೆದು ತನ್ನ ಹಳದಿ ಬಣ್ಣದ ಹಲ್ಲುಗಳೆಲ್ಲವನ್ನೂ ಪ್ರದರ್ಶಿಸುತ್ತ ಹಿ ಹಿ ಹಿ ಎಂದು ನಕ್ಕ ಶಾಂತಣ್ಣ. " ಶರಣು ಶರಣಾರ್ಥಿ....ಶರಣು ಶರಣಾರ್ಥಿ... ಯಾವಾಗ ಬಂದಿರಿ ಸದಾಶಿವಣ್ಣಾ ? ಎಲ್ಲ ನೆಟ್ಟಗೆ ಹೌದಲ್ಲೋ ? " ಎನ್ನುತ್ತಾ ಸದಾಶಿವನ ಬಳಿ ಬಂದು ಕುಳಿತುಕೊಂಡ.

" ನಿಮ್ಮನ್ನ ನೋಡಿ ಬಹಳ ಸಂತೋಷವಾಯ್ತು...ಬಹಳ ಸಂತೋಷ

ವಾಯ್ತು. ದಪ್ಪಗೆ ಎತ್ತರವಾಗಿದ್ದಾರಂತ ನನ್ನ ಮಗಳು ಮಾಲಿ ಬಂದು ಹೇಳಿದ ಕೂಡಲೆ ನೀವೇ ಇರಬೇಕಂತ ಖಾತ್ರಿಯಾಯ್ತು ನನಗೆ. ಇಂದು ನಿಮ್ಮ ಬಿಡುಗಡೆಯಾಗುತ್ತದೆ ಅಂತ ನಿನ್ನೆ ಕಲಗೌಡರು ಹೇಳುತ್ತಿದ್ದರು. ಕಾರು ತೆಗೆದುಕೊಂಡು ನಾನೇ ಬರಬೇಕೆಂತ ಮಾಡಿದ್ದೆ ಜೇಲಿಗೆ. ವಿಶಾಲಪ್ಪ ನವರು ಅರ್ಜಂಟಾಗಿ ಹೇಳಿಕಳಿಸಿದ್ದರಿಂದ ಬರಲಿಕ್ಕಾಗಲಿಲ್ಲ, ಕ್ಷಮಿಸಿರಿ. ಏನು ಊಟ ಗೀಟ ಆಯ್ತೋ? ನಮ್ಮಲ್ಲಿಗೇ ಕರಕೊಂಡು ಬರಬಹುದಾಗಿತ್ತಲ್ಲ ಗೌಡರೇ ? " ಎಂದು ಮಾತಿನ ಮಳೆಗರೆಯತೊಡಗಿದ ಶಾಂತಣ್ಣ.

" ಏನವಸರ ವಕೀಲರೆ? ಇನ್ನೂ ಏಳೆಂಟು ದಿನ ಇಲ್ಲೇ ಇರ್ತಾರಲ್ಲ ಸದಾಶಿವಣ್ಣ. "

" ಹಾಗಾದರೆ ಬಹಳ ಚಲೋನೇ ಆಯ್ತಲ್ಲ. ಇವತ್ತು ಸಾಯಂಕಾಲ ನಮ್ಮಲ್ಲಿಗೇ ಬರ್ರಿ ಊಟಕ್ಕೆ. "

" ಇವತ್ತು ಬೇಡ ವಕೀಲರೆ. ಮೊದಲು ಮಾವನವರನ್ನು ನೋಡ ಬೇಕಲ್ಲ ? "

" ಹೌದು, ಹೌದು. ನೋಡಬೇಕು. ನೋಡಬೇಕು. ನಾಳೆ ಬರ್ರಿ ಹಾಗಾ ದರೆ ಮುಂಜಾನೆ. ನಮ್ಮ ಶರಣ ಶರಣೆಯರ ಸಂಘದ ವಿಷಯವನ್ನು ತಿಳಿದು ಕೊಂಡ ಹಾಗಾಗುತದೆ, ಊಟವೂ ಆಗುತದೆ, ಮಾತೂ ಆಗುತದೆ. ಛೆ! ಛೆ! ಬಹಳ ವರ್ಷ ಆಯ್ತು ನಮ್ಮ ನಿಮ್ಮ ಭೆಟ್ಟಿಯಾಗಿ. ನಿಮ್ಮ ದಾರಿ ಬೇರೆ ಯಾಯ್ತು; ನಮ್ಮದು ಬೇರೆಯಾಯ್ತು. ಶರಣ ಶರಣೆಯರ ನಮ್ಮ ಸಂಘ ..."

ಚೇಷ್ಟೆಯ ಧ್ವನಿಯಲ್ಲಿ ಸದಾಶಿವ ಕೇಳಿದ

" ನಿಮ್ಮ ಸಂಘದಲ್ಲಿರುವವರೆಲ್ಲಾ ಶರಣ ಶರಣೆಯರೇ ಏನ್ರೀ ? "

" ಹ ಹ ಹ ಹ್ಹಾ ಹ್ಹಾ....ಹಿ ಹಿ ಹಿ ಹ್ಹಿ ಹ್ಹಿ.... " ಎಂದು ಗಟ್ಟಿಯಾಗಿ ನಗುತ್ತ ಟೋಪಿ ಶಾಂತಣ್ಣ ಹೇಳಿದ: " ಏನೋ ಹಾಗೆ ಆಗಬೇಕು ಅಂತ ಪ್ರಯತ್ನ ನಡಸಿದೇವೆ ಎರಡು ವರ್ಷವಾಯ್ತು ಸಂಘ ಸ್ಥಾಪಿಸಿ. ಅದಕ್ಕೂ ಮೊದಲೇ ಇಂಥಾದ್ದೊಂದು ಸಂಘ ಬೇಕು ಅಂತ ವಿಚಾರ ಮಾಡುತಾ ಬಂದಿದ್ದೆ. ನಮ್ಮ ಹಿಂದಿನ ಶರಣ ಶರಣೆಯರ ಚರಿತ್ರೆ ವಚನಗಳನ್ನು ನಮ್ಮ ಜಾತಿಯ ವರೇ ಮರೆತುಬಿಟ್ಟಿದ್ದಾರೆ. ಅವುಗಳನ್ನೆಲ್ಲಾ ಪ್ರಚಾರ ಮಾಡುವದಕ್ಕೆ ನಮ್ಮಂಥ

ಸುಶಿಕ್ಷಿತರು ಮುಂದೆ ಬರಬೇಕು. ಬ್ರಾಹ್ಮಣರು ಹ್ಯಾಗೆ ಗೀತೆಯನ್ನು ತಲೆಯ ಮೇಲೆ ಹೊತ್ತು ಕುಣೀತಾರೆ. ನಮ್ಮ ಲಿಂಗಾಯತ ಮಂದಿ ಅಂದರೆ ಪೂರಾ ಹುಂಬರು. ಅಭಿಮಾನ ಅನ್ನುವದು ಸ್ವಲ್ಪವೂ ಇಲ್ಲ. ತಾನಾಯಿತು, ತಮ್ಮ ವ್ಯಾಪಾರ ಆಯಿತು, ತಮ್ಮ ಒಕ್ಕಲತನ ಆಯಿತು. ಬೇರೆ ಏನೂ ತಿಳಿಯುವ ದಿಲ್ಲ. ಸಮಾಜಕ್ಕಾಗಿ ಧರ್ಮಕ್ಕಾಗಿ ಮುಂದೆ ಬಂದು ಸ್ವಲ್ಪವಾದರೂ ದುಡಿಯ ಬೇಕೆಂಬ ಬುದ್ಧಿ ಇಲ್ಲ. ಅದಕ್ಕೇ ನನ್ನಂಥಾ ಸಮಾಜಸೇವಕರು... "

ಶಾಂತಣ್ಣನ ಮಾತನ್ನು ನಡುವೆಯೆ ತಡೆದು ಸದಾಶಿವನೆಂದ :

"ಅಂದರೆ....ನಿಮ್ಮದೊಂದು ಜಾತೀಯ ಸಂಸ್ಥೆ ಆದಂತಾಯಿತು."

"ಛೆ! ಛೆ! ಜಾತೀಯ ಸಂಸ್ಥೆ ಹ್ಯಾಗಾದೀತು? ಶರಣ ಶರಣೆಯರ ಸಾಹಿತ್ಯ ಅಂದರೆ ಇಡೀ ಜಗತ್ತಿಗೇ ಪೂಜ್ಯವಾದದ್ದು. ಎಲ್ಲ ಜಾತಿಯವರೂ ಓದಬೇಕಾದ ಸಾಹಿತ್ಯ ಅದು. ವೀರಶೈವ ಧರ್ಮ ಅಂದರೆ ವಿಶ್ವಧರ್ಮ.... ದುರ್ದೈವದಿಂದ ನಮ್ಮಲ್ಲಿ ಪ್ರಚಾರಕರೇ ಇಲ್ಲದಾಗಿದ್ದಾರೆ. ನಮ್ಮ ಸಂಘ ಅದೇ ಕೆಲಸ ಮಾಡಲು ಹೊರಟಿದೆ. ಮೂವತ್ತು ನಲವತ್ತು ವರ್ಷಗಳಲ್ಲಿ ಸಹ ಯಾರೂ ಮಾಡಿರದಷ್ಟು ಕೆಲಸ ನಾವು ಎರಡು ವರ್ಷಗಳಲ್ಲಿ ಮಾಡಿದ್ದೇವೆ. ಹ್ಯಾಗೂ ನನ್ನದೇ ಮೋಟಾರುಕಾರು ಇದೆ. ಪೆಟ್ರೋಲ್ ತುಂಬುವದು, ಊರೂರು ಸುತ್ತುವದು, ಹಣ ಕೂಡಿಸುವದು ನಡೆದಿದೆ. ಇದುವರೆಗೆ ಹದಿನೈದು ಸಾವಿರದ ವರೆಗೂ ಕೂಡಿಸಿದ್ದೇವೆ. ಸರಕಾರದಿಂದಲೂ ಗ್ರಾಂಟ್ ಸಿಗುತಾ ಇದೆ. ಇನ್ನು ಒಂದೆರಡು ವರ್ಷಗಳಲ್ಲಿ ಶರಣರ ವಚನಗಳ ಹಿಂದೀ ಮರಾಠೀ ಇಂಗ್ಲೀಷ್ ಅನುವಾದಗಳು ಪ್ರಕಟವಾಗುತ್ತವೆ. ಈಗ ಅವುಗಳ ಭಾಷಾಂತರ ಕೆಲಸ ನಡೆದಿದೆ. ನಾಲ್ಕೈದು ಜನ ಪ್ರಸಿದ್ಧ ಪಂಡಿತರು ಅನುವಾದ ನಡಸಿದ್ದಾರೆ."

ಸದಾಶಿವನಿಗೆ ಆ ವಿಷಯದಲ್ಲಿ ಕೊಂಚವೂ ಆಸ್ಥೆಯಿರಲಿಲ್ಲ. ಅವನು ಬೇಸರದಿಂದೆದ್ದು ಕೊಟಡಿಯಲ್ಲಿ ಅಡ್ಡಾಡತೊಡಗಿದ.

ಶಾಂತಣ್ಣ ಮಾತು ನಿಲ್ಲಿಸಲಿಲ್ಲ. "ಎಲ್ಲಾ ಕ್ಷೇತ್ರಗಳಲ್ಲೂ ನಾವು ಚಟು ವಟಿಕೆಯಿಂದ ಕೆಲಸ ಮಾಡದಿದ್ದರೆ ಬ್ರಾಹ್ಮಣರು ನಮ್ಮನ್ನು ತುಳಿದುಬಿಡು ವದು ಖಂಡಿತ. ರಾಜಕಾರಣದಲ್ಲೂ ನಮ್ಮ ಜನರು ಹಿಂದೇ ಇದ್ದಾರೆ. ಯಾವ ಪಾರ್ಟಿಯೊಳಗೆ ನೋಡಿದರೂ ಆ ಜನಿವಾರದ ಮಂದಿಯೇ ಮುಖಂಡರು.

ನಿಮ್ಮ ಮಾವನವರು ಭಾವೀಕಟ್ಟಿ ವಕೀಲರಂಥವರು, ವಿಶಾಲಪ್ಪರಂಥವರು ಒಬ್ಬಿಬ್ಬರು ಕಾಂಗ್ರೆಸ್ಸಿನಲ್ಲಿದ್ದದ್ದು ಸಹನವಿಲ್ಲ ಆ ಹಾರವರಿಗೆ. ಇತ್ತಿತ್ತಲಾಗಿ ಇವರಿಗೂ ಬೇಸರ ಬಂದು ರಾಜಕಾರಣವನ್ನೇ ಬಿಟ್ಟ ಹಾಗೆ ಮಾಡಿ ಮನೆ ಹಿಡಿದು ಕುಳಿತಿದ್ದಾರೆ. ನಾನನ್ನುತೇನೆ, ನಾವು ಹೀಗೆಲ್ಲಾ ಬೇಸರ ಮಾಡಿ ಕೊಳ್ಳಬಾರದು. ಕಾಂಗ್ರೆಸ್ಸಿನ ಅಧಿಕಾರ ಎಲ್ಲಾ ಆ ಹಾರವರಿಗೇ ಬಿಟ್ಟುಕೊಡ ಬಾರದು. ಆ ಕಡುಗಲಿಯೊಬ್ಬ ಹುಂಬ, ಏನೇನೂ ಬುದ್ಧಿಯಿಲ್ಲ ಅವನಿಗೆ. ಮೂರ್ಖತನ ಮಾಡಿ ಅಧಿಕಾರ ಕಳೆದುಕೊಂಡು ಕೂತ. ವೀರಣ್ಣನೂ ಹಾಗೇ. ದೊಡ್ಡ ಹುಚ್ಚ. ಸುಮ್ಮನೆ ನೆಹರೂನ ಹಾಗೆ ಡ್ರೆಸ್ ಮಾಡಿಕೊಂಡು ಡೌಲು ಮಾಡುತಾ ತಿರುಗುತಾನೆ. ಹೀಗೆಲ್ಲಾ ಮಾಡಿ ಜಿಲ್ಲಾ ಕಾಂಗ್ರೆಸನ್ನು ಹಾರವರ ಕೈಗೆ ಕೊಟ್ಟು ಕೂತರು ಈ ಪಂಡಿತರಿಬ್ಬರೂ... "

ಅಣಕದ ಧ್ವನಿಯಲ್ಲಿ ಸದಾಶಿವ ಹೇಳಿದ :

" ನೀವಾದರೂ ಹೋಗಿ ಹಿಡಿದುಕೊಳ್ಳಬಹುದಲ್ಲ ಅಧಿಕಾರವನ್ನು ! "

" ಈಗ ನಮ್ಮಂಥವರನ್ನು ಕರಕೊಂಡಾರೇನ್ರೀ ಆ ಹಾರವರು ? "

" ಬೇರೆ ಯಾವುದಾದರೂ ಪಕ್ಷ ಸೇರಿಕೊಳ್ಳಬಹುದಲ್ಲ ? "

" ಯಾವ ಪಕ್ಷವೆಂದರೂ ಎಲ್ಲಾ ಹಾರವರ ಕೈಯಲ್ಲೇ. ಸಮಾಜವಾದಿ ಪಕ್ಷ—ಅದೂ ಹಾರವರದೇ. ಪುರೋಗಾಮಿ ಪಕ್ಷ–ಅದೂ ಅವರದೇ. ಕಮ್ಯುನಿಸ್ಟ ಪಕ್ಷ ಅಂತೂ ಇಲ್ಲವೇ ಇಲ್ಲ ಇಲ್ಲಿ. ಅದು ಇದ್ದರೂ ಅಂಥಾದ್ದ ರಲ್ಲಿ ನಾವು ಸೇರಿಕೊಳ್ಳುವದು ಸಾಧ್ಯವೇ ಇಲ್ಲ. "

" ಯಾಕೆ ? "

" ನೀವೂ ಕಮ್ಯುನಿಸ್ಟರೆಂದು ಕೇಳಿದ್ದೇನೆ. ನಿಜವೆ ? " ಎಂದು ಪ್ರಶ್ನಿ ಸಿದ ಶಾಂತಣ್ಣ.

" ಅಲ್ಲ. "

" ಮತ್ತೆ ? ನಿಮ್ಮನ್ನು ಹಿಡಿದಾಗ ಸರಕಾರದವರು ಹಾಗೆಂದು ಪ್ರಕಟಿ ಸಿದ್ದರಲ್ಲಾ ? "

" ನನ್ನನ್ನು ಹಿಡಿದದ್ದಕ್ಕೊಂದು ಕಾರಣ ಕೊಡಬೇಕಾಗಿತ್ತು. ಕಮ್ಯು ನಿಸ್ಟ ಎಂದು ಹೇಳಿ ಯಾರನ್ನು ಬೇಕಾದರೂ ಹಿಡಿಯಬಹುದಲ್ಲಾ ? ಸರಿ, ನನಗೂ ಆ ಬಿರುದು ಬಂತು. "

"ಹಾಗಾದರೆ ನೀವು ಕಮ್ಯುನಿಸ್ಟರಲ್ಲ ಅಂದಂತಾಯ್ತು. ಬಹಳ ಸಂತೋಷ. ಬಹಳ ಸಂತೋಷ. ನಿಜ ಹೇಳಬೇಕಾದರೆ ಕಮ್ಯುನಿಸ್ಟರ ಕಿಡಿಗೇಡಿತನ ಕಂಡರಾಗುವದಿಲ್ಲ ನನಗೆ. ಶರಣರ ತತ್ವಗಳಿಗೂ ಕಮ್ಯುನಿಸ್ಟ್ ತತ್ವಗಳಿಗೂ ಪೂರ್ವಪಶ್ಚಿಮಗಳ ಅಂತರ."

"ಹಾಗಾದರೆ ನೀವು ಹಿಂದೂ ಮಹಾಸಭೆ ಸೇರಬೇಕು ನೋಡಿರಿ" ಎಂದ ಸದಾಶಿವ.

"ಹಿಂದೂ ಮಹಾಸಭೆ!? ಛೆ. ಛೆ. ಛೆ. ಎಂಥಾ ಮಾತಾಡ್ತೀರಿ ಸದಾಶಿವಣ್ಣಾ? ಅದಂತೂ ಹೇಳಿ ಕೇಳಿ ಪಕ್ಕಾ ಹಾರವರ ಸಂಸ್ಥೆ. ಅದಕ್ಕೂ ನಮಗೂ ಬದ್ಧವೈರ—ಹಾವು ಮುಂಗುಲಿ ಇದ್ದಂತೆ" ಎಂದು ಹೇಳಿ ಹಿ ಹಿ ಹ್ಹಿ ಎಂದು ನಕ್ಕ ಶಾಂತಣ್ಣ.

"ನೀವೇ ಒಂದು ರಾಜಕೀಯ ಪಕ್ಷ ಯಾಕೆ ಸುರು ಮಾಡಬಾರದು ವಕೀಲರೆ?" ಎಂದ ಕಲ್ಲನಗೌಡ.

"ಮಾಡಬೇಕೆಂತ ವಿಚಾರ ಏನೋ ಇದೆ ತಲೆಯಲ್ಲಿ. ಆದರೆ ನಮ್ಮ ಈ ಲಿಂಗಾಯತರೆಲ್ಲಾ ಕಾಂಗ್ರೆಸ್ಸಿನಲ್ಲೇ ಇದಾರಲ್ಲಾ ಇನ್ನು? ಅವರನ್ನೆಲ್ಲಾ ಬಿಟ್ಟು ನಾನೊಬ್ಬನೇ ಮಾಡಲಿಕ್ಕೆ ಸಾಧ್ಯವಾದೀತೇನ್ರೀ? ಪುಣ್ಯಕ್ಕೆ ಓರೆಕೋರೆ ಜಿಲ್ಲಾದಲ್ಲಿ ಲಿಂಗಾಯತ ಮುಖಂಡರು ಕೆಲವರು ಸೇರಿ ಒಂದು ಪಕ್ಷ ಸ್ಥಾಪಿಸುವ ವಿಚಾರದಲ್ಲಿದ್ದಾರೆ."

ಅದೊಂದು ಹೊಸ ವಾರ್ತೆಯಾಗಿತ್ತು ಸದಾಶಿವನಿಗೆ. "ಹೀಗೇನು? ಅಲ್ಲೂ ಒಂದು ಶರಣ ಶರಣೆಯರ ಪಕ್ಷ ಸುರುವಾಗುವದೋ ಏನು?"

"ಅಲ್ಲರೀ. ಅದು ರಾಜಕೀಯ ಪಕ್ಷ. ಶರಣ ಶರಣೆಯರ ಸಂಘ ಸಾಮಾಜಿಕ ಸಾಂಸ್ಕೃತಿಕ ಸಂಸ್ಥೆ. ಸ್ವಾತಂತ್ರ್ಯ ಬಂದು ಇಷ್ಟೇ ವರ್ಷ ಆದರೂ ಇನ್ನೂ ಕರ್ನಾಟಕ ಪ್ರಾಂತವಾಗಲಿಲ್ಲವಲ್ಲ. ಕಾಂಗ್ರೆಸ್ಸಿನಿಂದ ಕರ್ನಾಟಕ ರಾಜ್ಯ ಸಿಗುವದು ಸಾಧ್ಯವಿಲ್ಲ ಅಂತ ಕಂಡುಕೊಂಡ ಕೆಲವರು ಮುಖಂಡರು ಕೂಡಿ ಒಂದು ಪರಿಷತ್ತು ಸೇರಿಸಲು ನಿರ್ಧರಿಸಿದ್ದಾರೆ. ಓರೆಕೋರೆ ನಗರದ ಬಸೆಟ್ಟೆಯವರೂ ಇನಾಂದಾರ್ ಶಿವಪ್ಪನವರೂ ಬಹಳ ಹುರುಪಿನಿಂದ ಪರಿಷತ್ತಿನ ಸಿದ್ಧತೆ ಮಾಡುತ್ತಿದ್ದಾರೆ. ಇನ್ನು ಎರಡು ಮೂರು ತಿಂಗಳೊಳಗಾಗಿ ಪರಿಷತ್ತು ಕೂಡಬಹುದು."

ಸದಾಶಿವ ಮತ್ತೆ ತುಟಿ ಬಿಚ್ಚಲಿಲ್ಲ. ಬಸೆಟ್ಟೆಯವರಾಗಲಿ, ಶಿವಪ್ಪನವರಾಗಲಿ ಅವನಿಗೆ ಅಪರಿಚಿತರೇನೂ ಆಗಿರಲಿಲ್ಲ. ಹತ್ತು ವರ್ಷಗಳ ಹಿಂದೆ ಕಾಂಗ್ರೆಸ್ ಮುಖಂಡರಾಗಿದ್ದು, ವೈಯಕ್ತಿಕ ಜಗಳಗಳಿಂದಾಗಿ ಕಾಂಗ್ರೆಸ್ಸನ್ನು ತ್ಯಜಿಸಿ ಜಮೀನ್ದಾರರ ಗುಂಪಿಗೆ ಸೇರಿಕೊಂಡು ರೈತಸಂಘಟನೆಯನ್ನು ಹತ್ತಿಕ್ಕಲು ಯತ್ನಿಸುತ್ತಿದ್ದ ವೃದ್ಧ ಬಸೆಟ್ಟಿ. ಶಿವಪ್ಪನವರಾದರೋ ಐದಾರು ಸಾವಿರ ಎಕರೆ ಜಮೀನಿನ ಒಡೆಯರು. ವರ್ಷಕ್ಕೆ ಮೂವತ್ತು ನಲವತ್ತು ಸಾವಿರದ ಉತ್ಪನ್ನ ಅವರದು. ಓರೆಕೋರೆ ನಗರದ ವಿಸ್ತರಣವೊಂದರಲ್ಲಿ ದೊಡ್ಡ ಬಂಗಲೆ ಕಟ್ಟಿಸಿಕೊಂಡು ಸುಖವಾಗಿ ಕಾಲಹರಣ ಮಾಡುತ್ತಿದ್ದ ಸಿರಿವಂತರವರು. ಅಲ್ಪಸ್ವಲ್ಪ ಹಣ ಖರ್ಚು ಮಾಡಿ ಹೆಸರು ಗಳಿಸುವ ಹಂಬಲದಿಂದ ಆಗಾಗ ಸಾರ್ವಜನಿಕ ರಂಗಗಳಲ್ಲಿ ಮೆರೆದಾಡುವ ಹವ್ಯಾಸವೂ ಅವರಿಗಿತ್ತು. ಬ್ರಿಟಿಷ್ ಸರಕಾರವಿರುವ ವರೆಗೂ ಅದರ ಪರಮ ಭಕ್ತರಾಗಿದ್ದ ಅವರು ಕಾಂಗ್ರೆಸ್ ಸರಕಾರ ಅಧಿಕಾರ ಸ್ವೀಕರಿಸುತ್ತಲೂ ಬಣ್ಣ ಬದಲಿಸಿ ಕಾಂಗ್ರೆಸ್ಸಿಗರ ಪ್ರೀತಿಯನ್ನು ಗಳಿಸಲು ಯತ್ನಿಸಿದ್ದರಾದರೂ ಧೂರ್ತರಾದ ಕಾಂಗ್ರೆಸ್ಸಿಗರು ಅವರನ್ನು ಹತ್ತಿರ ಸೇರಿಸಿರಲಿಲ್ಲ. ಅಂತೆಯೆ, ಕೆಲವರು ಪ್ರತಿಗಾಮಿಗಳನ್ನೂ ಹಳೆಯ ಕಾಂಗ್ರೆಸ್ಸಿಗರನ್ನೂ ತಮ್ಮ ಸುತ್ತ ಸೇರಿಸಿಕೊಂಡು ಯಾವ ನಿಮ್ಮಿತ್ತದಿಂದಲಾದರೂ ಸಾರ್ವಜನಿಕ ರಂಗದಲ್ಲಿ ಕೀರ್ತಿ ಪಡೆಯಲೆತ್ನಿಸುತ್ತಿದ್ದರು. ಅವರಿಂದ ಆಗಾಗ ನೂರಿನ್ನೂರು ರೂಪಾಯಿ ಸಹಾಯ ಪಡೆದು ಅವರನ್ನು ಅವಾಸ್ತವವಾದ ರೀತಿಯಲ್ಲಿ ಸ್ತುತಿಸುವ ಚಿಕ್ಕದೊಂದು ಗುಂಪೂ ಓರೆಕೋರೆ ನಗರದಲ್ಲಿತ್ತು. ಅದರ ನೆರವಿನಿಂದ ತಾವೂ ಒಬ್ಬ ಜನನಾಯಕರಾಗುವ ಕನಸು ಕಾಣುತ್ತಿದ್ದರು ಶಿವಪ್ಪ.

ಸದಾಶಿವ ತನಗೆ ತಾನೇ ಹೇಳಿಕೊಂಡ :

“ ಕಾಂಗ್ರೆಸಿನ ವಿರುದ್ಧವಾಗಿ ರಾಜಕೀಯ ಪಕ್ಷವೊಂದು ಬೇಕೆಂಬುದೇನೊ ನಿಜವಾದರೂ, ಬಸೆಟ್ಟಿ ಮತ್ತು ಶಿವಪ್ಪರಂಥವರು ಹೂಡುವ ಪಕ್ಷದಿಂದ ಜನತೆಗೇನೂ ಉಪಯೋಗವಾಗಲಾರದು. ಕಾಂಗ್ರೆಸ್ಸು ಹುಲಿಯಂತೆ, ಇವರು ತೋಳಗಳಂತೆ. ಹುಲಿಗೆ ಎದುರಾಗಿ ಹೋರಾಡಲೆಂದು ತೋಳಗಳ ಬೆನ್ನು ಬೀಳುವುದುಂಟೇ ? ನಾಡಿನ ರೈತಕೂಲಿಕಾರರನ್ನು ಪ್ರತಿನಿಧಿಸುವ ಪ್ರಾಮಾಣಿಕ ಕಾರ್ಯಕರ್ತರ ಪಕ್ಷವೊಂದು ಇಂದು ಅವಶ್ಯ. ”

ಸೆರೆಮನೆಯಲ್ಲಿ ರೈತ ಕಾರ್ಯಕರ್ತ ಶ್ರೀಧರನಿಗೂ ತನಗೂ ನಡೆದ ಮಾತುಗಳನ್ನು ಮೆಲುಕು ಹಾಕಿದ ಸದಾಶಿವ. ಅವನ ಬಿಡುಗಡೆಯ ಮುನ್ನಾದಿನ ರಾತ್ರೆ ಬಹಳ ಹೊತ್ತಿನ ವರೆಗೂ ಭವಿಷ್ಯದ ವಿಚಾರವಾಗಿ ಚರ್ಚೆ ನಡೆದಿತ್ತು. ಅಷ್ಟೇನೂ ಉತ್ಸಾಹವಿಲ್ಲದ ಧ್ವನಿಯಲ್ಲಿ ಹೇಳಿದ್ದ ಶ್ರೀಧರ :

" ಬೇರೆ ಪ್ರಾಂತಗಳ ಮಾತಿರಲಿ. ಅಲ್ಲಿ ನಿರಾಸೆಗೆ ಅವಕಾಶವಿಲ್ಲ. ಮಹಾರಾಷ್ಟ್ರದಲ್ಲಿ ಕಾಂಗ್ರೆಸ್ ವಿರೋಧಿ ಪಕ್ಷಗಳಿಗೆ ಕೊರತೆಯಿಲ್ಲ. ಶೇತ್ಕರಿ ಕಾಮಕರಿ ಪಕ್ಷ ಚೆನ್ನಾಗಿ ಸಂಘಟಿತವಾಗಿ ಕೆಲಸ ನಡಸಿದೆ. ಕಾಂಗ್ರೆಸ್ಸಿನ ದುರಾಡಳಿತದಿಂದ ದೇಶವನ್ನುಳಿಸಲು ಕರ್ನಾಟಕದಲ್ಲಿ ಮಾತ್ರ ವಿರೋಧಿ ಪಕ್ಷಗಳಿಲ್ಲ. ನೀವು ಹೊರಗೆ ಹೋಗುತ್ತಲೂ ಮೊಟ್ಟಮೊದಲು ಈ ಕೆಲಸ ಕೈಗೊಳ್ಳಬೇಕು. ಪುರೋಗಾಮಿ ಪಕ್ಷದವರೂ ನಿಮಗೆ ನೆರವಾಗಬಹುದು. ವೀರಣ್ಣ, ಕಡುಗಲಿ ಮೊದಲಾದವರನ್ನೆಲ್ಲಾ ಕಾಂಗ್ರೆಸ್ಸಿನಿಂದ ಹೊರಗೆಳೆಯಲು ಯತ್ನಿಸಬೇಕು ಅವರೆಲ್ಲಾ ಸೇರಿದರೆ ಬಲವಾದ ವಿರೋಧಿ ಪಕ್ಷವಾದೀತು. "

ಶ್ರೀಧರ ಮತ್ತೆ ಹೇಳಿದ್ದ :

" ನಮ್ಮನ್ನು ಯಾವಾಗ ಬಿಡುವರೋ ತಿಳಿಯುವಂತಿಲ್ಲ. ಇನ್ನು ಎಷ್ಟು ದಿನ ನಾವು ಜೈಲಿನಲ್ಲೇ ಕೊಳೆಯಬೇಕಾಗುವದೋ ಏನೊ. ನೀವು ಮಾತ್ರ ಮತ್ತೆ ಜೈಲಿಗೆ ಬರುವಂಥಾದ್ದೇನನ್ನೂ ಮಾಡದೆ ಎಡಪಕ್ಷಗಳನ್ನೆಲ್ಲಾ ಒಟ್ಟುಗೂಡಿಸಿ ಸಂಯುಕ್ತ ರಂಗವೊಂದನ್ನು ರಚಿಸಲು ಯತ್ನಿಸಬೇಕು. ಕರ್ನಾಟಕದಲ್ಲಿ ಇನ್ನೂ ಗಂಡಸುತನವಿದೆಯೆಂಬುದನ್ನು ಸಿದ್ಧ ಮಾಡಿಕೊಡುವದು ನಿಮ್ಮನ್ನೇ ಕೂಡಿದೆ ಸದಾಶಿವಣ್ಣಾ ! "

ತನ್ನ ಪೌರುಷಕ್ಕೇ ಆಹ್ವಾನದಂತಿತ್ತು ಶ್ರೀಧರನ ಆ ಮಾತು. ಸೆರೆಮನೆಯಿಂದ ಹೊರಡುತ್ತಾ ತಾನು ಮನಸ್ಸಿನಲ್ಲಿಯೇ ದೃಢಸಂಕಲ್ಪ ಮಾಡಿಕೊಂಡು ಬಂದಿದ್ದ : ಕಾಂಗ್ರೆಸ್ಸಿಗೆದುರಾಗಿ ಜನತಾ ಪಕ್ಷವೊಂದನ್ನು ಸಂಘಟಿಸಬೇಕು, ಅದೇ ತನ್ನ ಮುಂದಿರುವ ಅವಸರದ ಕೆಲಸ.

ಕೊಂಚವೂ ವಿರಮಿಸದೆ ತಾನು ಆ ಕೆಲಸಕ್ಕೆ ತೊಡಗಬೇಕಿತ್ತು. ಅದನ್ನಾರಂಭಿಸಿದ ವಿನಾ ತನ್ನ ಮನಸ್ಸಿಗೆ ಸಮಾಧಾನ ಲಭಿಸುವಂತಿಲ್ಲ.

ಬಸೆಟ್ಟಿ, ಶಿವಪ್ಪ, ಟೋಪಿ ಶಾಂತಣ್ಣ ಇಂಥ ಜನರೊಡನೆ ಸೇರಿಕೊಳ್ಳುವುದರಿಂದ ತನ್ನ ಉದ್ದೇಶ ಸಾಧಿಸುವುದೇ ? "

" ಛೆ. ಅವರ ಉದ್ದೇಶ ಬೇರೆ ; ನನ್ನದು ಬೇರೆ. ಎರಡೂ ಜತೆಗೂಡುವುದು ಸಾಧ್ಯವೇ ಇಲ್ಲ " ಎಂದು ಮನಸ್ಸಿನಲ್ಲಿಯೆ ಹೇಳಿಕೊಂಡು ಕಲ್ಲನಗೌಡನ ಕೊಟಡಿಯಿಂದ ಹೊರಟ ಸದಾಶಿವ.

" ನಾಳೆ ಮುಂಜಾನೆ ಊಟಕ್ಕೆ ಬರಬೇಕು ಹಂ. ಮರೆಯಬಾರದು ಮತ್ತೆ ! " ಎಂದ ಶಾಂತಣ್ಣ.

" ಮೋಟಾರು ಸೈಕಲ್ ಮೇಲೆ ಹೋಗೋಣವೇನು ಸದಾಶಿವಣ್ಣಾ ? " ಎಂದು ಕೇಳಿದ ಕಲ್ಲನಗೌಡ.

" ಏನೂ ಬೇಡ. ನಾನು ಸ್ವಲ್ಪ ಹೀಗೆ ತಿರುಗಾಡಿಕೊಂಡು ಮಾವನವರನ್ನು ನೋಡಿಕೊಂಡು ಬಂದುಬಿಡುತೇನೆ. "

## ೩

ನಗರದ ಮುಖ್ಯ ಬೀದಿಯಲ್ಲಿ ಸದಾಶಿವ ಹೊರಟಿದ್ದ ಹಾಗೆ ಎದುರಿನಿಂದ ಸೈಕಲ್ ಮೇಲೆ ಬರುತ್ತಿದ್ದ ಪ್ರೌಢವಯಸ್ಸಿನ, ಎತ್ತರದ, ಸುದೃಢ ಮೈಕಟ್ಟಿನ ಆಸಾಮಿಯೊಬ್ಬ ಇವನನ್ನು ಕಂಡು ಸೈಕಲಿನಿಂದಿಳಿದ; ಹತ್ತಿರ ಬಂದು "ಹಲೋ ಸದಾಶಿವ!" ಎಂದು ಹೇಳುತ್ತಾ ಹಸ್ತಾಂದೋಲನ ಮಾಡಿದ.

"ಹ್ಯಾಗಿದ್ದೀರಿ ಎಡ್ವರ್ಡ್?" ಎಂದು ಸಂತೋಷದಿಂದ ವಿಚಾರಿಸಿದ ಸದಾಶಿವ. ಎಡ್ವರ್ಡ್ ವಿದೇಶೀಯನೇನೂ ಅಲ್ಲ; ಭಾರತೀಯ ಕ್ರೈಸ್ತ. ಮೊದಲಿನಿಂದಲೂ ಅವರ ಮನೆತನ ರಾಷ್ಟ್ರವಾದಿಯಾಗಿತ್ತು. ಎಡ್ವರ್ಡನೂ ಅವನ ಅಣ್ಣ ಥಾಮಸನೂ ಎಷ್ಟೋ ಸಲ ಸೆರೆಮನೆಗೆ ಹೋಗಿ ಬಂದಿದ್ದರು. ನಲವತ್ತೆರಡರ ಚಳುವಳಿಯ ಕಾಲಕ್ಕೆ ಕಳ್ಳೇಕಾಯಿ ನಗರದಲ್ಲೂ ಸುತ್ತಲಿನ ಸೀಮೆಯಲ್ಲೂ ಅನೇಕ ಸಾಹಸ ಕೃತ್ಯ ನಡಸಿ ಹೆಸರುವಾಸಿಯಾಗಿದ್ದ ಎಡ್ವರ್ಡ್. ಅವನು ಸುಭಾಷಚಂದ್ರ ಬೋಸರ ಅನುಯಾಯಿ. ಜೋಶಿ ರಾಮಣ್ಣನ ಜತೆ ಸೇರಿ ಕರ್ನಾಟಕದಲ್ಲಿ ಪುರೋಗಾಮಿ ಪಕ್ಷ ಸಂಘಟಿಸಲು ವಿರಾಮವಿಲ್ಲದೆ ದುಡಿಯುತ್ತಿದ್ದ. ಅವನು ಅತ್ಯಂತ ಉಗ್ರ ಸ್ವಭಾವದವನಾಗಿದ್ದುದರಿಂದ ಕಾಂಗ್ರೆಸ್ಸಿಗರೂ ಪೋಲೀಸಿನವರೂ ಅವನ ಹೆಸರು ಕೇಳಿದೊಡನೆ ದಿಗಿಲುಗೊಳ್ಳುತ್ತಿದ್ದರು. ಅವನಿಗಿನ್ನೂ ನಲವತ್ತರ ಪ್ರಾಯ. ಯಾವಾಗಲೂ ಐ. ಎನ್. ಎ. ಯ ಸೈನಿಕ ಸಮವಸ್ತ್ರ ಧರಿಸಿ ನಗರದ ಜನರಿಗೆಲ್ಲ ಕೌತುಕಕ್ಕೆ ಕಾರಣವಾಗುವಂತೆ ಠೀವಿಯಿಂದ ಸಂಚರಿಸುತ್ತಿದ್ದ. ನೇತಾಜಿ ಬೋಸರ ಬಗೆಗೆ ಅವನಲ್ಲಿದ್ದ ನಿಷ್ಠೆ ಅನ್ಯಾದೃಶ್ಯವಾದುದಾಗಿತ್ತು. ಅವನು ಅಷ್ಟು ಓದಿಕೊಂಡವನೇನೂ ಆಗಿರಲಿಲ್ಲ. ರಾಜಕೀಯ ಚದುರಂಗದಾಟವನ್ನೂ ಅವನು ಅರಿತಿರಲಿಲ್ಲ. ನಾಯಕರಿಂದ ದೊರೆತ ಸೂಚನೆಗಳ ಮೇರೆಗೆ ದುಡಿಯುವುದರಲ್ಲಿ ಮಾತ್ರ ಅವನನ್ನು ಸರಿಗಟ್ಟುವವ

ರಿನ್ನಾರೂ ಇರಲಿಲ್ಲ. “ ಇಂದು ಹಿಂದೂಸ್ಥಾನಕ್ಕೆ ಶಿಸ್ತಿನ ಸಿಪಾಯಿಗಳು ಬೇಕು. ದಿನಕ್ಕೊಮ್ಮೆ ಬಣ್ಣ ಬದಲಿಸುವ ರಾಜಕಾರಣಿಗಳನ್ನೆಲ್ಲ ಗುಂಡಿಟ್ಟು ಸುಡಬೇಕು” ಎಂದು ಆತನ ಅಭಿಪ್ರಾಯ. ಎಂಥ ಗಂಡಾಂತರದ ಕಾರ್ಯಕ್ಕೂ ಹಿಂದೆ ಮುಂದೆ ನೋಡದೆ ಧುಮುಕುವ ಅವನ ಸಾಹಸ ಪ್ರಿಯತೆಯನ್ನೂ ಕೆಚ್ಚನ್ನೂ ಕಂಡು ಮೆಚ್ಚಿಕೊಂಡಿದ್ದ ಸದಾಶಿವ ಅನೇಕ ವರ್ಷಗಳಿಂದ ಅವನನ್ನು ಆತ್ಮೀಯತೆ ಯಿಂದ ಕಾಣುತ್ತ ಬಂದಿದ್ದ.

ಸದಾಶಿವನ ಕೈಯನ್ನು ಬಲವಾಗಿ ಕುಲುಕಿಸುತ್ತ ಎಡ್ವರ್ಡ್ ಹೇಳಿದ :

“ ನಿಮ್ಮ ಬಿಡುಗಡೆಯ ಸುದ್ದಿ ಗೊತ್ತಿತ್ತು. ನಾನು ಊರಲ್ಲಿರಲಿಲ್ಲ. ಓರೆಕೋರೆ ನಗರಕ್ಕೆ ಹೋಗಿದ್ದವನು ಇದೇ ಈಗ ಬಂದೆ. ಬನ್ನಿರಲ್ಲ, ರಾಮಣ್ಣನ ಹತ್ತಿರ ಹೋಗೋಣ ”

“ ರಾಮಣ್ಣ ಈಗ ಇರುತ್ತಾರೇನು ಅಂಗಡಿಯಲ್ಲಿ ? ಊಟಕ್ಕೆ ಹೋಗಿರ ಬಹುದೋ ಏನೊ. ”

“ ಅವರು ಊಟಕ್ಕೆ ಹೋಗುವದು ಎರಡು ಗಂಟೆಗೆ. ಬರ್ರಿ. ಬರ್ರಿ ” ಎಂದವನೆ, ಸದಾಶಿವನನ್ನು ಎಳೆದುಕೊಂಡೇ ಹೊರಟ ಎಡ್ವರ್ಡ್.

ಪುರೋಗಾಮಿ ಪಕ್ಷದ ಪ್ರಧಾನ ಕಾರ್ಯದರ್ಶಿಯೂ ಪ್ರಮುಖ ಕಾರ್ಯ ಕರ್ತನೂ ಆಗಿದ್ದ ಜೋಶಿ ರಾಮಚಂದ್ರರಾಯನನ್ನು ಅವನ ಗೆಳೆಯರೂ ಸಹ ಕಾರ್ಯಕರ್ತರೂ ‘ ರಾಮಣ್ಣ ’ ಎಂದೇ ಸಂಬೋಧಿಸುತ್ತಿದ್ದರು. ಎಡ್ವರ್ಡನ ಹಾಗೆ ರಾಮಣ್ಣನೂ ಸಾಕಷ್ಟು ಬಲಶಾಲಿಯಾದ ಆಳು. ನೆಹರೂ ಶರ್ಟು ಜಾಕೆಟ್ಟುಗಳಲ್ಲಿ ಎದ್ದು ಕಾಣುವ ಎದೆಯನ್ನು ಸೆಟೆಸಿಕೊಂಡು, ತಲೆಯ ಮೇಲೆ ಓರೆಯಾಗಿ ಗಾಂಧಿ ಟೋಪಿ ಇಟ್ಟುಕೊಂಡು ಗಂಭೀರವಾಗಿ ಹೆಜ್ಜೆಯಿಡುತ್ತಾ ರಾಮಣ್ಣ ಹೊರಟನೆಂದರೆ ಬೀದಿಯಲ್ಲಿನ ಜನರೆಲ್ಲರೂ ಅವನನ್ನು ಮೆಚ್ಚುಗೆಯ ದೃಷ್ಟಿಯಿಂದ ಮಿಕಿಮಿಕಿ ನೋಡುತ್ತಿದ್ದರು. ಅವನು ಮೊದಲಿನಿಂದಲೂ ತತ್ವ ನಿಷ್ಠ ಆಸಾಮಿ. ಸ್ವಭಾವತಃ ಉತ್ಸಾಹಿಯೂ ಸಾಹಸಿಗನೂ ಆದುದರಿಂದ ಕಾಂಗ್ರೆಸ್ಸಿಗರ ಸಪ್ಪೆ ಧೋರಣೆ ಅವನಿಗೆ ಕೊಂಚವೂ ಹಿಡಿಸಿರಲಿಲ್ಲ. ಅಂತೆಯೆ ಅವನು ಸುಭಾಷಚಂದ್ರ ಬೋಸರ ಅನುಯಾಯಿಯಾಗಿ, ಪುರೋಗಾಮಿ ಪಕ್ಷ ಸ್ಥಾಪಿತವಾದಂದಿನಿಂದಲೂ ಅದನ್ನು ಕರ್ನಾಟಕದಲ್ಲಿ ಲೋಕಪ್ರಿಯಗೊಳಿಸಲು

ದುಡಿಯುತ್ತ ಬಂದಿದ್ದ. ಪಕ್ಷದ ಕೆಲಸದಲ್ಲಿ ತೊಡಗಿದ್ದಾಗ ಆತ ಮನೆ ಅಂಗಡಿ ಯಾವುದರ ಕಡೆಗೂ ಗಮನವೀಯುತ್ತಿರಲಿಲ್ಲ. ಕಳ್ಳೇಕಾಯಿ ನಗರದಲ್ಲಿನ ಕೆಲವೇ ದೊಡ್ಡ ಸ್ಟೇಶನರಿ ಅಂಗಡಿಗಳಲ್ಲಿ ರಾಮಣ್ಣನದೂ ಒಂದು. ತನ್ನ ಸಮಯವನ್ನೂ ಜಾಣ್ಮೆಯನ್ನೂ ಅವನು ವ್ಯಾಪಾರದಲ್ಲೇ ವಿನಿಯೋಗಿಸಿದ್ದಲ್ಲಿ ಲಕ್ಷಾಧೀಶನಾಗಬಹುದಾಗಿತ್ತು. ಆದರೆ, ರಾಮಣ್ಣ ಅಂಗಡಿಯಲ್ಲಿರುತ್ತಿದ್ದುದೇ ಅಪರೂಪವಾಗಿ. ವಾರದಲ್ಲಿ ನಾಲ್ಕೈದು ದಿನ ಅವನು ಊರಲ್ಲೇ ಇರುತ್ತಿರಲಿಲ್ಲ. ಧ್ವನಿವರ್ಧಕ ಯಂತ್ರವನ್ನೊಳಗೊಂಡ ಮೋಟಾರುಕಾರು ಬಿಟ್ಟುಕೊಂಡು ಪಕ್ಷದ ಪ್ರಚಾರಕ್ಕೆಂದು ಹಳ್ಳಿ ಪಳ್ಳಿ ಸುತ್ತುತ್ತಿದ್ದ. ಅಂಗಡಿಯಿಂದ ಬಂದ ಲಾಭದಲ್ಲಿ ಹೆಚ್ಚು ಭಾಗ ಪಕ್ಷದ ಪ್ರಚಾರ ಕಾರ್ಯಕ್ಕೇ ವಿನಿಯೋಗವಾಗುತ್ತಿತ್ತು. ಎಂಟು ಹತ್ತು ವರ್ಷಗಳ ಅವಧಿಯಲ್ಲಿ ಹತ್ತು ಹನ್ನೆರಡು ಸಾವಿರ ರೂಪಾಯಿಗಳ ವರೆಗೂ ಹಾಗೆ ಹೊರಟು ಹೋಗಿತ್ತು. ಹಣಕಾಸಿನ ಬಗೆಗೆ ಎಂದೂ ಚಿಂತಿಸಿದವನಲ್ಲ ರಾಮಣ್ಣ. "ಹೀಗೆಲ್ಲ ನಿಮ್ಮ ಕಿಸೆಯಿಂದ ಖರ್ಚು ಮಾಡಿದರೆ ಹ್ಯಾಗೆ ?" ಎಂದು ಗೆಳೆಯರಾರಾದರೂ ಕೇಳಿದಾಗ ಅವನು ನಕ್ಕು ಹೇಳುತ್ತಿದ್ದ: "ನಮ್ಮ ಕಿಸೆಯಿಂದ ಮಾಡದೆ ಮತ್ತೇನು ನಿಮ್ಮ ಕಿಸೆಯಿಂದ ಮಾಡಬೇಕೋ ?" "ಪಕ್ಷದ ಕೇಂದ್ರ ಸಮಿತಿಯವರೇಕೆ ಹಣ ಕೊಡಬಾರದು ?" ಎಂದು ಗೆಳೆಯರು ಪ್ರಶ್ನಿಸುತ್ತಿದ್ದರು. "ಪಾಪ, ಅವರ ಹತ್ತಿರ ರೈಲಿಗೆ ಹೋಗಲು ಹಣವಿರುವದಿಲ್ಲ ಇನ್ನು ನಮಗೆಲ್ಲಿಂದ ಕೊಟ್ಟಾರು ?" ಎಂದು ಉತ್ತರವಿತ್ತು ಆ ವಿಷಯವನ್ನೇ ಮರೆಯಿಸುತ್ತಿದ್ದ ರಾಮಣ್ಣ.

ಎಡ್ವರ್ಡನೊಂದಿಗೆ ಸದಾಶಿವ ಅಂಗಡಿಯ ಬಳಿ ಬಂದಾಗ ಪರಸ್ಥಳದವರಿಬ್ಬರು ರಾಮಣ್ಣನೊಡನೆ ಮಾತನಾಡುತ್ತ ಕುಳಿತಿದ್ದುದು ಕಾಣಿಸಿತು. ಅವರಲ್ಲೊಬ್ಬ ಮೂವತ್ತು ಮೂವತ್ತೈದರ ಪ್ರಾಯದ ತೆಳ್ಳನೆಯ ಕುಳ್ಳನೆಯ, ನೆಹರೂ ಶರ್ಟಿನ, ರುಮಾಲಿನ, ದೋತರದ ಆಸಾಮಿ. ಅವನನ್ನು ಸದಾಶಿವ ಅದಕ್ಕೆ ಮೊದಲು ಎಂದೂ ನೋಡಿದಂತಿರಲಿಲ್ಲ. ಇನ್ನೊಬ್ಬ ಸುಮಾರು ಮೂವತ್ತರ ವರುಷದ, ಕ್ಷಯರೋಗಿಯಂತೆ ಕಾಣುವ ದೇಹದ, ಖಾದಿ ಬಟ್ಟೆಯ ನೆಹರೂ ಬನೀನು ಪಾಯಿಜಾಮುಗಳ, ಬಕ್ಕತಲೆಯ ಆಸಾಮಿ. ಯಾವುದೋ ಊರಲ್ಲಿ, ಯಾವುದೋ ಸಭೆಯ ಕಾಲಕ್ಕೆ ಅವನನ್ನು ನೋಡಿದ

ಹಾಗೆ ಜ್ಞಾಪಕವಿತ್ತು ಸದಾಶಿವನಿಗೆ. ಅವನ ಹೆಸರು ಮಾತ್ರ ನೆನಪಿನಲ್ಲಿರಲಿಲ್ಲ.

ಕುಳಿತ ಸ್ಥಳದಿಂದೆದ್ದು ಬಂದು ಸದಾಶಿವನನ್ನು ಹೃತ್ಪೂರ್ವಕವಾಗಿ ಆಲಿಂಗಿಸಿಕೊಂಡು ಪ್ರೀತಿಯಿಂದಲೂ ಆದರದಿಂದಲೂ ಗಾಡಿಯ ಮೇಲೆ ಕೂಡಿಸುತ್ತ ರಾಮಣ್ಣ ಹೊಸಬರ ಪರಿಚಯ ಮಾಡಿಕೊಟ್ಟ. ರುಮಾಲಿನವನನ್ನು ತೋರಿಸುತ್ತ :

"ಇವರು ಮೂರುಸಾವಿರಪ್ಪ ಅಂತ. ರೈತಮುಖಂಡರು. ತಮ್ಮ ತಾಲ್ಲೂಕಿನಲ್ಲಿ ರೈತಸಂಘಟನೆ ಮಾಡುತ್ತಿದ್ದಾರೆ" ಎಂದು ವಿವರಿಸಿ, ಪಾಯಿಜಾಮುದವನನ್ನು ಕುರಿತು, "ಇವರು ಈಶ್ವರಪ್ಪನವರು, ಲೇಖಕರು. ಮೊದಲು ಪತ್ರಿಕೆಗಳಲ್ಲಿ ಕೆಲಸ ಮಾಡುತ್ತಿದ್ದರು. ಈಗ ತಮ್ಮ ಊರಲ್ಲಿದ್ದಾರೆ" ಎಂದು ಹೇಳಿ, ಸದಾಶಿವನನ್ನು ಅವರಿಗೆ ಪರಿಚಯ ಮಾಡಿಕೊಟ್ಟ.

"ಗದಗಿನಲ್ಲೊಮ್ಮೆ ನಿಮ್ಮನ್ನು ನೋಡಿದ್ದೆ. ನಿಮ್ಮ ಬಗ್ಗೆ ನನಗೆ ಬಹಳ ಅಭಿಮಾನ" ಎಂದ ಈಶ್ವರ.

"ನಮ್ಮ ರೈತೋದ್ಧಾರ ಸಂಘದ ವಾರ್ಷಿಕೋತ್ಸವ ನಡೆಯೂದೈತಿ. ನೀವೇ ಅಧ್ಯಕ್ಷರಾಗಿ ಬರಬೇಕು. ಆ ಕೃಷ್ಣಾಜಿಯನ್ನ ಫಜೀತಿ ಮಾಡುವ ಹಾಂಗ ಭಾಷಣಾ ಮಾಡಬೇಕು" ಎಂದ ಮೂರುಸಾವಿರಪ್ಪ.

ಕೃಷ್ಣಾಜಿಯೆಂದರೆ ಕಳ್ಳೀಕಾಯಿ ನಗರದ ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿ. ಎಂಟು ವರ್ಷಗಳ ಹಿಂದೆ ಸದಾಶಿವ ಕಾಂಗ್ರೆಸ್ಸಿನಲ್ಲಿಯೆ ಇದ್ದಾಗ ಕೃಷ್ಣಾಜಿಯೊಡನೆ ಕೂಡಿ ಕೆಲಸ ಮಾಡಬೇಕಾದ ಸಂದರ್ಭಗಳೆಷ್ಟೊ ಬಂದಿದ್ದುವು. ಆಗ ಅವನು ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿಯಾಗಿರಲಿಲ್ಲ. ನೂರಾರು ಜನ ಕಾರ್ಯಕರ್ತರ ಹಾಗೆ ಅವನೂ ಒಬ್ಬ ಸಾಮಾನ್ಯ ಕಾರ್ಯಕರ್ತನಾಗಿದ್ದ. ತನ್ನ ಪಾಲಿಗೆ ಬಂದ ಕೆಲಸವನ್ನು ಮನಃಪೂರ್ವಕವಾಗಿಯೂ ಕಡು ಶಿಸ್ತಿನಿಂದಲೂ ಮಾಡುವುದು ಅವನ ಸ್ವಭಾವವಾಗಿದ್ದುದರಿಂದ ಅಲ್ಪಾವಧಿಯಲ್ಲಿಯೆ ಎಲ್ಲರ ಮೆಚ್ಚುಗೆ ಗಳಿಸಿ ಉತ್ತಮ ಕೆಲಸಗಾರನೆಂದು ಹೆಸರು ಪಡೆದಿದ್ದ. ನಲವತ್ತೆರಡರ ಚಳುವಳಿಯ ಕಾಲಕ್ಕೆ ಕೆಲವು ತಿಂಗಳುಗಳ ವರೆಗೆ ಸದಾಶಿವನೂ ಕೃಷ್ಣಾಜಿಯೂ ಜತೆಯಾಗಿ ಕೆಲಸ ಮಾಡಿದ್ದರು. ಆ ಸಮಯ

ವಲ್ಲಿ ಅನೇಕರು ಕೈಗೊಂಡ ವಿಧ್ವಂಸಕ ಕೃತ್ಯಗಳು ಗಾಂಧೀ ವಾದಿಯಾಗಿದ್ದ ಕೃಷ್ಣಾಜಿಗೆ ಒಪ್ಪಿತವಾಗಲಿಲ್ಲ. ತನ್ನ ಪ್ರಾಮಾಣಿಕ ಅಭಿಪ್ರಾಯವನ್ನು ಸ್ಪಷ್ಟ ವಾದ ಭಾಷೆಯಲ್ಲಿ ಮಂಡಿಸಿ ಅವನು ಚಳುವಳಿಯ ಬಗ್ಗೆ ತಟಸ್ಥ ಧೋರಣೆ ವಹಿಸಿ ದೂರವಾದ. ಪರಕೀಯರನ್ನು ಹೊಡೆದೋಡಿಸಲು ಶಸ್ತ್ರಾಸ್ತ್ರಗಳನ್ನುಪ ಯೋಗಿಸುವುದು ಅನುಚಿತವಲ್ಲವೆಂದು ಬಗೆದ ಸದಾಶಿವ ಕ್ರಾಂತಿಕಾರರ ನಾಯಕ ಸ್ವಾಮಿಯ ಗುಂಪಿಗೆ ಸೇರಿಕೊಂಡ. ಅಲ್ಲಿಂದೀಚೆಗೆ ಅವರಿಬ್ಬರೂ ಪರಸ್ಪರರನ್ನು ಕಂಡಿರಲಿಲ್ಲ. ಕೃಷ್ಣಾಜಿಯ ಧೋರಣೆ ಒಪ್ಪಿತವಾಗಿರಲಿಲ್ಲವಾದರೂ ವೈಯಕ್ತಿಕವಾಗಿ ಅವನ ಬಗ್ಗೆ ವಿರೋಧ ಭಾವನೆಯೇನೂ ಸದಾಶಿವನಿಗಿರ ಲಿಲ್ಲ. ಅಂತೆಯೆ, ಕೃಷ್ಣಾಜಿಯ ಫಜೀತಿ ಮಾಡಬೇಕೆಂದು ಮೂರುಸಾವಿರಪ್ಪ ಹೇಳಿದಾಗ ಸದಾಶಿವನಿಗೆ ವಿಸ್ಮಯವಾಗದಿರಲಿಲ್ಲ.

"ಫಜೀತಿ? ಯಾಕೆ?" ಎಂದು ಅವನು ಪ್ರಶ್ನಿಸಿದ, ಮೀಸೆಯ ಕುಡಿ ತಿದ್ದುತ್ತ.

ವಿಕಾರವಶ ವ್ಯಕ್ತಿಯಂತೆ ವಿಚಿತ್ರವಾಗಿ ಕೈಬೀಸುತ್ತ ಉದ್ರಿಕ್ತ ಧ್ವನಿಯಲ್ಲಿ ಹೇಳಿದ ಮೂರುಸಾವಿರಪ್ಪ:

"ಅಧಿಕಾರ ಕೈಗೆ ಬಂದಾಗಿಂದ ಬಹಳ ಸೊಕ್ಕಿಗೆ ಬಂದಾನವ ಮಗ. ನನ್ನ ವ್ಯಾಲ ಗುಂಡಾಕಾಯದೆ ತಂದು ಗಡೀಪಾರು ಮಾಡಿಸಬೇಕಂತ ಹೊಂಚು ಹಾಕಿದ್ದಾನೆ."

"ನಿಜವೇನ್ರಿ?" ಎಂದು ರಾಮಣ್ಣನನ್ನು ವಿಚಾರಿಸಿದ ಸದಾಶಿವ.

"ಇದ್ದರೂ ಇರಬಹುದು" ಎಂದ ರಾಮಣ್ಣ.

ಈಶ್ವರ ಹೇಳತೊಡಗಿದ:

"ಹೌದು. ನಾನೂ ಕೇಳಿದ್ದೇನೆ. ಮೊನ್ನೆ ಒಬ್ಬರು ಸಿ. ಐ. ಡಿ. ಇನ್ಸ್ಪೆಕ್ಟರು ಬಂದು ಸುತ್ತುಮುತ್ತಲಿನ ಹಳ್ಳಿಗಳ ಜನರನ್ನು ಭೆಟ್ಟಿಯಾಗಿ ಇವರ ನಡತೆಯ ಬಗ್ಗೆ ಕೇಳಿಕೊಂಡು ಹೋದರು."

"ಇದೆಲ್ಲಾ ರಾಡಿ ಆ ಕೃಷ್ಣಾಜೀದೇ. ಮೊದಲಿಂದಲೂ ಅವಗೆ ನನ್ನ ಕಂಡರಾಗುವದಿಲ್ಲ. ಈಗೊಂದು ವರ್ಷದಿಂದ ನಾ ರೈತಸಂಘಟನಾ ಮಾಡುತ್ತಿರೂದು ಅವನ ಕಣ್ಣಾಗ ಚುಚ್ಚಲಿಕ್ಕೆ ಹತ್ತೈತಿ. ಜಮೀನ್ದಾರರೆಲ್ಲಾ ಅವಗ

ಲಂಚ ಕೊಟ್ಟು ನನ್ನ ಊರು ಬಿಡಿಸಿ ಗಡೀಪಾರು ಮಾಡಲಿಕ್ಕೆ ಹಚ್ಚಿದ್ದಾರ" ಎಂದ ಮೂರುಸಾವಿರಪ್ಪ.

" ನಿಮ್ಮ ಪಕ್ಷದ ಕೆಲಸ ಹ್ಯಾಗೆ ನಡೆದಿದೆ ರಾಮಣ್ಣನವರೆ ? " ಎಂದು ಕೇಳಿದ ಸದಾಶಿವ.

" ಜೋರಾಗಿ ನಡೆದಿದೆ. ಎಲ್ಲಾ ಜಿಲ್ಲೆಗಳನ್ನೂ ತಿರುಗಿ ಸದಸ್ಯರನ್ನು ಮಾಡುತ್ತಿದ್ದೇವೆ. ನಿಮ್ಮಂಥವರು ನಮ್ಮನ್ನು ಕೂಡಿಕೊಂಡರೆ ಬೇಕಾದ್ದು ಮಾಡಬಹುದು. "

" ಚೆನ್ನಯ್ಯಶಾಸ್ತ್ರಿ ಸದಸ್ಯನಾದನಂತಲ್ಲ ? "

" ಇನ್ನೂ ಆಗಿಲ್ಲ. ಅವನಿಗೇನೋ ಮನಸ್ಸಿದೆ. ಬಹಳ ಹುರುಪಿನ ಗಡಿ ಅದು. ಆದರೆ ಅವನ ಗುಂಪಿನ ಮಂದಿ ಮಾತ್ರ ಅವವನ್ನು ಕಟ್ಟಿಹಾಕಿದಂತೆ ಮಾಡಿದ್ದಾರೆ. "

" ಕಡುಗಲಿ ? "

" ಅವನಿಗೂ ನಮ್ಮ ಬಗ್ಗೆ ಸಹಾನುಭೂತಿಯಿದೆ. ಆದರೆ ವಿಶಾಲಪ್ಪ ನವರು ಹುಕುಂ ಕೊಟ್ಟ ಹಾಗೆ ಮಾಡುವವನು ಇವ. ಅವರು ಏನೇನೋ ಆಸೆ ಯಿಟ್ಟುಕೊಂಡವರು. ಕಾಂಗ್ರೆಸ್ ಬಿಟ್ಟು ಬರುವಂತೆ ಕಾಣುವದಿಲ್ಲ. "

" ಪುರೋಗಾಮಿ ಪಕ್ಷ ಪ್ರಬಲವಾಗಿ ಅಧಿಕಾರ ಸ್ವೀಕರಿಸುವಷ್ಟು ಸಮ ರ್ಥವಾದರೆ ಮಂತ್ರಿಯಾಗಲು ಮುಂದೆ ಬರಬಹುದು ವಿಶಾಲಪ್ಪ" ಎಂದ ಎಡ್ವರ್ಡ್.

" ಹೋಗಲಿ ಬಿಡಿರಿ. ಅವರನ್ನಾದರೂ ಯಾಕೆ ಟೀಕೆ ಮಾಡುವದು ? ನಮ್ಮಿಂದಾದಷ್ಟು ಕೆಲಸ ನಾವು ಮಾಡೋಣ. ನಿಮ್ಮ ಕಾರ್ಯಕ್ರಮ ಏನು ಸದಾಶಿವಣ್ಣಾ ? " ಎಂದು ಕೇಳಿದ ರಾಮಣ್ಣ.

" ಚುನಾವಣೆಯಂತೂ ಹತ್ತಿರ ಬಂತಲ್ಲ. ಕೂಡಲೆ ವಿರೋಧಿ ಪಕ್ಷ ಸಂಘಟಿಸಬೇಕು ನಾವು. "

ಮೂರುಸಾವಿರಪ್ಪ ಥಟ್ಟನೆ ಧ್ವನಿಯೆತ್ತಿ ಬಿಂಕದಿಂದ ಹೇಳಿದ :

" ನಾನಾಗಲೇ ನಮ್ಮ ತಾಲ್ಲೂಕಿನಲ್ಲೆಲ್ಲಾ ಪ್ರಚಂಡ ಸಂಘಟನಾ ಮಾಡಿ ದ್ದೀನಿ. ಒಮ್ಮೆ ಬಂದು ನೋಡ್ರಿ ಬೇಕಾದರ‍್ರಿ ! "

" ಇದು ಬರಿಯ ಒಂದು ತಾಲ್ಲೂಕಿನ ಕೆಲಸವಲ್ಲರೀ ಮೂರುಸಾವಿರಪ್ಪಾ. ಕರ್ನಾಟಕದ ನಾಲ್ಕು ಜಿಲ್ಲೆಗಳ ಕೆಲಸ. " ಎಂದ ಈಶ್ವರ.

ಏಕೋ ಏನೋ ಮೂರುಸಾವಿರಪ್ಪನಿಗೆ ಬಲು ರೇಗಿತು. ಕೀರಲು ಧ್ವನಿಯಲ್ಲಿ ಅವನು ಹೇಳಿದ :

" ಅದೇನು ದೊಡ್ಡ ಕೆಲಸ ಬಿಡ್ರೀ. ಮುಂದಿನ ತಿಂಗಳು ನಮ್ಮೂರಾಗ ನಾನೊಂದು ಪರಿಷತ್ತು ಕೂಡಿಸಿಬಿಟ್ಟರ ಸಾಕು, ಕಾಂಗ್ರೆಸ್ಸು ಕುಪ್ಪಳಿಸಿ ಬಿದ್ದು ಓಡಿಹೋದೀತು ! ಕೃಷ್ಣಾಜಿಯಂಥ ಅಳುಬುರುಕರನ್ನ ಬಡಿಯೂದು ಎಷ್ಟರ ಮಾತು ! "

ಈಶ್ವರನಿಗೆ ಬಲು ಮೋಜೆನ್ನಿಸಿತು. ಅವನು ಮೆಲ್ಲಗೆ ನಕ್ಕು ಸುಮ್ಮನಾದ. ಸದಾಶಿವನಿಗೂ ನಗು ಬರದಿರಲಿಲ್ಲ. " ಈ ಮೂರುಸಾವಿರಪ್ಪನ ಬುದ್ಧಿ ಸ್ವಲ್ಪವೂ ಬೆಳೆದ ಹಾಗೆ ಕಾಣುವದಿಲ್ಲ. ಹದಿನಾರರ ಹುಡುಗನ ಹಾಗೆ ಮಾತಾಡುತ್ತಾನೆ! " ಎಂದು ಅವನು ತನ್ನಷ್ಟಕ್ಕೇ ಹೇಳಿಕೊಂಡ.

" ಬರಿಯ ಪರಿಷತ್ತು ಕೂಡಿಸಿದರೆ ಉಪಯೋಗವಿಲ್ಲ ಮೂರುಸಾವಿರಪ್ಪ. ಶಿಸ್ತಿನಿಂದ ಕ್ರಮಬದ್ಧವಾದ ರೀತಿಯಲ್ಲಿ ನಾವು ಕೆಲಸ ಮಾಡಬೇಕು. ಒಂದು ಪಕ್ಷದಲ್ಲಿ ಸೇರಿಕೊಳ್ಳಬೇಕು ನೀವು. ಎಷ್ಟೋ ದಿನಗಳಿಂದ ಹೇಳುತ್ತಿದ್ದೇನಲ್ಲ ನಿಮಗೆ—ನಮ್ಮ ಪಕ್ಷಕ್ಕೆ ಸೇರಿ ಕೆಲಸ ಮಾಡಿರಿ ಅಂತ . " ಎಂದು ರಾಮಣ್ಣ ಹೇಳುತ್ತಿದ್ದ ಹಾಗೆಯೆ ನಡುವೆಯೆ ಅವನ ಮಾತನ್ನು ತಡೆದು ಮೂರುಸಾವಿರಪ್ಪನೆಂದ :

" ನಮ್ಮ ಸಲಹೆಗಾರರಿಬ್ಬರೂ ಪಕ್ಷಕ್ಕೆ ಸೇರುವದು ಬ್ಯಾಡ ಅಂತಾರಲ್ಲರಿ. ನಾನರೆ ಏನಮಾಡಲಿ ? "

" ಯಾರು ಇವರ ಸಲಹೆಗಾರರು ? " ಸದಾಶಿವ ಕೇಳಿದ.

ಈಶ್ವರ ಹೇಳಿದ : " ಲಿಂಗವೀರ ಪತ್ರಿಕೆ ಅಂತ ಇದೆಯಲ್ಲ ಈ ಊರಲ್ಲಿ–ಅದರ ಸಂಪಾದಕ ಗಂಗಾಧರಶಾಸ್ತ್ರಿ ಒಬ್ಬರು. ಹೊಸದಾಗಿ ವಕೀಲಿ ಸುರು ಮಾಡಿರುವ ಮುದಿಯಪ್ಪ ಅಂತ ಇನ್ನೊಬ್ಬರು. ಮುದಿಯಪ್ಪ ನಿಮಗೆ ಗೊತ್ತಿರಬೇಕಲ್ಲ! ನಿಮ್ಮ ಪರಿಚಯ ಅವರಿಗಿದೆಯಂತೆ. "

" ಹೌದು. ಅವರನ್ನು ನಾನು ಬಲ್ಲೆ. ನಮ್ಮೂರಿನ ಹತ್ತಿರದ ರಾಮಾಪುರದವರು ಅವರು. "

" ಬಹಳ ಶ್ಯಾಣ್ಯಾ ವಕೀಲರಪ್ಪಾ ಅವರು. ನಮ್ಮ ಖಟ್ಲೆ ಎಲ್ಲಾ ಎಷ್ಟು ಹುಷಾರಾಗಿ ನಡಸುತಾರಂತೀರಿ! ಅವರು ವಾದ ಮಾಡೂದನ್ನ ನೋಡಿ ಜಜ್ಜಿಗಳೂ ಬೊಟ್ಟು ಕಚ್ಚುತಿರುತಾರೆ. ಅದಕ್ಕಂತ್ಸ ನಾ ಅವರನ್ನ ನಮ್ಮ ರೈತ ಸಂಘದ ಸಲಹಾಗಾರರನ್ನ ಮಾಡಿಕೊಂಡೀನಿ. "

" ಪುರೋಗಾಮಿ ಪಕ್ಷ ಸೇರಲು ಅವರ್‍ಯಾಕೆ ಬೇಡ ಅನ್ನುತ್ತಾರೆ? "

" ರೈತಸಂಘಟನಾ ಯಾವ ಪಕ್ಷದಾಗೂ ಸಿಗದೆ ಸ್ವತಂತ್ರವಾಗಿ ನಡದರ ಚಲೋದು ಅಂತನ್ನುತಾರ ಅವರು. ನೀವು ಅವರ ಸಂಗಡ ಮಾತಾಡಿದರಂದರ ಎಲ್ಲಾ ಎಲ್ಲಾ ತಿಳೀತೈತಿ. ನೀವು ಬಂದದ್ದು ವಕೀಲರಿಗೆ ತಿಳಿಸುತೀನಿ ಹಂ! " ಎಂದು ಹೇಳಿ ಮೂರುಸಾವಿರಪ್ಪ ಎದ್ದುನಿಂತ. " ಕಲೇಕಟರ್ ಸಾಬರನ್ನ ಭೇಟಿಯಾಗೂದೈತಿ. ಗಂಗಾಧರಶಾಸ್ತ್ರಿಗಳು ಕಾಯ್ತಾ ಇರ್‍ತಾರ. ಹೋಗುತೀನಿ. ನಮ್ಮ ಪರಿಷತ್ತಿಗೆ ಅಧ್ಯಕ್ಷರಾಗಬೇಕ್ರೀ ಸದಾಶಿವಣ್ಣಾ. ತಪ್ಪಿಸಬ್ಯಾಡ್ರಿ " ಎಂದು ನುಡಿದು ಅವನು ಹೊರಟುಹೋದ.

" ಇದುವರೆಗೆ ಐದು ಜನರನ್ನು ಕೇಳಿದಂತಾಯಿತು ಇವ ಅಧ್ಯಕ್ಷಸ್ಥಾನಕ್ಕಾಗಿ " ಎಂದ ಈಶ್ವರ.

" ಐದು ಜನರನ್ನು ? "

" ಹೌದು. ಎಲ್ಲಕ್ಕೂ ಮೊದಲು ಗಂಗಾಧರಶಾಸ್ತ್ರಿಯನ್ನು ಕೇಳಿದ. ಆಮೇಲೆ ಮುದಿಯಪ್ಪ, ಆಮೇಲೆ ರಾಮಣ್ಣ, ಅನಂತರ ನನ್ನನ್ನು, ಈಗ ನೀವು ಸಿಗುತ್ತಲೂ ನಿಮ್ಮನ್ನೂ ಕೇಳಿದ. ಇನ್ನು ಯಾರಾದರೂ ಸಿಕ್ಕರೆ ಅವರನ್ನೂ ಕೇಳುತ್ತಾನೆ. "

" ಇವನ ತಲೆ ಸರಿಯಾಗಿದೆಯೋ ಇಲ್ಲವೊ ? "

" ಯಾರು ಬಲ್ಲರಪ್ಪಾ ? ಪರಿಷತ್ತು ಕೂಡಿಸುವದು, ಅಧ್ಯಕ್ಷರನ್ನು ಮಾಡುವದು, ಉದ್ಘಾಟಿತರನ್ನು ತರವದು ಎಲ್ಲಾ ಒಂದು ಹುಡುಗಾಟ ಆಗಿದೆ ಇವನಿಗೆ. ಇದುವರೆಗೆ ಇಂಥ ಹತ್ತಿಪ್ಪತ್ತು ಪರಿಷತ್ತು ಸೇರಿಸಿ ಚೆನ್ನಾಗಿ ಪ್ರಚಾರ ಮಾಡಿಕೊಂಡಿದ್ದಾನೆ. "

" ಪ್ರಚಾರ ? "

" ಹೌದು. ಇವನ ಪ್ರಚಾರ, ಇವನ ವಕೀಲ ಮುದಿಯಪ್ಪನ ಪ್ರಚಾರ,

ಗಂಗಾಧರಶಾಸ್ತ್ರಿಯ ಪ್ರಚಾರ. ಶಾಸ್ತ್ರಿಯ 'ಲಿಂಗವೀರ' ಪತ್ರಿಕೆಯೊಳಗೆ ಪ್ರತಿ ವಾರ ನಮ್ಮ ಮೂರುಸಾವಿರಪ್ಪನ ಫೋಟೋ ಇದ್ದೇ ಇರುತ್ತದೆ. ಶಾಸ್ತ್ರಿಯೂ ಧೂರ್ತ. ಹೆಸರಿನ ಹುಚ್ಚಿಗೆ ಬಿದ್ದ ಈ ಹಳ್ಳೀಮುಕ್ಕನನ್ನು ಚೆನ್ನಾಗಿ ಸುಲಿಯುತ್ತಿದ್ದಾನೆ."

"ನಮ್ಮ ಪಕ್ಷಕ್ಕೆ ಸೇರಬಾರದೆಂದು ಸಲಹೆ ಕೊಟ್ಟವನೂ ಶಾಸ್ತ್ರಿಯೆ. ಅವನಿಗೆ ಬ್ರಾಹ್ಮಣರೆಂದರೆ ಭಯಂಕರ ವೈರ. ಏನು ಮಾಡುವದು ಸದಾಶಿವಣ್ಣಾ, ಅಂತೂ ಇಂತೂ ನಮ್ಮ ಸಾರ್ವಜನಿಕ ಜೀವನ ಬಹಳ ಹೊಲಸಾಗಿದೆ. ನಾವು ಎಷ್ಟೇ ಪ್ರಾಮಾಣಿಕತನದಿಂದ ಕೆಲಸ ಮಾಡಿದರೂ ಜಾತಿ ಅಡ್ಡ ಬಂದು ಎಲ್ಲಾ ವ್ಯರ್ಥಗೊಳಿಸುತ್ತದೆ." ರಾಮಣ್ಣ ನೊಂದ ಧ್ವನಿಯಲ್ಲಿ ಹೇಳಿದ.

"ಈ ಪರಿಸ್ಥಿತಿಯನ್ನು ಬದಲು ಮಾಡಬೇಕಾದರೆ ನೇತಾಜಿಯೆ ಬರಬೇಕು. ಬೇರೆ ಯಾರಿಗೂ ಸಾಧ್ಯವಿಲ್ಲ ಈ ಕೆಲಸ" ಎಂದ ಎಡ್ವರ್ಡ್.

"ಸರಿ. ಇವನೂ ಒಬ್ಬ ಹುಚ್ಚ. ಒಬ್ಬ ವ್ಯಕ್ತಿಯಿಂದಾಗುವ ಕೆಲಸವೆ ಇದು! ಎಲ್ಲಾ ಅಂಧಶ್ರದ್ಧೆಯ ಮುಂದಿಯೇ" ಎಂದು ತನ್ನಲ್ಲಿಯೆ ಹೇಳಿಕೊಳ್ಳುತ್ತಾ ಸದಾಶಿವ ಎದ್ದು ಹೊರಟ.

"ನಾಲ್ಕೈದು ದಿನ ಇಲ್ಲೇ ಇರುತ್ತೀರಲ್ಲ ?" ಎಂದ ರಾಮಣ್ಣ.

"ನೋಡಬೇಕು. ಅಂತೂ ಇಲ್ಲಿಗೆ ಬಂದಾಗಲೆಲ್ಲ ಭೆಟ್ಟಿಯಾಗೇ ಆಗುತ್ತದಲ್ಲ."

"ನೋಡಿರಪ್ಪ, ನಿಮ್ಮಿಂದಾದರೂ ಸ್ವಲ್ಪ ಕೆಲಸವಾಗಿ ಏನಾದರೂ ಚಟುವಟಿಕೆ ನಡೆದೀತು ಅಂತ ನನ್ನ ಆಸೆ...."

"ಈಗ ಆ ಕೆಲಸಕ್ಕೇ ಗಂಟು ಬೀಳುತ್ತೇನೆ."

೪

ಅಂಗವಸ್ತ್ರದಿಂದ ಮುಖವನ್ನೊರೆಸುತ್ತಾ ಸೋಮಶೇಖರಪ್ಪನವರು ಪಡಸಾಲೆಗೆ ಬಂದು, ಗೋಡೆಗೆ ಹೊಂದಿಕೊಂಡಿದ್ದ ದೊಡ್ಡ ವಿರಾಮ ಕುರ್ಚಿಯಲ್ಲಿ ನಿಧಾನವಾಗಿ ಕುಳಿತುಕೊಂಡರು. ಅಭ್ಯಾಸಬಲದಿಂದಾಗಿ, ಮಾಡದಲ್ಲಿದ್ದ ಗಡಿಯಾರದತ್ತ ಅವರ ದೃಷ್ಟಿ ಹೊರಳಿತು. "ಮೂರು ಗಂಟೆಯಾಯಿತಲ್ಲಾ ಆಗಲೆ! ಚ್...ಚ್...ಆ ಕಲ್ಲಪ್ಪ ಇನ್ನೂ ಬರಲಿಲ್ಲ. ಇವತ್ತು ತನ್ನ ಕೇಸ್ ಇದೆಯೆಂಬುದನ್ನೇ ಮರೆತುಬಿಟ್ಟಿದಾನೊ ಏನೊ" ಎಂದು ತನ್ನಷ್ಟಕ್ಕೇ ಹೇಳಿಕೊಳ್ಳುತ್ತಾ ಅಂಗವಸ್ತ್ರದಿಂದ ಗಾಳಿ ಹಾಕಿಕೊಳ್ಳತೊಡಗಿದರು.

ಸಮೀಪದಲ್ಲಿಯೆ ಕುಳಿತು 'ಸಂಯುಕ್ತ ಕರ್ನಾಟಕ' ವನ್ನೋದುತ್ತಿದ್ದ ಚೆನ್ನಯ್ಯಶಾಸ್ತ್ರಿ ಕತ್ತೆತ್ತಿ, ಮುಗುಳ್ನಗುತ್ತಾ ಹೇಳಿದ: "ಪಕ್ಷಗಾರರು ನಿಮ್ಮ ಹಾದಿ ಕಾಯುವದರ ಬದಲು ನೀವೇ ಅವರ ಹಾದಿ ಕಾಯಬೇಕಾಯಿತಲ್ಲ ವಕೀಲರೆ!"

"ಅಂತೂ ಕಾಲವೇ ತಲೆ ಕೆಳಗಾಗಿ ಹೋಗುತ್ತಿದೆ!" ಎಂದು ನುಡಿದು ಸೋಮಶೇಖರಪ್ಪನವರೂ ನಕ್ಕರು.

ಕಳ್ಳೀಕಾಯಿ ನಗರಕ್ಕೆ ಬಂದಾಗಲೆಲ್ಲ ಸೋಮಶೇಖರಪ್ಪನವರಲ್ಲಿಯೆ ಉಳಿದುಕೊಳ್ಳುತ್ತಿದ್ದ ಚೆನ್ನಯ್ಯಶಾಸ್ತ್ರಿ. ಅಲ್ಲಿಗೆ ಮೂವತ್ತು ಮೈಲಿಗಳಷ್ಟು ದೂರದಲ್ಲಿದ್ದ ಹಳ್ಳಿಯೊಂದರಲ್ಲಿ ಅವನ ಸಂಸಾರ. ಶಾಸ್ತ್ರಿಗೆ ಈಗ ಸುಮಾರು ನಲವತ್ತೈದರ ಪ್ರಾಯ. ಅವನು ಹೆಚ್ಚು ಓದಿದವನಲ್ಲ. ಕನ್ನಡ ಮುಲ್ಕೀ ಪರೀಕ್ಷೆ ಮಾಡಿ ಮುಗಿಸುತ್ತಲೂ ಕಾಂಗ್ರೆಸ್ ಚಳುವಳಿಗೆ ಸೇರಿಕೊಂಡಿದ್ದ. ಅವನು ಸ್ವಭಾವತಃ ಹಾಸ್ಯಪ್ರೇಮಿ. ತನ್ನ ಆ ನೈಸರ್ಗಿಕ ಶಕ್ತಿಯ ಸದುಪಯೋಗ ಮಾಡಿಕೊಂಡು, ರಾಷ್ಟ್ರೀಯ ಚಳುವಳಿಗಾಗಿ ಹಳ್ಳಿಯ ಜನಗಳನ್ನು

ಹುರಿದುಂಬಿಸಲು ಕೀರ್ತನಗಳನ್ನು ಮಾಡುತ್ತ ಬಂದು ಜನಪ್ರಿಯತೆ ಪಡೆದಿದ್ದ. ಚೆನ್ನಯ್ಯಶಾಸ್ತ್ರಿಯ ಕೀರ್ತನವಿದೆಯೆಂದರೆ ಹತ್ತಿಪ್ಪತ್ತು ಮೈಲಿ ದೂರದಿಂದ ಬಂಡಿ ಹೂಡಿಕೊಂಡು ಹಳ್ಳಿಗರು ಬಂದು ಸೇರುತ್ತಿದ್ದರು. ಚುನಾವಣೆಗಳ ಕಾಲಕ್ಕಂತೂ ಕಾಂಗ್ರೆಸ್ ಪ್ರಚಾರದ ಪ್ರಮುಖ ಅಂಗವೆಂದರೆ ಅವನ ಕೀರ್ತನಗಳೇ. ದೇಶಸೇವೆಗೆಂದು ಕೀರ್ತನಕ್ಕಾರಂಭಿಸಿದ ಶಾಸ್ತ್ರಿ ಬರಬರುತ್ತಾ ಅದನ್ನೊಂದು ವೃತ್ತಿಯಾಗಿ ಮಾಡಿಕೊಂಡು ಹತ್ತಿಪ್ಪತ್ತು ರೂಪಾಯಿ ಸಂಪಾದಿಸುತ್ತ ಬಂದಿದ್ದ. ಹಳ್ಳಿಯಲ್ಲಿ ಅವನಿಗೆ ಭೂಮಿಕಾಣಿಯೇನೂ ಇರಲಿಲ್ಲವಾದುದರಿಂದ ಈ ಅಲ್ಪಸಂಪಾದನೆಯಿಂದಲೇ ಅವನು ಬಹಳ ಕಷ್ಟದಿಂದ ಸಂಸಾರ ಸಾಗಿಸಬೇಕಾಗುತಿತ್ತು. ಕೆಲವರು ಧನಿಕ ಮಿತ್ರರಿಂದ ಆಗಾಗ ಅಲ್ಪಸ್ವಲ್ಪ ಸಹಾಯ ಪಡೆಯುತ್ತ ಹೇಗೋ ರಥ ಸಾಗಿಸುತ್ತ ಬಂದಿದ್ದ ಶಾಸ್ತ್ರಿ. ಸೋಮಶೇಖರಪ್ಪನವರೂ ಆಗಾಗ ಅವನಿಗೆ ಹಣ ಸಹಾಯ ಮಾಡುತ್ತಿದ್ದರಲ್ಲದೆ ಅವನ ಮನೆಗೆ ಕಾಳುಕಡ್ಡಿಗಳನ್ನೂ ಸಂಗ್ರಹಿಸಿ ಸಲ್ಲಿಸುತ್ತಿದ್ದರು.

“ ದಿವಸಕ್ಕೊಂದು ತೊಂದರೆ ಬರಹತ್ತಿದರೆ ಕಾಲ ತಲೆಕೆಳಗಾದಂತೆ ಕಾಣುವದೂ ಸಹಜವೇ ” ಎಂದ ಶಾಸ್ತ್ರಿ.

“ ತೊಂದರೆಗಳೆಂದರೆ ಒಂದೇ ಎರಡೇ ಶಾಸ್ತ್ರಿ ! ಮೋಹನ ಜಡ್ಡಿನಿಂದ ಎದ್ದ ಅನ್ನುವಷ್ಟರಲ್ಲಿ ಮನೆಯವರು ಹಾಸಿಗೆ ಹಿಡಿದು ಮಲಗಿದರು. ”

“ ಏನು ಜಡ್ಡು ವಕೀಲರೆ ? ”

“ ಏನೋ ದೇವರೇ ಬಲ್ಲ. ಡಾಕ್ಟರೂ ಸರಿಯಾಗಿ ಹೇಳಲಿಲ್ಲ. ಒಮ್ಮೆ ಮಲೇರಿಯಾ ಅಂತಾರೆ, ಒಮ್ಮೆ ನ್ಯೂಮೋನಿಯಾ ಅಂತಾರೆ, ಇನ್ನೊಮ್ಮೆ ಟಿ. ಬಿ. ಅಂತಾರೆ. ”

“ ಹಾ ! ಟಿ. ಬಿ. ಯೇ ? ”

“ ಟಿ. ಬಿ. ಆದರೂ ಆಶ್ಚರ್ಯವಿಲ್ಲವಲ್ಲ !”

ಸೋಮಶೇಖರಪ್ಪನವರು ಮತ್ತೆ ತನಗೆ ತಾನೇ ಹೇಳಿಕೊಂಡರು :

“ ಆಶ್ಚರ್ಯವೇನೂ ಇಲ್ಲವಲ್ಲ ! ”

ಮೊದಲಿನಿಂದಲೂ ಕೋಮಲ ಪ್ರಕೃತಿ ತಮ್ಮ ಪತ್ನಿಯದು. ಮೋಹನನ ಜನನ ಕಾಲದಲ್ಲಿಯೆ ಆಕೆಗೆ ತುಂಬಾ ಕಾಯಿಲೆಯಾಗಿತ್ತು. ಅದರಿಂದ ಹೇಗೋ

ಬದುಕಿ ಉಳಿದಳಾದರೂ ಆಗ ಉಂಟಾದ ನಿಶ್ಯಕ್ತಿ ದಿನೇ ದಿನೇ ಹೆಚ್ಚುತ್ತ ಬಂತು. ಮುಂದೆ ತಾನು ಸೆರೆಮನೆ ಸೇರಿದ ತರುವಾಯ ಮನೆತನ ಸಾಗಿಸುವ ಭಾರವೆಲ್ಲಾ ಅವಳೊಬ್ಬಳ ಮೇಲೇ ಬಿತ್ತು. ಕಾಂಗ್ರೆಸ್ ಚಳುವಳಿಯ ಮಹಾ ಪೂರದಲ್ಲಿ ಸಿಕ್ಕ ತಾನು ವಕೀಲಿಯನ್ನು ಚೆನ್ನಾಗಿ ನಡಸಲಾಗಿರಲಿಲ್ಲ. ತಾನು ಸೆರೆಮನೆಗೆ ಹೋದಾಗಲೆಲ್ಲ ಮನೆಯ ಖರ್ಚು ವೆಚ್ಚಗಳಿಗೆ ತುಂಬಾ ತೊಂದರೆ ಯಾಗುತ್ತಿತ್ತು. ಎಷ್ಟೋ ಸಲ ಔಷಧೋಪಚಾರಗಳಿಗೂ ಹಣವಿರುತ್ತಿರಲಿಲ್ಲ. ಅದರಿಂದಾಗಿ ಅವಳ ಪ್ರಕೃತಿ ಕ್ಷಯಿಸುತ್ತ ಬಂತು. ತಾನು ಬಿಡುಗಡೆ ಹೊಂದಿ ಬಂದ ಬಳಿಕ ಔಷಧ ಕೊಡಿಸಿದರೂ ಪ್ರಯೋಜನವಾಗಲಿಲ್ಲ. ಮೇಲಿಂದ ಮೇಲೆ ಜ್ವರ ಕಾಣಿಸಿಕೊಳ್ಳತೊಡಗಿತು. ಈಗ ಮತ್ತೆ ಅದೇ ಜ್ವರವೇ ಅವಳನ್ನು ಹಿಡಿದುಕೊಂಡಿದೆ...

" ಕೆಲದಿನಗಳ ಮಟ್ಟಿಗೆ ಈ ಊರು ಬಿಟ್ಟು ಎಲ್ಲರನ್ನೂ ಕರೆದುಕೊಂಡು ಹಳ್ಳಿಗೆ ಹೋಗಿ ಇದ್ದರೆ ನೆಟ್ಟಗಾದೀತೇನೋ ಅಂತ ನನಗನ್ನಿಸುತದೆ ವಕೀಲರೆ " ಎಂದ ಶಾಸ್ತ್ರಿ.

" ನೀವನ್ನುವದೂ ಸರಿಯೆ. ಆದರೆ....ಹಳ್ಳಿಗೆ ಹೋಗಿಬಿಟ್ಟರೆ ಮನೆ ಯವರ ಔಷಧೋಪಚಾರ ? ಡಾಕ್ಟರರೆಲ್ಲಿಂದ ಬರಬೇಕು ? "

" ಹೌದೌದು. ಅದೂ ನಿಜ. "

" ಹಳ್ಳಿಗೆ ಹೋದರೂ ಕಷ್ಟ, ಇಲ್ಲೇ ಇದ್ದರೂ ಕಷ್ಟ. ಪ್ರಾಕ್ಟೀಸಾದರೂ ನೆಟ್ಟಗಿದ್ದರೆ ಏನೋ ಸ್ವಲ್ಪ ಉಸಿರಾಡಿಸಲು ಬರುತ್ತಿತ್ತು...."

ಚೆನ್ನಯ್ಯಶಾಸ್ತ್ರಿ ನಗುನಗುತ್ತಾ ಹೇಳಿದ: " ನಿಮ್ಮಂಥ ಸತ್ಯವಂತ ವಕೀ ಲರ ಹತ್ತರ ಪಕ್ಷಕಾರರಾದರೂ ಹ್ಯಾಗೆ ಬಂದಾರು ? ಸುಳ್ಳರ ಕಳ್ಳರ ಕೇಸು ತಗೊಳ್ಳುವದಿಲ್ಲ ನೀವು, ಅಂದ ಬಳಿಕ...."

" ಈ ಖಾದೀ ಬಟ್ಟೆ ಹಾಕಿಕೊಂಡು, ಗಾಂಧೀವಾದಿ ಅನ್ನಿಸಿಕೊಂಡು, ಬಸವಣ್ಣನ ಭಕ್ತನಾಗಿ ಸುಳ್ಳರ ಕಳ್ಳರ ವಕೀಲಿ ಹಿಡಿಯೂದು ಹ್ಯಾಗೆ ಶಾಸ್ತ್ರಿ ? "

" ನಿಮ್ಮಂಥ ಸಂಭಾವಿತರು ವಕೀಲರಾದದ್ದೇ ತಪ್ಪು. "

" ಇನ್ನೇನಾಗಬೇಕಾಗಿತ್ತು ? "

" ಇಂದಿನ ಪ್ರಪಂಚದಲ್ಲಿ ಯಾವ ಉದ್ಯೋಗವೂ ನಿಮಗೆ ಸರಿಹೋಗ ಲಾರದು. ಸರಕಾರಿ ನೌಕರಿಗೆ ಸೇರಿದ್ದಿರೆಂತ ತಿಳಿಯೋಣ. ಅಲ್ಲಿಯೂ ನೀವು ಬಹಳ ದಿನ ಉಳಿಯುತ್ತಿರಲಿಲ್ಲ. ಲಂಚಗಿಂಚಕ್ಕೆ ಕೈಯೊಡ್ಡದವರು ಅಧಿಕಾರಿ ಗಳಾಗಿ ಉಳಿಯಲು ಶಕ್ಯವೇ ಈ ಕಾಲದಲ್ಲಿ ! "

" ಅದಂತೂ ಸಾಧ್ಯವೇ ಇಲ್ಲ ಅನ್ನಿರಿ ನನ್ನಿಂದ ! "

" ಸ್ವಲ್ಪ ಪ್ರಯತ್ನಿಸಿದ್ದರೆ ಈ ಸಲವೂ ನೀವು ಎಂ.ಎಲ್.ಎ. ಆಗುತ್ತಿ ದ್ದಿರಿ ವಕೀಲರೆ. ನಿಮ್ಮ ಉದಾರತನದಿಂದ ಅದೂ ತಪ್ಪಿತು. "

" ಹೋಗಲಿ ಬಿಡರಿ. ಆ ಬಗ್ಗೆ ನನಗೇನೂ ದುಃಖ ಇಲ್ಲ " ಎಂದರು ವಕೀಲರು. ಶಾಸನಸಭೆಯ ಸದಸ್ಯರಾಗುವ ಅವಕಾಶವನ್ನು ಕಳೆದುಕೊಂಡ ಬಗ್ಗೆ ನಿಜಕ್ಕೂ ಅವರಿಗೆ ವ್ಯಸನವುಂಟಾಗಿರಲಿಲ್ಲ. ದ್ವಿತೀಯ ಮಹಾಯುದ್ಧಕ್ಕೆ ಮೊದಲು ಕಾಂಗ್ರೆಸ್ಸಿನ ವತಿಯಿಂದ ಶಾಸನಸಭೆಗೆ ಸದಸ್ಯರಾಗಿ ಹೋಗಿದ್ದರು. ಅಂದು ಕಳ್ಳೇಕಾಯಿ ಜಿಲ್ಲೆಯ ಕಾಂಗ್ರೆಸ್ ಮುಖಂಡರಲ್ಲೆಲ್ಲ ಅವರೇ ಗಣ್ಯ ರಾಗಿದ್ದರು. ವಕೀಲಿ ಪರೀಕ್ಷೆ ಮುಗಿಸಿ ಕಳ್ಳೇಕಾಯಿ ನಗರಕ್ಕೆ ಬಂದು ವಕೀಲ ವೃತ್ತಿಗಾರಂಭಿಸಿದಾಗಲೆ ರಾಷ್ಟ್ರೀಯ ಚಳುವಳಿಯ ಕಡೆ ಅವರು ಆಕರ್ಷಿತರಾಗಿ ದ್ದರು. ಆ ಕಾಲದಲ್ಲಿ ವೀರಶೈವ ಜನಾಂಗದವರು ಕಾಂಗ್ರೆಸ್ ಸಂಸ್ಥೆಯಲ್ಲಿ ವಿಶೇಷವಾಗಿರಲಿಲ್ಲ. ಬ್ರಾಹ್ಮಣೇತರ ಪಕ್ಷದ ಪ್ರಾಬಲ್ಯದ ಕಾಲವದು. ವೀರಶೈವ ಸಮಾಜದ ಮುಂದಾಳುಗಳೆನ್ನಿಸಿಕೊಳ್ಳುತ್ತಿದ್ದವರೆಲ್ಲ ಆ ಪಕ್ಷಕ್ಕೇ ಅಂಟಿಕೊಂಡಿ ದ್ದರು. ಕಲೆಕ್ಟರು, ಕಮೀಷನ್ನರು, ಗವರ್ನರು ಮೊದಲಾದ ಆಂಗ್ಲ ಅಧಿಕಾರಿ ಗಳಿಗೆ ಸತ್ಕಾರಕೂಟವನ್ನೇರ್ಪಡಿಸುವುದು, ಅವರನ್ನು ಅವಾಸ್ತವವಾಗಿ ಸ್ತುತಿಸಿ ಅವರ ಕೃಪೆಗೆ ಪಾತ್ರರಾಗುವುದು, ತಮ್ಮವರಿಗೂ ತಮ್ಮ ಹಿಂಬಾಲಕರಿಗೂ ಸರಕಾರಿ ನೌಕರಿಗಳನ್ನು ಕೊಡಿಸುವುದು, ಕಾಂಗ್ರೆಸ್ ಚಳುವಳಿಯನ್ನು ಬಲ ವಾಗಿ ವಿರೋಧಿಸುವುದು—ಆ ಪಕ್ಷದ ಕಾರ್ಯಕ್ರಮವಾಗಿತ್ತು. ಜಾತೀಯತೆಯ ಭೂತವನ್ನೆಬ್ಬಿಸಿ ಅಜ್ಞ ಜನರನ್ನು ಅಡ್ಡ ಹಾದಿಗೆಳೆದು ಮುಂದಾಳುತನಕ್ಕೇರುತ್ತಿ ದ್ದವರಿಗೂ ಕೊರತೆಯಿರಲಿಲ್ಲ. ವಿಶಾಲಪ್ಪನವರು ಮುಖಂಡರಾದುದೂ ಅದೇ ಉಪಾಯದಿಂದ. ಬ್ರಾಹ್ಮಣೇತರ ಪಕ್ಷದ ಆ ನಾಯಕರಿಗಿದಿರಾಗಿ ಸತತ ಇಪ್ಪತ್ತು ವರ್ಷಗಳ ಕಾಲ ಹೋರಾಡಿ ಆ ಪಕ್ಷದ ಪ್ರಭಾವವನ್ನು ಮುರಿದು

ವೀರಶೈವರನ್ನು ಕಾಂಗ್ರೆಸ್ ಸಂಸ್ಥೆಗೆ ಸೇರಿಸಿದವರು ಸೋಮಶೇಖರಪ್ಪನವರೆ. ೧೯೩೮ ರಿಂದ ಆರಂಭವಾದ ಆ ಕಾರ್ಯಕ್ಕೆ ಎಂಟು ಹತ್ತು ವರ್ಷಗಳಲ್ಲಿಯೆ ಅರ್ಧಕ್ಕರ್ಧ ಯಶಸ್ಸು ಪ್ರಾಪ್ತವಾಗಿತ್ತು. ಬ್ರಾಹ್ಮಣೇತರ ಪಕ್ಷ ದಿನೇ ದಿನೇ ದುರ್ಬಲವೂ, ಜನತೆಗೆ ಅಪ್ರಿಯವೂ ಆಗುತ್ತ ಬಂದು ಕೊನೆಗೆ ಅದರ ಹೆಸರೂ ಸಹ ಮುಸುಳಿಸಿ ಹೋಗಿತ್ತು. ಆ ಪಕ್ಷದ ಮುಖಂಡರಾಗಿದ್ದವರನೇಕರು ಚುನಾವಣೆಗಳಲ್ಲಿ ಕಾಂಗ್ರೆಸ್ಸಿಗೆದುರಾಗಿ ಹೋರಾಡಿ ಸೋತುಹೋಗಿ ಮುಖಭಂಗಿತರಾದ ಬಳಿಕ ಬೇರೆ ದಾರಿ ಕಾಣದೆ ಕಾಂಗ್ರೆಸ್ಸಿಗೇ ಶರಣು ಬಂದಿದ್ದರು. ವಿಶಾಲಪ್ಪನವರು ಕಾಂಗ್ರೆಸ್ ಸೇರಿದುದೂ ಅದೇ ಬಗೆಯಿಂದ. ಅದರಿಂದಾಗಿ ಸೋಮಶೇಖರಪ್ಪನವರಿಗೆ ಬಹಳ ಸಮಾಧಾನವೆನ್ನಿಸಿತ್ತು. ಇಪ್ಪತ್ತು ವರ್ಷಗಳ ತಮ್ಮ ಶ್ರಮ ಸಾರ್ಥಕವಾಯಿತೆಂದೇ ಅವರು ಭಾವಿಸಿದ್ದರು. ಸೋಮಶೇಖರಪ್ಪನವರ ಕರ್ತೃತ್ವ ಶಕ್ತಿಯನ್ನು ಕಂಡು ಮೆಚ್ಚಿದ ಕಾಂಗ್ರೆಸ್ ಕಾರ್ಯಕರ್ತರೆಲ್ಲ ಅವರನ್ನು ತುಂಬಾ ಆದರದಿಂದ ಕಾಣುತ್ತಿದ್ದರು. ಕಾಂಗ್ರೆಸ್ ಮೊದಲನೆಯ ಸಲ ಅಧಿಕಾರ ಸ್ವೀಕರಿಸಿದಾಗ ಸೋಮಶೇಖರಪ್ಪನವರಿಗೆ ಉಪಮಂತ್ರಿ ಸ್ಥಾನ ದೊರೆಯುವ ಸಂಭವವಿದ್ದಿತಾದರೂ ಅವರು ಅದಕ್ಕೆ ಆಸೆ ಮಾಡದೆ ತಮ್ಮ ಸ್ನೇಹಿತರೊಬ್ಬರಿಗೆ ಅದನ್ನು ಕೊಡಿಸಿದ್ದರು. ಅಂದು ಸೋಮಶೇಖರಪ್ಪನವರ ಔದಾರ್ಯದಿಂದಾಗಿ ಉಪಮಂತ್ರಿಯಾದ ಆ ಗೃಹಸ್ಥರು ಉನ್ನತ ಸ್ಥಾನಗಳಿಗೇರುತ್ತ ಹೋದರು. ಸೋಮಶೇಖರಪ್ಪನವರಿಗಾದರೋ ತೊಂದರೆಗಳ ಹಿಂದೆ ತೊಂದರೆಗಳು. ನಿಕೃಷ್ಟ ಆರ್ಥಿಕ ಸ್ಥಿತಿ. ಪತ್ನಿಯ ಚಿಕಿತ್ಸೆಗೆ ಹಣವಿಲ್ಲ; ಮನೆಯ ಖರ್ಚಿಗೆ ಹಣವಿಲ್ಲ.

" ಬಂದ ಚಾನ್ಸುಗಳನ್ನೆಲ್ಲಾ ನೀವಾಗಿಯೆ ಕಳಕೊಂಡು ಬಿಡ್ತೀರಿ ವಕೀಲರೆ " ಎಂದ ಶಾಸ್ತ್ರಿ.

" ನಮ್ಮ ಅದೃಷ್ಟದಲ್ಲಿದ್ದಂತೆ ಆಗುತ್ತದೆ ಶಾಸ್ತ್ರಿ " ಎಂದರು ವಕೀಲರು. ವಿಧಿವಾದದಲ್ಲಿ ಅವರಿಗೆ ಮೊದಲಿನಿಂದಲೂ ನಂಬುಗೆ. ಜೀವನದಲ್ಲಿ ಆಕಸ್ಮಿಕವಾಗಿ ಎದುರಾದ ಅನೇಕ ಸುಸಂದರ್ಭಗಳು ಕೈತಪ್ಪಿ ಹೋದಾಗಲೆಲ್ಲ ಆ ನಂಬುಗೆಯಿನ್ನೂ ದೃಢತರವಾಗುತ್ತ ಬಂದಿತ್ತು. ಈ ವೇಳೆಗೆ ಮಂತ್ರಿಯಾಗಿ ಅಧಿಕಾರ ನಡಸಬಹುದಾಗಿದ್ದ ತಾನು ಕೈಲಿ ಕಾಸಿಲ್ಲದೆ ತೊಂದರೆಪಟ್ಟುಕೊಳ್ಳುತ್ತಲಿಲ್ಲವೆ ?

ಕಳೆದ ಸಲದ ಚುನಾವಣೆಯಲ್ಲಿ ತಾನು ಕಾಂಗ್ರೆಸ್ ಹುರಿಯಾಳಾಗುವುದಕ್ಕೂ ಸಹ ದೈವವೇ ಅಡ್ಡ ಬರಲಿಲ್ಲವೆ? ಇಪ್ಪತ್ತು ವರ್ಷಗಳಿಂದ ಕಾಂಗ್ರೆಸ್ ಸಂಸ್ಥೆಗಾಗಿ ದುಡಿದ ತನ್ನಂಥವನಿಗೆ ಅವಕಾಶವೀಯದೆ ಮೊದಲಿನಿಂದಲೂ ಕಾಂಗ್ರೆಸ್ಸನ್ನೂ ಸ್ವಾತಂತ್ರ್ಯದ ಹೋರಾಟವನ್ನೂ ವಿರೋಧಿಸುತ್ತ ಬಂದ, ಮೊನ್ನೆ ಮೊನ್ನೆಯಷ್ಟೆ ಕಾಂಗ್ರೆಸ್ ಸೇರಿದ ವಿಶಾಲಪ್ಪನವರಿಗೆ ಸಂಧಿಯನ್ನೊದಗಿಸಿ ಕೊಟ್ಟು ಅವರನ್ನು ಎಂ. ಎಲ್. ಎ. ಯನ್ನಾಗಿಸಲಿಲ್ಲವೆ ಕಾಂಗ್ರೆಸ್ ನಾಯಕರು? ತನ್ನನ್ನು ಅವರು ಮರೆತುಬಿಟ್ಟರೆಂದೇನೂ ಅದರ ಅರ್ಥವಲ್ಲ. ತನ್ನಂಥವನನ್ನು ಮರೆಯುವುದುಂಟೇ? ಆದರೂ ತನಗೆ ಸಂಧಿ ಸಿಕ್ಕಲಿಲ್ಲವೆನ್ನುವುದು ಮಾತ್ರ ನಿಜ. ಅದೇಕೆ ಹಾಗಾಯಿತು? ದೇವರ ಚಿತ್ತವಲ್ಲದೆ ಇನ್ನೇನೂ ಕಾರಣವಿರಲಾರದು. ಆತ ಮನಸ್ಸು ಮಾಡದಿದ್ದರೆ ಒಂದು ಹುಲ್ಲುಕಡ್ಡಿಯೂ ಅಲ್ಲಾಡಲಾರದು ಈ ಜಗತ್ತಿನಲ್ಲಿ....

ಹಾಗೆ ಯೋಚಿಸಿ ಸೋಮಶೇಖರಪ್ಪನವರು ನೊಂದ ಮನಸ್ಸನ್ನು ಸಮಾಧಾನಪಡಿಸಿಕೊಂಡಿದ್ದರು. ಆದರೂ ಆಗ ಕಹಿಯಾದ ಅವರ ಮನಸ್ಸು ಮತ್ತೆ ಯಥಾಸ್ಥಿತಿಗೆ ಬರಲು ಸಾಧ್ಯವಾಗಿರಲಿಲ್ಲ. ಕಾಂಗ್ರೆಸ್ ಸಂಸ್ಥೆಯ ವಿಚಾರವಾಗಿ ಮೊದಲು ಅವರಲ್ಲಿದ್ದ ಆಸ್ಥೆಯೂ ದಿನೇ ದಿನೇ ಕಡಿಮೆಯಾಗುತ್ತ ಬಂದಿತ್ತು. ಕೆಲವು ವರ್ಷಗಳ ಹಿಂದೆ ಪ್ರತಿನಿತ್ಯವೂ ಕಾಂಗ್ರೆಸ್ ಕಚೇರಿಗೆ ಹೋಗಿ ಅಲ್ಲಿನ ಕಾರ್ಯಕಲಾಪಗಳನ್ನು ವೀಕ್ಷಿಸುವುದೂ ತನ್ನಿಂದ ಸಾಧ್ಯವಾದಷ್ಟು ಸೇವೆ ಸಲ್ಲಿಸುವುದೂ ಅವರಿಗೆ ಅಭ್ಯಾಸವಾದ ಹಾಗಿತ್ತು. ಆದರೆ, ಈಚಿಗೆ ಮಾತ್ರ ನಿತ್ಯವಿಧಿ ನಿಂತುಹೋಗಿ ಕಾಂಗ್ರೆಸ್ ಕಚೇರಿಗೆ ಅಡಿಯಿಡುವುದೇ ಅಪರೂಪವೆನ್ನುವ ಹಾಗಾಗಿತ್ತು. ಜಿಲ್ಲಾ ಕಾಂಗ್ರೆಸ್ ಸಮಿತಿ, ಪ್ರದೇಶ ಕಾಂಗ್ರೆಸ್ ಸಮಿತಿ, ಅ. ಭಾ. ಕಾಂ. ಸಮಿತಿಗಳ ಸದಸ್ಯತ್ವಗಳಿಗೂ ಅವರು ಬಹಳ ಹಿಂದೆಯೆ ರಾಜಿನಾಮೆ ಕೊಟ್ಟುಬಿಟ್ಟದ್ದರು. ಸೋಮಶೇಖರಪ್ಪನವರು ರಾಜಕೀಯದಿಂದಲೇ ನಿವೃತ್ತರಾದರೇನೊ ಎಂದು ಯಾರಿಗಾದರೂ ಅನ್ನಿಸುವ ಹಾಗಿತ್ತು ಅವರ ವರ್ತನೆ.

"ಅದೃಷ್ಟ ಗಿದೃಷ್ಟಗಳಿಗೆ ನಾನು ಹೆಚ್ಚು ಮಹತ್ವ ಕೊಡುವದಿಲ್ಲ ವಕೀಲರೆ. ನಾವು ಸುಮ್ಮನೆ ಕೂತರೆ ಅದೃಷ್ಟ ಏನು ಮಾಡೀತು

ಹೇಳಿರಿ. ಸ್ವಲ್ಪವಾದರೂ ಕೈಕಾಲು ಅಲುಗಾಡಿಸಬೇಡವೇನು ?” ಎಂದ ಶಾಸ್ತ್ರಿ.

“ ಮಾಡುವದಾದರೂ ಏನು ಹೇಳಿರಿ. ಮನೆಯಲ್ಲಿ ನೋಡಿದರೆ ಹೀಗೆ ತೊಂದರೆಗಳ ಮೇಲೆ ತೊಂದರೆಗಳು. ”

“ ತೊಂದರೆಗಳು ಎಲ್ಲರಿಗೂ ಇರುತ್ತವೆ ವಕೀಲರೆ. ಜನರಿಗಿಲ್ಲವೇನು ? ಕಾಂಗ್ರೆಸ್ ರಾಜ್ಯದಿಂದ ಯಾರಿಗೂ ಸುಖವಾಗಲಿಲ್ಲ. ಅಧಿಕಾರದಲ್ಲಿದ್ದವರಷ್ಟು ಮೆರೆಯಹತ್ತಿದರು ಎಲ್ಲರನ್ನೂ ಮರೆತು. ಇವರ ಕೈಯೊಳಗೆ ಅಧಿಕಾರ ಉಳಿದರೆ ದೇಶ ಹಾಳಾಗಿ ಹೋಗುವುದು ಖಂಡಿತ ಅಂತ ನನಗನ್ನಿಸುತ್ತದೆ. ಅದಕ್ಕಾಗಿ....”

“ ಅದಕ್ಕಾಗಿ ಏನನ್ನಾದರೂ ಮಾಡಬೇಕು. ಒಪ್ಪುತ್ತೇನೆ. ಆದರೆ ಮಾಡುವದಾದರೂ ಏನನ್ನು ? ನಮ್ಮ ಸದಾಶಿವನ ಹಾಗೆ, ಸ್ವಾಮಿಯ ಹಾಗೆ ಕೆಲಸ ಮಾಡುವದಕ್ಕೆ ನನ್ನ ಮನಸ್ಸು ಒಪ್ಪುವದಿಲ್ಲ. ಹಿಂಸಾ ಅಂದರಾಗದು ನನಗೆ ಹಿಂಸಾವಾದಿಗಳ ಸಂಗಡ ಸೇರುವದಕ್ಕೂ ಆಗದು ” ಎಂದು ಹೇಳುತ್ತಿದ್ದ ಹಾಗೆ ಅಂದು ಸದಾಶಿವ ಬಿಡುಗಡೆ ಹೊಂದಿ ಬರುವ ವಿಚಾರ ಅವರ ನೆನಪಿಗೆ ಬಂದಿತು. ಅದರೊಡನೆ ಅವರ ಮನಸ್ಸು ಮತ್ತೆ ಗೊಂದಲಕ್ಕೊಳಗಾಯಿತು. ಅವನು ಅವರ ಸಮೀಪದ ಸಂಬಂಧಿಕ, ಸೋದರಳಿಯ. ಹಲವು ವರ್ಷಗಳ ಕಾಲ ಅವರ ಮನೆಯಲ್ಲಿಯೆ ಇದ್ದುಕೊಂಡು ವಿದ್ಯಾಭ್ಯಾಸ ಮಾಡಿದವನು. ಒಂದು ಕಾಲದಲ್ಲಿ ಅವನ ಬಗೆಗೆ ಅವರಲ್ಲಿ ವಿಶೇಷವಾದ ಪ್ರೇಮವೂ ಇತ್ತು. ತನ್ನ ಹಾಗೆ ಅವನೂ ಬಿ. ಎ. ಯನ್ನೂ ಎಲ್‌ಎಲ್. ಬಿ.ಯನ್ನೂ ಮುಗಿಸಿ ವಕೀಲನಾಗಬೇಕೆಂದು ಅವರು ಇಚ್ಛಿಸಿದ್ದರು. ಸದಾಶಿವನಿಗೆ ಮಾತ್ರ ಶಿಕ್ಷಣದಲ್ಲಿ ಮನಸ್ಸು ತೊಡಗಲಿಲ್ಲ. ಕಾಂಗ್ರೆಸ್ಸು ಚಳುವಳಿ ಹೂಡಿದಾಗಲೆಲ್ಲ ಅವನು ವಿದ್ಯಾಭ್ಯಾಸವನ್ನು ಬಿಟ್ಟು ಹೋರಾಟಕ್ಕೆ ಧುಮುಕುತ್ತ ಬಂದು ನಲವತ್ತೆರಡರ ಚಳುವಳಿಯ ಕಾಲಕ್ಕೆ ಕಾಲೇಜಿಗೆ ಶರಣು ಹೊಡೆದವನು; ಕ್ರಾಂತಿಕಾರರ ಪಡೆಗೆ ಸೇರಿಕೊಂಡು ತಾನೂ ಅವರ ಹಾಗೆಯೆ ಆಗಿಹೋದ. ಕಾಂಗ್ರೆಸ್ಸು ಚಳುವಳಿ ನಿಲ್ಲಿಸಿದರೂ ಈ ಕ್ರಾಂತಿಕಾರರು ನಿಲ್ಲಿಸಲಿಲ್ಲ. ಚಳುವಳಿಗಾಗಿ ಶಾಲೆ ಕಾಲೇಜು ಬಿಟ್ಟಿದ್ದ ಎಷ್ಟೋ ಯುವಕರು ಮತ್ತೆ ತಮ್ಮ ವಿದ್ಯಾಭ್ಯಾಸ ಮುಂದೆ ಸಾಗಿಸ

ಲಿಲ್ಲವೆ ? ಅವರ ಹಾಗೆ ಸದಾಶಿವನೂ ಮತ್ತೆ ಕಾಲೇಜಿಗೆ ಹೋಗಬಹುದಾಗಿತ್ತು. ಆದರೆ .. ಸ್ವಾಮಿಯ ಗುಂಪು ಸೇರಿದಂದಿನಿಂದ ಅವನು ಪೂರ್ತಿಯಾಗಿ ಬದಲಾಯಿಸಿಬಿಟ್ಟ. ಅವನ ಧ್ಯೇಯವೇನೆಂಬುದೇ ತನಗೆ ಅರ್ಥವಾಗದು. ಅವನಿಗಾದರೂ ಅರ್ಥವಾಗಿರಬಹುದೆಂದೂ ತನಗೆನ್ನಿಸುವುದಿಲ್ಲ. ಹಾಗೆ ಅವರು ಒಂದು ರಾಜಕೀಯ ಪಕ್ಷಕ್ಕೂ ಅಂಟಿಕೊಂಡವರಲ್ಲ. ಕಮ್ಯುನಿಸ್ಟರಿಗೂ ಅವರಿಗೂ ಹತ್ತಿರದ ಸಂಬಂಧವಿದೆಯೆಂದು ಹೇಳುತ್ತಾರಾದರೂ ಅದರಲ್ಲಿ ಎಷ್ಟು ಸತ್ಯವಿದೆಯೆಂಬುದು ತಿಳಿಯುವಂತಿಲ್ಲ. ಶ್ರೀಮಂತರ ಮನೆಗಳನ್ನೊಡೆಯುವುದು, ಕಾಂಗ್ರೆಸ್ಸಿಗರನ್ನು ಪೀಡಿಸುವುದು... ಛಿ. ಛಿ. ಇವರಿಗೂ ಗುಂಡಾಗಳಿಗೂ ಏನು ವ್ಯತ್ಯಾಸವುಳಿದಂತಾಯಿತು? ಇಂಥ ದರೋಡೆಗಾರರ ಗುಂಪಿಗೆ ಸದಾಶಿವ ಸೇರಬಹುದೆಂದು ಯಾರು ತಿಳಿದಿದ್ದರು ? ಎಂಥ ಹುಡುಗ ಹೇಗಾಗಿ ಹೋದನಲ್ಲ. ಅವನಿಂದಾಗಿ ತನಗೂ ಅಪಕೀರ್ತಿ ಬರದಿರಲಿಲ್ಲ. ಅವನ ಕೃತ್ಯಗಳಿಗೆಲ್ಲ ತಾವು ಗುಪ್ತವಾಗಿ ಪ್ರೋತ್ಸಾಹವೀಯುತ್ತಿರಬೇಕೆಂದು ಆಡಿಕೊಳ್ಳದಿರಲಿಲ್ಲ ಜನ. ಅಂತೆಯೆ, ತಾವು ಅವನಿಂದ ದೂರದಲ್ಲೇ ಇದ್ದುಬಿಟ್ಟುದಾಗಿತ್ತು. ಸದ್ಯ ಅವನ ಬಿಡುಗಡೆಯಾಗಿದೆಯಾದರೂ ಪೋಲೀಸರು ಅವನನ್ನು ಬಹಳ ದಿವಸ ಹೊರಗಡೆ ಬಿಡುವಂತೆ ತೋರುವುದಿಲ್ಲ. ಸಿ. ಐ. ಡಿ. ಗಳಂತೂ ಅವನನ್ನು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾಯುವರು. ಅದರಲ್ಲಾವ ಸಂಶಯವೂ ಇಲ್ಲ. ಈ ವೇಳೆಗಾಗಲೆ ಅವನು ಸೆರೆಮನೆಯಿಂದ ಬಂದುಬಿಟ್ಟಿರಬಹುದು. ಸೆರೆಮನೆಯಿಂದ ನೇರವಾಗಿ ಇಲ್ಲಿಗೇ ಬಂದುಬಿಡುವನೋ ಏನೋ ? ಯಾರು ಬಲ್ಲರು ? ಬಂದವನಿಗೆ ಬೇಡವೆನ್ನಲೂ ಬರುವಂತಿಲ್ಲ. ಅವನನ್ನು ಇಲ್ಲಿ ಇರಗೊಡುವುದಕ್ಕೂ ಇಚ್ಛೆಯಿಲ್ಲ. ಇದೂ ಒಂದು ಪೀಕಲಾಟಕ್ಕೇ ಇಟ್ಟುಕೊಂಡಿತಲ್ಲ !

ಹಾಗೆ ಯೋಚಿಸುತ್ತ ಅವರು ಹೇಳಿದರು :

" ಇವತ್ತು ಸದಾಶಿವ ಬಿಡುಗಡೆ ಹೊಂದಿ ಬರುತ್ತಾನೆ. "

ಚೆನ್ನಯ್ಯಶಾಸ್ತ್ರಿಗೆ ಅದು ಹೊಸ ವಾರ್ತೆಯಾಗಿತ್ತು. ಅವನು ಸಂತೋಷದ ಧ್ವನಿಯಲ್ಲಿ ಹೇಳಿದ :

" ಇವತ್ತೇ ಬರ್‍ತಾನೆಯೇ ? ಬಹಳ ಚಲೋದಾಯ್ತು, ಅವನಿಂದಾದರೂ

ಏನಾದರೂ ಕೆಲಸವಾಗಬಹುದು. ಇಂದಿನ ಕರ್ನಾಟಕಕ್ಕೆ ಗಂಡುಗಲಿಗಳು ಬೇಕು" ಎಂದು ಅವನು ಹೇಳುತ್ತಿದ್ದ ಹಾಗೆ ಕೈಯಲ್ಲೊಂದು ಚೀಲ ಹಿಡಿದು ಕೊಂಡು ಬಾಗಿಲಲ್ಲಿ ಕಾಣಿಸಿಕೊಂಡ ವೀರಣ್ಣ ನಗುನಗುತ್ತಾ ಕೇಳಿದ :

"ಯಾತಕ್ಕಪ್ಪಾ ಗಂಡುಗಲಿಗಳು ? ಯಾರ ಸಂಗಡ ಕುಸ್ತಿ ಹಿಡಿಸುವ ವನಿದ್ದೀ ?"

ಕಳ್ಳೀಕಾಯಿ ಜಿಲ್ಲೆಯ ಮುಖ್ಯ ಕಾರ್ಯಕರ್ತರಲ್ಲೊಬ್ಬ ವೀರಣ್ಣ. ಅನೇಕರು ಅವನನ್ನು 'ರೈತ ಪುಢಾರಿ' ಎಂದೂ ಕರೆಯುವುದುಂಟು. 'ಕಡುಗಲಿ' ಎಂಬ ಅಭಿದಾನದಿಂದ ಜನಪ್ರಿಯನಾದ ಸಿದ್ಧರಾಮಪ್ಪನ ಗುಂಪಿಗೆ ಮಿದುಳಿನಂತಿದ್ದವನು ವೀರಣ್ಣ. ಗುಂಪಿನ ಜನರಲ್ಲೆಲ್ಲ ಹೆಚ್ಚು ಸುಶಿಕ್ಷಿತನೆಂದರೆ ಅವನೊಬ್ಬನೆ. ಚಳುವಳಿಗಳಲ್ಲಿ ಸೇರಿದರೂ ಶಿಕ್ಷಣವನ್ನು ತ್ಯಜಿಸದೆ ಬಿ.ಎಸ್‌ಸಿ. ಮಾಡಿ ಮುಗಿಸಿದ್ದ. ತಕ್ಕಮಟ್ಟಿಗೆ ಚೆನ್ನಾಗಿಯೆ ಇಂಗ್ಲಿಷ್ ಮಾತನಾಡುತ್ತಿದ್ದ. ರಾಜಕೀಯ ಆರ್ಥಿಕ ವಿಷಯಗಳ ಬಗೆಗೆ ಸ್ವಲ್ಪಮಟ್ಟಿಗಾದರೂ ವೈಜ್ಞಾನಿಕ ತಿಳಿವಳಿಕೆ ಗಳಿಸಿಕೊಂಡಿದ್ದ. ಹೆಚ್ಚಾಗಿ ಅಶಿಕ್ಷಿತರಿಂದ ಕೂಡಿದ್ದ ಗುಂಪಿನಲ್ಲಿ ವೀರಣ್ಣನಿಗೆ ಸಹಜವಾಗಿಯೆ ಉಚ್ಚಸ್ಥಾನ ಲಭಿಸಿತ್ತು. ಗೊತ್ತುವಳಿಗಳನ್ನು ಬರೆಯುವುದು, ಸಭೆ ಸಮ್ಮೇಳನಗಳನ್ನು ನಡಸುವುದು, ಅಧಿಕಾರಿಗಳನ್ನೂ ಮಂತ್ರಿಗಳನ್ನೂ ಭೇಟಿ ಮಾಡುವುದು ಇವೇ ಮೊದಲಾದ ಮಹತ್ವದ ಕಾರ್ಯಗಳೆಲ್ಲ ವೀರಣ್ಣನ ಪಾಲಿಗೇ ಬರುತ್ತಿದ್ದುವು. ಹತ್ತಿಪ್ಪತ್ತು ವರ್ಷಗಳ ಸತತ ಅಭ್ಯಾಸದಿಂದಾಗಿ ಅವನು ಉತ್ತಮದರ್ಜೆಯ ಮಾತುಗಾರಿಕೆಯನ್ನು ಸಾಧಿಸಿಕೊಂಡಿದ್ದ. ಸುಶಿಕ್ಷಿತರು, ಅಶಿಕ್ಷಿತರು, ಹಳ್ಳಿಗರು, ಪಟ್ಟಣಿಗರು ಎಲ್ಲರನ್ನೂ ಮೆಚ್ಚಿಸುವ ಹಾಗೆ ಭಾಷಣ ಮಾಡುವ ಕಲೆಯಲ್ಲಿ ಅವನು ಕುಶಲನಾಗಿದ್ದ. ಅದಕ್ಕೆ ತಕ್ಕ ಹಾಗೆ ಅವನ ವೇಷಭೂಷಣವೂ ಸೊಗಸಾಗಿರುತ್ತಿತ್ತು. ಚೆನ್ನಾಗಿ ಮಡಿ ಮಾಡಿದ ಖಾದಿ ಜುಬ್ಬ ತೊಟ್ಟು, ದೋತರವನ್ನು ಬಂಗಾಲಿ ಜನ ಉಡುವ ಶೈಲಿಯಲ್ಲಿ ಉಡುತ್ತಾನೆ ವೀರಣ್ಣ. ಕಾಲುಗಳಲ್ಲಿ ಬಿಳಿಯ ಬಣ್ಣದ ಪಂಜಾಬಿ ಷೂಸ್. ಕಾಂಗ್ರೆಸ್ಸಿಗರ 'ಟ್ರೇಡ್‌ಮಾರ್ಕ್' ಆದಂತಿರುವ ಗಾಂಧಿ ಟೋಪಿಯನ್ನು ವೀರಣ್ಣ ಎಂದೂ ಉಪಯೋಗಿಸಿಲ್ಲ. ಅಂದವಾಗಿ ಬಾಚಿದ ಕ್ರಾಪ್ ಕೂದಲನ್ನು ಪ್ರದರ್ಶಿಸುತ್ತ, ತಾನು ರಸಿಕ, ಸುಶಿಕ್ಷಿತ ಎಂಬುದನ್ನು

ಅಪ್ರತ್ಯಕ್ಷವಾಗಿ ಸಾರುತ್ತ ಬಂದಿದ್ದಾನೆ. ಅವನು ವಿವಾಹಿತನಾಗಿದ್ದರೂ ಸಂಸಾರದ ಹೊಣೆಗಾರಿಕೆ ಮಾತ್ರ ಅವನಿಗಿರಲಿಲ್ಲ. ಧನಿಕ ರೈತರೊಬ್ಬರ ಅಳಿಯನಾಗುವ ಭಾಗ್ಯ ಅವನಿಗೆ ಲಭಿಸಿತ್ತು. ಹೆಂಡತಿ, ತಂದೆಯ ಮನೆಯಲ್ಲಿಯೆ ಇದ್ದಳಾದುದರಿಂದ ವೀರಣ್ಣನ ಸಾರ್ವಜನಿಕ ಕಾರ್ಯಕ್ಕೆ ವಿಘ್ನವುಂಟಾಗದಂತೆ ಅವನ ಸಂಸಾರ ಸಾಗಿ ಬಂದಿತ್ತು. ವಾರಕ್ಕೊಂದು ಬಾರಿ, ಅಥವಾ ಹದಿನೈದು ದಿನಗಳಿಗೊಂದು ಬಾರಿ, ಅಥವಾ ಅನುಕೂಲ ಸಮಯವೊದಗಿದಾಗ ಮಾವನ ಊರಿಗೆ ಹೋಗಿ ಒಂದೆರಡು ದಿನ ಇದ್ದು ಬರುತ್ತಿದ್ದ ವೀರಣ್ಣ. ಉಳಿದ ಸಮಯವೆಲ್ಲ ಆ ಊರು ಈ ಊರು ಸುತ್ತುವುದರಲ್ಲಿಯೆ ಕಳೆಯುತ್ತಿತ್ತು. ಇಂದು ಕಳ್ಳೀಕಾಯಿ ನಗರವಾದರೆ ನಾಳೆ ಓರೆಕೋರೆ ನಗರ, ನಾಳಿದ್ದು ಮತ್ತೊಂದು ನಗರ. ತಿಂಗಳಿನಲ್ಲಿ ಎರಡು ಮೂರು ಬಾರಿಯಾದರೂ ಪುಣೆ ಮುಂಬಯಿ ಯಾತ್ರೆ ತಪ್ಪುತ್ತಿರಲಿಲ್ಲ. ಕಳ್ಳೀಕಾಯಿಗೆ ಬಂದಾಗಲೆಲ್ಲ ಅವನಿಗೂ ಸೋಮಶೇಖರಪ್ಪನವರ ಮನೆಯೆ ಬಿಡಾರ ಸ್ಥಾನವಾಗುತ್ತಿತ್ತು.

"ಓಹೊಹ್ಹೊ, ಬರ್‍ರಿ ಬರ್‍ರಿ ವೀರಣ್ಣಾ. ಎಲ್ಲಿಂದ ದಯಮಾಡಿಸಿದಿರಿ?" ಎಂದ ಶಾಸ್ತ್ರಿ.

"ಓರೆಕೋರೆ ನಗರಕ್ಕೆ ಹೊರಟಿದ್ದೆ. ಅಲ್ಲಿ ನಮ್ಮ ರೈತ ಸಮಿತಿಯ ಮೀಟಿಂಗಿದೆಯಲ್ಲ ಇದೇ ಈಗ ಬಸ್ಸಿನಿಂದ ಬಂದೆ. ನಾಳೆ ಬೆಳಗಿನ ಗಾಡಿಗೆ ಹೊರಡಬೇಕು."

ಹೀಗೆ, ಬಸ್ಸಿನಿಂದ ಬಂದು ರೈಲಿಗೆ ಹೋಗುವ ಕಾರ್ಯಕರ್ತರು ದಿನವೂ ಒಬ್ಬಿಬ್ಬರಾದರೂ ಇದ್ದೇ ಇರುತ್ತಾರೆ ಸೋಮಶೇಖರಪ್ಪನವರಲ್ಲಿ. ಅವರ ಪರಿಚಿತರ ಬಳಗ ಬಹಳ ದೊಡ್ಡದು. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ಅವರ ಆತ್ಮೀಯರಿದ್ದಾರೆ. ಕಳ್ಳೀಕಾಯಿ ನಗರಕ್ಕೆ ಬಂದಾಗ ಅವರು ಬಿಡಾರ ಹೂಡುವುದು—ಅರ್ಥಾತ್—ಸೋಮಶೇಖರಪ್ಪನವರಲ್ಲಿಯೆ. ಅವರ ಮನೆಯ ಮಹಡಿಯ ಮೇಲೊಂದು ವಿಶಾಲವಾದ ಕೈಸಾಲೆಯಿದೆ, ಒಂದೆರಡು ಕೊಟಡಿಗಳೂ ಇವೆ. ಮನೆಗೆ ಬಂದು ಹೋಗುವ ಅತಿಥಿಗಳಿಗೆಂದೇ ಮೀಸಲಾಗಿರುವ ಜಾಗ ಅದು. ದಿನವೂ ಜನ ಬರುತ್ತದೆ, ಹೋಗುತ್ತದೆ. ಅವರಿಗೆಲ್ಲ ತಿಂಡಿಯಾಗಬೇಕು, ಚಹವಾಗಬೇಕು, ಊಟವಾಗಬೇಕು. ಆರ್ಥಿಕ ಸ್ಥಿತಿ ಹೇಗೆಯೆ

ಇದ್ದರೂ ಅತಿಥಿಗಳನ್ನು ಕಡೆಗಣಿಸುವಂತಿಲ್ಲ. ಬರುವವರಿಗೆಲ್ಲ 'ಬರ್ರಿ' ಎನ್ನಬೇಕು, ಒಂದೆರಡು ದಿನ ಇದ್ದು ಹೋಗಲು ಕೇಳಿಕೊಳ್ಳಬೇಕು. ಅವರು ಹೊರಟು ನಿಂತಾಗ ಮತ್ತೆ ಬಂದು ಇದ್ದು ಹೋಗಲು ಹೇಳಿಕೊಳ್ಳಬೇಕು. ಹಾಗೆ, ದಿನವೂ ಇಬ್ಬರು ಮೂವರು ಬಂದು ತಳವೂರುವುದರಿಂದ ಮನೆಯ ಖರ್ಚು ಮಿತಿಮೀರಿ ಬೆಳೆಯುವುದೆಂಬ ಯೋಚನೆ ಅವರ ಎದೆಗೆಡಿಸಿಲ್ಲವೆಂದೇನೂ ಇಲ್ಲ. ಆದರೂ, ತಾವು ಜನನಾಯಕರಾದ ತಪ್ಪಿಗೆ ಅದನ್ನೆಲ್ಲ ಸಹಿಸಿಕೊಳ್ಳಲೇಬೇಕಾದುದು ಅನಿವಾರ್ಯವಾಗಿದೆ. ಅವರ ಪತ್ನಿ ನೀಲಮ್ಮನವರು ದೊಡ್ಡ ಮನೆತನದಲ್ಲಿ ಹುಟ್ಟಿ ಬೆಳೆದ, ಉದಾರ ಮನೋವೃತ್ತಿಯ ಹೆಣ್ಣು ಮಗಳು. ಅತಿಥಿಗಳ ರೂಪದಲ್ಲಿ ಪರಮಾತ್ಮನೇ ಮನೆಗೆ ಬರುವನೆಂದು ಅವರ ನಂಬುಗೆ. ಅಂತೆಯೆ, ದೇಹಸ್ವಾಸ್ಥ್ಯವಿರುವ ವರೆಗೂ ಅವರು ಅತ್ಯಂತ ಉತ್ಸಾಹದಿಂದಲೂ ಮಮತೆಯಿಂದಲೂ ಅತಿಥಿಗಳಿಗಾಗಿ ಅಡುಗೆ ಮಾಡಿ ಬಡಿಸುತ್ತಿದ್ದರು. ಜ್ವರದಿಂದ ಹಾಸುಗೆ ಹಿಡಿದು ಮಲಗಿದ ತರುವಾಯವೂ ಸಾಧ್ಯವಾದ ಮಟ್ಟಿಗೆ ಅತಿಥಿಗಳ ಯೋಗಕ್ಷೇಮ ನೋಡಿಕೊಳ್ಳದಿದ್ದರೆ ಅವರಿಗೆ ಸಮಾಧಾನವಾಗುತ್ತಿರಲಿಲ್ಲ. ಅಡುಗೆಯ ರಾಚಯ್ಯ ಮುದುಕ. ಅವನಿಂದ ಹೆಚ್ಚು ಕೆಲಸವಾಗುವಂತಿರಲಿಲ್ಲ. ಮನೆಯಲ್ಲಿ ವಯಸ್ಕರಾದ ಬೇರೆ ಸ್ತ್ರೀಯರಿರಲಿಲ್ಲ. ಅವರ ಹಿರಿಯ ಮಗಳು ಸುನಂದಾ ಪತಿಗೃಹದಲ್ಲಿದ್ದಳು. ಕಿರಿಯ ಮಗಳು ಸುಶೀಲಾ ಇನ್ನೂ ಚಿಕ್ಕವಳು. ಅಡುಗೆಯ ಕೆಲಸ ಅವಳಿಂದಾಗುವಂತಿರಲಿಲ್ಲ. ಮುದುಕ ರಾಚಯ್ಯ ಮಾಡಿದ ಹಸಿ ಬಿಸಿ ಅನ್ನ—ರೊಟ್ಟಿಗಳನ್ನೆ ತಿಂದು ಸಾಗಿಸಬೇಕಾದ ಪ್ರಸಂಗ ಬಂದಿತ್ತು. ಇಂಥ ಸ್ಥಿತಿಯಲ್ಲಿ ಅತಿಥಿಗಳ ಉಪಚಾರ ಹೇಗಾಗಬೇಕು? ನೀಲಮ್ಮ ತುಂಬಾ ನೊಂದುಕೊಳ್ಳುವರು. ಆದರೆ, ಬೇರೆ ಉಪಾಯವಿರಲಿಲ್ಲ.

ಸೋಮಶೇಖರಪ್ಪನವರಿಗಾದರೋ ಒಮ್ಮೆ ಬೇಸರ, ಇನ್ನೊಮ್ಮೆ ಅಸಹಾಯಕತೆಯ ಶುಷ್ಕ ಸಮಾಧಾನ, ತಮ್ಮ ಪತ್ನಿ ಕಾಯಿಲೆ ಮಲಗಿದ ವಿಚಾರವನ್ನು ತಿಳಿದೂ, ಮನೆಯಲ್ಲಿನ ಅಡಚಣೆಗಳನ್ನರಿತೂ ಅಲ್ಲಿಯೆ ಊಟ ತಿಂಡಿಗಳಿಗೆ ಕೂಡುತ್ತಿದ್ದ ಜನರ ಬಗೆಗೆ ನಸು ಮುನಿಸು. ಆದರೂ ಅವರು ಅದನ್ನೆಲ್ಲ ಹೊರಗಡೆ ತೋರಿಸದೆ ಯಥಾಪ್ರಕಾರ ನಗುನಗುತ್ತಲೇ ಇರಬೇಕಾಗುತಿತ್ತು. ಸಾಲ ಬೇಡಿ ತಂದಾದರೂ, ಬಂದವರಿಗೆ ಊಟ ಹಾಕಬೇಕಾಗುತಿತ್ತು. ಸಾರ್ವ

ಜನಿಕ ಜೀವನದಲ್ಲಿ ಭಾಗವಹಿಸುವ ತಮ್ಮಂಥವರಿಗೆ ಮೇಲಿಂದ ಮೇಲೆ ಕಾರ್ಯಕರ್ತರ ನೆರವು ಬೇಕಾಗುವುದು. ಚುನಾವಣೆಗಳ ಕಾಲಕ್ಕಂತೂ ಕಾರ್ಯಕರ್ತರ ಹೃತ್ಪೂರ್ವಕ ಸಹಕಾರವಿಲ್ಲದಿದ್ದರೆ ಅಪಯಶ ಕಟ್ಟಿಟ್ಟದ್ದೆ. ಅಂತೆಯೆ, ಅವರನ್ನೆಲ್ಲ ಸಹನೆಯಿಂದ ಕಾಣಬೇಕಾಗುತಿತ್ತು ಸೋಮಶೇಖರಪ್ಪನವರು. "ಅಟ್ಟದ ಮೇಲೆ ಸ್ಥಳವೇನೋ ಇದೆ. ವಸತಿ ಮಾಡಲು ಯಾರೂ ಬೇಡ ಅನ್ನಲಾರರು. ಊಟಕ್ಕಾಗಿ ಭೋಜನಾಲಯಗಳಿಗೆ ಹೋಗುವ ಬುದ್ಧಿ ಒಬ್ಬರಿಗೂ ಇಲ್ಲವಲ್ಲಾ!" ಎಂದು ಅವರು ಮನಸ್ಸಿನಲ್ಲಿಯೆ ಹೇಳಿಕೊಂಡದ್ದು ಎಷ್ಟೋ ಬಾರಿ. ಆದರೆ, ವೀರಣ್ಣನಂಥ ನಾಯಕಮಣಿಗಳು ಭೋಜನಾಲಯಕ್ಕೆ ಅಡಿಯಿರಿಸುವುದೆಂದರೆ ಅವರ ಘನತೆಗೆ ಕುಂದಲ್ಲವೆ! ವೀರಣ್ಣನಂತೂ ಹಾಗೆ ಯೋಚಿಸಿದ್ದು ನಿಜ. ಊಟಕ್ಕೆ ತೆರುವಷ್ಟು ಹಣವೂ ಅವನ ಬಳಿ ಅನೇಕ ಸಲ ಇರುತ್ತಿರಲಿಲ್ಲ. ಸರಿ. ಅವನೆಲ್ಲಿಗೆ ಹೋಗಬೇಕು ಊಟಕ್ಕೆ? ವಕೀಲರು ಕರೆಯುವುದಕ್ಕೆ ಮೊದಲು ಅವನೇ ಕೈಕಾಲು ಮುಖ ತೊಳೆದುಕೊಂಡು ಸಿದ್ಧವಾಗಿರುತ್ತಿದ್ದ. ಅಲ್ಲಿಗೆ ಬರುತ್ತಿದ್ದವರದೆಲ್ಲ ಅದೇ ಪದ್ಧತಿಯೆ.

ಗೋಡೆಗಿದ್ದ ಗೂಟಕ್ಕೆ ಕೈಚೀಲವನ್ನು ತೂಗುಹಾಕಿ ಕುರ್ಚಿಯಲ್ಲಿ ಕೂತುಕೊಳ್ಳುತ್ತ ವೀರಣ್ಣ ಕೇಳಿದ:

"ಈಗ ಅಕ್ಕನವರಿಗೆ ಹ್ಯಾಗಿದೆ ವಕೀಲರೆ?"

"ಹಾಗೇ ಇದೆಯಪ್ಪಾ."

"ಏನು ಮಾಡುವದು ಹೇಳಿರಿ. ನನಗೂ ಬಹಳ ದಿನಗಳಿಂದ ಮೈಯಲ್ಲಿ ನೆಟ್ಟಗಿಲ್ಲ. ಬಹಳ ನಿಶ್ಶಕ್ತಿ."

"ಅರೆ! ನಿಮಗೆಂಥಾ ನಿಶ್ಶಕ್ತಿ ಬಂತು? ಚಿವುಟಿದರೆ ಚಿಲ್ಲಂತ ಚಿಮ್ಮುವಷ್ಟಿದೆಯಲ್ಲಾ ರಕ್ತ!" ಎಂದ ಶಾಸ್ತ್ರಿ.

"ಬರೀ ರಕ್ತ ಇದ್ದರೇನಾಯಿತಪ್ಪಾ! ಮುಖ್ಯ ಉತ್ಸಾಹವಿರಬೇಕು. ನಮ್ಮ ರೈತ ಸಮಿತಿಯ ಸಂಘಟನೆಗಾಗಿ ಹಳ್ಳಿಪಳ್ಳಿ ಸುತ್ತಿ ಬಲು ಆಯಾಸವಾಗಿ ಹೋಗಿದೆ. ಒಂದೆರಡು ವಾರ ವಿಶ್ರಾಂತಿ ತೆಗೆದುಕೊಂಡೇನು ಅಂದರೆ ಪುರಸತ್ತು ಸಿಗುವಂತಿಲ್ಲ. ಅಂತೂ ಇಂತೂ...." ಎಂದು ವೀರಣ್ಣ ಹೇಳುತ್ತಿದ್ದ ಹಾಗೆ, ಸದಾಶಿವ ಈಶ್ವರನ ಜತೆಗೆ ಬಾಗಿಲಲ್ಲಿ ಅಡಿಯಿರಿಸಿದುದನ್ನು ಕಂಡು

ಮಾತನ್ನು ತಡೆದು, ಎದ್ದು ಹೋಗಿ ಸದಾಶಿವನ ಕೈಕುಲುಕಿಸಿ ತುಂಬ ಸಂತೋಷದಿಂದ ಸ್ವಾಗತಿಸಿದ.

ನಡುಮನೆಯಲ್ಲಿ ಓದುತ್ತ ಕುಳಿತಿದ್ದ ಸುಶೀಲಾ ಥಟ್ಟನೆದ್ದು “ ಮಾಮಾ ಬಂದ, ಮಾಮಾ ಬಂದ ” ಎಂದು ಕೂಗುತ್ತ ಹೊರಕ್ಕೆ ಧಾವಿಸಿ ಬಂದು ಸದಾಶಿವನ ಕಾಲುಗಳನ್ನು ತಬ್ಬಿಕೊಂಡು ಕುಣಿದಾಡತೊಡಗಿದಳು.

ಒಳಗಿನ ಕೊಟಡಿಯಲ್ಲಿ ಮಲಗಿದ್ದ ನೀಲಮ್ಮ ಅಲ್ಲಿಂದಲೇ ಕೂಗಿ ಹೇಳಿದರು :

“ ಬಂದಿಯಾ ಸದಾ ? ಅರಾಮ ಇದ್ದೀಯಾ ತಮ್ಮಾ ? ”

೫

ಮನೆಯವರನ್ನೆಲ್ಲ ಕಂಡು ಮಾತನಾಡಿಸಿ, ಅಲ್ಲಿ ನಿಲ್ಲದೆ ಹೊರಟುಹೋಗಿ ಬಿಡುವುದೆಂದು ಯೋಚಿಸಿಕೊಂಡು ಸದಾಶಿವ ಬಂದಿದ್ದನಾದರೂ ವೀರಣ್ಣ ಅವನನ್ನು ಬಿಡಲಿಲ್ಲ. "ಇವತ್ತೊಂದು ದಿನವಾದರೂ ಇದ್ದು ಊಟ ಮಾಡಿ ಹೋಗು ಸದಾ" ಎಂದು ನೀಲಮ್ಮನವರೂ ಬಲವಂತ ಪಡಿಸಿದುದರಿಂದಾಗಿ ಅವನು ರಾತ್ರಿಯನ್ನು ಅಲ್ಲಿಯೆ ಕಳೆಯಬೇಕಾಗಿ ಬಂದಿತು. ಸೋಮಶೇಖರಪ್ಪ ನವರಿಗೆ ಮಾತ್ರ ಒಳಗೊಳಗೇ ದಿಗಿಲು. ಸದಾಶಿವ ತಮ್ಮಲ್ಲಿ ವಸತಿ ಮಾಡಿ ದುದು ಗೊತ್ತಾದ ಬಳಿಕ ಪೋಲೀಸರು ತಮ್ಮ ಬಗೆಗೆ ಏನು ತಿಳಿದುಕೊಳ್ಳು ವರೊ....ಹೊರಟು ನಿಂತಿದ್ದ ಆತನನ್ನು ತಡೆದು ನಿಲ್ಲಿಸಬಾರದಾಗಿತ್ತೆಂದೇ ಅವ ರಿಗೆನ್ನಿಸುತ್ತಿತ್ತು. ಪತ್ನಿಯ ಮನಸ್ಸು ನೋಯಿಸಲೂ ಅವರಿಗಿಷ್ಟವಿರಲಿಲ್ಲ. ಮೋಹನ ಸುಶೀಲರೂ ಸದಾಶಿವನನ್ನಂಟಿಕೊಂಡು ಬಿಟ್ಟಿದ್ದರು. ತಮ್ಮ ಮಾವನ ಶೌರ್ಯಸಾಹಸಾದಿಗಳ ಕತೆ ಕೇಳಿ ಬಲ್ಲ ಆ ಎಳೆಯರಿಬ್ಬರೂ ಅವನನ್ನು ವೀರಪುರುಷನೆಂದು ಭಾವಿಸಿ ಆರಾಧಿಸುತ್ತಿದ್ದರು.

ರಾತ್ರಿಯೂಟ ಮುಗಿದ ಬಳಿಕ ವೀರಣ್ಣ, ಶಾಸ್ತ್ರಿ, ಈಶ್ವರ, ಸದಾಶಿವ ನಾಲ್ವರೂ ಅಟ್ಟದ ಮೇಲಿನ ಕೈಸಾಲೆಯಲ್ಲಿ ದಿಂಬುಗಳಿಗೊರಗಿ ಕುಳಿತು ಮಾತಿ ಗಾರಂಭಿಸಿದ್ದರು. ಪತ್ನಿಗೆ ಔಷಧ ಕೊಟ್ಟು ಸೋಮಶೇಖರಪ್ಪನವರೂ ಮೇಲೆ ಬಂದು ತಮ್ಮ ಕೊಟಡಿಯಲ್ಲಿ ಪವಡಿಸಿದ್ದರು.

"ಮುಂದೇನು ವಿಚಾರ ವೀರಣ್ಣಾ?" ಎಂದು ಕೇಳಿದ ಸದಾಶಿವ.

"ಎಂಥ ವಿಚಾರ?"

"ಕಾಂಗ್ರೆಸ್ಸಿನಲ್ಲೇ ಇರುವವರೋ ಇಲ್ಲಾ ಅದನ್ನು ಬಿಟ್ಟು ಬೇರೇನಾ ದರೂ ಮಾಡುವವರೋ?"

“ ನಾನೂ ಇದೇ ಮಾತೇ ಕೇಳುತಾ ಇದೇನೆ ಇವರಿಗೆ ಒಂದು ವರ್ಷ ದಿಂದ. ” ಶಾಸ್ತ್ರಿ ಹೇಳತೊಡಗಿದ : “ ಜಿಲ್ಲಾ ಕಾಂಗ್ರೆಸಿನ ಅಧಿಕಾರವೂ ನಮ್ಮ ಗುಂಪಿಗೆ ಸಿಕ್ಕಲಿಲ್ಲ. ಇನ್ನು ಮೇಲೂ ಸಿಗುವಂತಿಲ್ಲ. ಸುಮ್ಮನೆ ಕೂತು ಮಾಡುವದೇನು ? ರೈತರ ಸ್ಥಿತಿ ದಿನದಿಂದ ದಿನಕ್ಕೆ ಕೆಡುತ್ತಾ ಇದೆ. ಅವರಿ ಗಾಗಿ ಏನಾದರೂ ಮಾಡಲೇಬೇಕು ಅಂತ ಬಡಕೊಳ್ಳುತಾ ಇದೇನೆ. ಈ ವೀರಣ್ಣನೋ ಈ ಜಿಲ್ಲೆಯನ್ನೇ ಬಿಟ್ಟು ಓರೆಕೋರೆ ಜಿಲ್ಲೆಯ ಪುಢಾರಿಯಾಗಲು ಓಡಾಡುತಾ ಇದಾನೆ. ಕಡುಗಲಿಗಂತೂ ಯಾವ ವಿಚಾರವೂ ಇಲ್ಲ. ಸುಮ್ಮನೆ ಅಲ್ಲಿ ಇಲ್ಲಿ ತಿರುಗಿಕೊಂಡು ಕಾಲಹರಣ ಮಾಡುತಾ ಇದಾನೆ. ”

“ ಅಷ್ಟಾದರೂ ಮಾಡುತಾ ಇದಾನಲ್ಲ ? ಮನೆಯಲ್ಲಿ ಕೂತು ಏನು ಮಾಡಬೇಕು ಅವ ? ವೀರಣ್ಣ ನಗುನಗುತ್ತ ಹೇಳಿದ.

“ ಕಾಂಗ್ರೆಸ್ ಬಿಟ್ಟುಬಿಡೋಣ, ಸುಭಾಷರ ಪುರೋಗಾಮಿ ಪಕ್ಷ ಸೇರಿ ಚುನಾವಣೆಯ ಸಿದ್ಧತೆ ಮಾಡೋಣ ಅಂತ ನನ್ನ ವಿಚಾರ ” ಎಂದ ಶಾಸ್ತ್ರಿ.

“ ಸರಿಯಾದ ವಿಚಾರ. ಈಗಿನಿಂದಲೇ ಸಿದ್ಧತೆ ಮಾಡಿದರೆ ಚುನಾವಣೆ ಯಲ್ಲಿ ಜಯವೂ ಸಿಕ್ಕೀತು ” ಎಂದ ಈಶ್ವರ.

“ ಅದೂ ಒಂದು ವಿಚಾರ. ರಾಮಣ್ಣ ನನ್ನನ್ನೂ ಕೇಳಿದ್ದಾರೆ ಎಷ್ಟೋ ಸಲ. ನಮ್ಮ ಗುಂಫೆಲ್ಲಾ ಸೇರಿಕೊಂಡರೆ ತಮ್ಮ ಪಕ್ಷ ಬಲವಾಗುವದೆಂದು ಅವರು ಬಲ್ಲರು ” ಎಂದ ವೀರಣ್ಣ.

“ ಹಾಗಾದರೆ ಯಾಕೆ ಮೀನ ಮೇಷ ಮಾಡುತ್ತಿದ್ದೀರಿ ? ” ಎಂದ ಸದಾಶಿವ.

“ ಒಂದು ಪಕ್ಷ ಬಿಟ್ಟು ಇನ್ನೊಂದಕ್ಕೆ ಕೂಡುವದೆಂದರೆ ಹುಡುಗಾಟವೇ ಸದಾಶಿವ ? ಕಾಂಗ್ರೆಸನ್ನು ಬಿಡುವದೇ ಆದರೆ ಯಾಕೆ ಬಿಡಬೇಕು ಅನ್ನುವ ದನ್ನು ಮೊದಲು ವಿಚಾರಿಸಬೇಕಾಗುತ್ತದೆ, ಹೌದೋ ಅಲ್ಲವೋ ? ”

“ ಕಾಂಗ್ರೆಸ್ಸು ಜನತಾ ಪಕ್ಷವಾಗಿ ಉಳಿದಿಲ್ಲ, ಬಂಡವಾಳಗಾರರ ಕೈಗೊಂ ಬೆಯಾಗಿದೆ—ಅದಕ್ಕಾಗಿ ” ಎಂದ ಶಾಸ್ತ್ರಿ.

“ ಎಲ್ಲಾ ಪಕ್ಷಗಳ ಮಾತೂ ಹಾಗೇ. ರಾಜಕೀಯ ಪಕ್ಷ ನಡಸಲು ಹಣ ಬೇಕಾಗುತ್ತದೆ. ಅದಕ್ಕಾಗಿ ಕೆಲವು ಹಣವಂತರನ್ನು ಕಟ್ಟಿಕೊಳ್ಳಬೇಕಾ

ಗುತ್ತದೆ. ಪುರೋಗಾಮಿ ಪಕ್ಷನಾದರೂ ಯಾರ ಕೈಯಲ್ಲಿದೆಯೆಂದು ತಿಳಿದು ಕೊಂಡಿದ್ದೀರಿ? ಅದರ ಮುಖಂಡರೆಲ್ಲಾ ಅರಮನೆಗಳಂಥ ಮನೆಗಳಲ್ಲಿ ರಾಜರ ಹಾಗೆ ವಾಸಿಸುವವರು..ಅದೂ ಅಲ್ಲದೆ, ಕಾಂಗ್ರೆಸ್ ಬಿಡಲು ನಾನೊಬ್ಬ ತಯಾರಾದರೆ ಸಾಕೇ? ನಮ್ಮ ಗುಂಪಿನವರೆಲ್ಲಾ ಒಪ್ಪಬೇಕಲ್ಲ. ಕಡುಗಲಿ ಒಪ್ಪಬೇಕು. ವಿಶಾಲಪ್ಪನವರು ಒಪ್ಪಬೇಕು. ಎಲ್ಲರಿಗೂ ಮೊದಲು ಸೋಮ ಶೇಖರಪ್ಪನವರು ಒಪ್ಪಬೇಕು. ಏನಂತೀರಿ ವಕೀಲರೇ?"

ಅವರು ಮಲಗಿದ್ದಲ್ಲಿಂದಲೇ ಉತ್ತರವಿತ್ತರು:

"ನನಗೆ ಈ ರಾಜಕಾರಣವೇ ಬೇಡ ಅನ್ನಿಸುತ್ತದೆ. ನಿಮಗೆ ಸರಿಯೆನ್ನಿಸಿದ್ದು ನೀವು ಮಾಡಿರಿ"

"ನಿಮ್ಮನ್ನು ಬಿಟ್ಟು ನಾವು ಮಾಡುವದೇ! ಛೆ."

"ವಕೀಲರ ವಿಚಾರ ಇರಲಿ ವೀರಣ್ಣ. ಈ ಬಗ್ಗೆ ನಿಮ್ಮ ಸ್ವಂತದ ಅಭಿಪ್ರಾಯ ಏನು?"

"ಕಾಂಗ್ರೆಸನ್ನು ಬಿಡಬೇಕೆಂತ ನಾನು ಇದುವರೆಗೂ ಯೋಚಿಸಿಲ್ಲ. ಅದರ ಅಗತ್ಯವೂ ಇಲ್ಲ. ಇಂದಿಲ್ಲ ನಾಳೆ ನಮ್ಮ ಗುಂಪಿನ ಕೈಗೇ ಅಧಿಕಾರ ಬರುವದು ಖಂಡಿತ."

ಶಾಸ್ತ್ರಿ ಗಟ್ಟಿಯಾಗಿ ನಗುತ್ತಾ ಹೇಳಿದ:

"ಇಷ್ಟೊಂದು ಕಟು ಅನುಭವ ಬಂದರೂ ಇನ್ನೂ ನಿಮಗೆ ಬುದ್ಧಿ ಬಂದಿಲ್ಲವಲ್ಲಾ ವೀರಣ್ಣ? ಅಧಿಕಾರ ಬಿಟ್ಟುಕೊಡುವ ಆಸಾಮಿಯೇ ಈ ಕೃಷ್ಣಾಜಿ? ಒಂದು ವೇಳೆ ನೆಹರೂ ಅಧಿಕಾರ ಬಿಟ್ಟರೂ ಬಿಟ್ಟಾರು. ಕೃಷ್ಣಾಜಿ ಎಂದೂ ಬಿಡಲಿಕ್ಕಿಲ್ಲ. ಈ ಮಾತನ್ನು ಸೆರಗಿಗೆ ಗಂಟು ಹಾಕಿಕೊಳ್ಳಿರಿ. ಅವನ ಕೈಯಿಂದ ಅಧಿಕಾರ ಕಸಿದುಕೊಳ್ಳುವ ತಾಕತ್ತು ನಿಮ್ಮದಲ್ಲ. ಸುಮ್ಮನೆ ಆರಸೆ ಮಾಡುತ್ತ ಕೂಡುವವದರಿಂದೇನುಪಯೋಗ?"

ಈಶ್ವರ ಕೇಳಿದ: "ಈ ಸಲ ನಿಮ್ಮ ಗುಂಪಿನವರೇ ಜಿಲ್ಲಾ ಕಾಂಗ್ರೆಸ್ ಅಧ್ಯಕ್ಷರಾಗಬಹುದು ಅಂತೀರಾ ವೀರಣ್ಣ?"

"ಯಾಕಾಗಬಾರದು?"

"ಇಷ್ಟು ಓದಿ ಜಾಣರಾದ ನಿಮಗೂ ಸ್ವಲ್ಪವೂ ವ್ಯವಹಾರ ಜ್ಞಾನವಿಲ್ಲವಲ್ಲ! ಸಂಸ್ಥೆಯ ಅಧಿಕಾರ ಕಿತ್ತುಕೊಳ್ಳುವದಕ್ಕಾದರೂ ಸದಸ್ಯರ ಬೆಂಬಲ

ಬೇಕು. ನಮ್ಮ ಗುಂಪಿನವರು ಅಧಿಕಾರಕ್ಕೆ ಬರಬಾರದೆಂತ ಮಸಲತ್‌ಮಾಡಿ ನಮಗೆ ಸದಸ್ಯತ್ವದ ಪುಸ್ತಕ ಕೂಡಾ ಹೆಚ್ಚಾಗಿ ಕೊಡಲಿಲ್ಲ ಕೃಷ್ಣಾಜಿ. ಮತ್ತೆ ಅವರದೇ ಬಹುಮತವಾಗುವದು ಖಂಡಿತ. ಏನೇನೋ ಆಸೆ ತೋರಿಸಿ ಸದಸ್ಯರನ್ನೆಲ್ಲಾ ತಮ್ಮ ಗುಂಪಿನ ಕಡೆಗೇ ಎಳೆದುಕೊಂಡಿದ್ದಾರೆ. ನಮ್ಮಿಂದ ಏನಾದೀತು ಅಂತ ಸದಸ್ಯರು ಬಂದಾರು ನಮ್ಮ ಕಡೆಗೆ ? ಯಾವ ಕಮೀಟಿಯ ಅಧಿಕಾರವೂ ನಮ್ಮ ಕೈಯಲ್ಲಿಲ್ಲ. ನಾವೇನು ಒಂದು ಪರ್ಮಿಟ್ ಕೊಡಿಸಬಲ್ಲೆವೆ? ಒಂದು ಲೈಸೆನ್ಸ್ ಕೊಡಿಸಬಲ್ಲೆವೆ ? " ಎಂದ ಚೆನ್ನಯ್ಯ.

" ಆದರೂ... "

" ಸುಮ್ಮನೆ ಕಾಲಹರಣ ಅಷ್ಟೆ, ಅದಕ್ಕೆ ಬದಲು ವಿರೋಧಿ ಪಕ್ಷ ಸಂಘಟಿಸುವದೇ ಒಳ್ಳೆಯದು ವೀರಣ್ಣ " ಎಂದ ಸದಾಶಿವ.

" ವಿರೋಧಿ ಪಕ್ಷ ? "

" ನಮ್ಮದು ಗಾಂಧೀ ಪ್ರಾಂತ ಅಂತ ಕೊಚ್ಚಿಕೊಂಡು ಕೈಲಾಗದವರ ಹಾಗೆ ಕೂಡುವದೇ ಕನ್ನಡಿಗರ ಹಣೆಬರಹವಾಗಿದೆ. ಕಾಂಗ್ರೆಸನ್ನು ಬಿಟ್ಟರೆ ಇನ್ನೊಂದು ಪ್ರಬಲ ಪಕ್ಷವಿಲ್ಲ ರೈತ ಕೂಲಿಕಾರ ರಾಜ್ಯ ಸ್ಥಾಪನೆಯೇ ಕಾಂಗ್ರೆಸಿನ ಗುರಿ ಅಂತ ಹಿಂದೆ ಮುಖಂಡರೆಲ್ಲಾ ಹೇಳುತಿದ್ದರಲ್ಲ ಈಗ ನಡೆದಿರುವದು ರೈತ ಕೂಲಿಕಾರರ ರಾಜ್ಯ ಅಂತ ನಿಮಗನಿಸುವದೋ ? "

" ಹೂಂ. ಮುಂದೆ ? "

" ನಮ್ಮ ಕನ್ನಡಿಗರಿಗೇನು ರೋಗವೋ ತಿಳಿಯದು. ಪ್ರತಿಯೊಂದರಲ್ಲೂ ಹಿಂದೆ ಬೀಳುವ ಮಂದಿ ನಮ್ಮದು. ನಲವತ್ತೆರಡರ ವೀರರೆಲ್ಲಾ ಇನ್ನೂ ಸುಮ್ಮನಿರುವರಲ್ಲಾ ! "

ಚೆನ್ನಯ್ಯಶಾಸ್ತ್ರಿ ಹೇಳಿದ :

" ನನ್ನ ಬಗ್ಗೆ ಹೇಳಬೇಕಾದರೆ ೧೯೪೭ರಲ್ಲೇ ಕಾಂಗ್ರೆಸಿನ ಬಗ್ಗೆ ಬೇಸರವಾಯ್ತು ನನಗೆ. ಆದರೆ ನಾನೊಬ್ಬನೇ ಏನು ಮಾಡೇನು ? "

" ಶರಣಶರಣೆಯರ ಸಂಘದ ಟೋಪಿ ಶಾಂತಣ್ಣಾ ಒಂದು ರಾಜಕೀಯ ಪಕ್ಷ ಮಾಡುವವರಿದ್ದಾರಂತಲ್ಲ ? " ಎಂದ ಈಶ್ವರ.

" ಅವರಲ್ಲ ಈಶ್ವರ್. ಓರೆಕೋರೆ ನಗರದ ಬಸೆಟ್ಟೆಯವರೂ ಇನಾಂದಾರರೂ ಕೂಡಿ ಮಾಡುವವರಿದ್ದಾರೆ. "

" ಟೋಪಿ ಶಾಂತಣ್ಣ ಅಂದರೆ ನಿಮಗೆ ಗೊತ್ತಿಲ್ಲವೇನ್ರೀ ಈಶ್ವರಪ್ಪ? ಎಲ್ಲರಿಗೂ ಟೋಪಿ ಹಾಕುತ್ತಾ ತಿರುಗುವ ನಿರುದ್ಯೋಗಿ ಆತ. ಪಕ್ಕಾ ಡಾಂಭಿಕ ಮನುಷ್ಯ. ಶರಣಶರಣೆಯರ ಸಂಘ ಮಾಡಿ ಹತ್ತು ಹನ್ನೆರಡು ಸಾವಿರ ಕೂಡಿಸಿ ಅದನ್ನೆಲ್ಲ ಎತ್ತಿಹಾಕಿದ ಇವನ ಮೋಸವೆಲ್ಲಾ ಜನರಿಗೆ ಗೊತ್ತಾಗಿ ಈಗ ಯಾರೂ ಹಣ ಕೊಡದಂತಾಗಿದೆ. ಅದಕ್ಕೆ ಮತ್ತೇನಾದರೂ ಸಂಘವೋ ಪಕ್ಷವೋ ಸಿಕ್ಕರೆ ನೋಡುತ್ತಿದ್ದಾನೆ" ಎಂದ ಶಾಸ್ತ್ರಿ.

" ನನಗೂ ಅವರ ಬಗ್ಗೆ ಅನುಮಾನವಿದ್ದೇ ಇತ್ತು. ಅಂತೂ ನಾಡಿನಲ್ಲಿ ಇಂಥ ಡಾಂಭಿಕರೇ ಬೆಳೆಯಲಿಕ್ಕೆ ಹತ್ತಿಪರಲ್ಲ!"

" ಸ್ವಾತಂತ್ರ್ಯ ಬಂದ ಬಳಿಕ ಕಾಂಗ್ರೆಸು ಕೆಡಲು ಕಾರಣರಾದವರೂ ಇಂಥ ಸ್ವಾರ್ಥಿಗಳೇ."

" ಮುಂದೇನು ವಿಚಾರ ಸದಾಶಿವ?" ಶಾಸ್ತ್ರಿ ಕೇಳಿದ

" ಜೇಲಿನಲ್ಲೇ ನಿರ್ಧಾರ ಮಾಡಿದ್ದೇನೆ. ಪ್ರಯತ್ನಪಟ್ಟು ಆದಷ್ಟು ಬೇಗ ವಿರೋಧಿ ಪಕ್ಷ ಕಟ್ಟುವದು."

" ನಾನೊಬ್ಬನಂತೂ ನಿಮ್ಮ ಜತೆಗೇ ಇರುತ್ತೇನೆಂತ ತಿಳಿದುಕೊಳ್ಳಿರಿ" ಎಂದ ಶಾಸ್ತ್ರಿ.

" ನೀವು ವೀರಣ್ಣ?"

" ಸದ್ಯಕ್ಕಂತೂ ನಾನು ವಿಧಾಯಕ ಕಾರ್ಯ ಮಾಡುತ್ತಿದ್ದೇನೆ. ಅದೇ ಒಳ್ಳೆಯದು" ಎಂದು ಚಾಣಾಕ್ಷತನದ ಮಾತನಾಡಿ ವೀರಣ್ಣ ಕಂಬಳಿಯನ್ನೆಳೆದುಕೊಂಡ. ಸದಾಶಿವನಂಥವನ ಜತೆಗೆ ಸೇರಿಕೊಳ್ಳುವುದೆಂದರೆ ಅವನಿಗೂ ಭೀತಿಯೆ. ಕಾಂಗ್ರೆಸ್ಸಿಗೇ ಅಂಟಿಕೊಂಡಿದ್ದಲ್ಲಿ ಚುನಾವಣೆಗಳ ಕಾಲಕ್ಕೆ ತನಗೂ ಒಂದು ಸೀಟು ಸಿಕ್ಕಬಹುದು, ತಾನೂ ಒಬ್ಬ ಮಂತ್ರಿಯೋ ಉಪಮಂತ್ರಿಯೋ ಆಗಲು ಸಾಧ್ಯವಾಗಬಹುದು. ವಿರೋಧಿ ಪಕ್ಷ ಯಶಸ್ವಿಯಾಗಿಯೆ ಆಗುವುದೆಂಬ ಭರವಸೆಯಾದರೂ ಎಲ್ಲಿದೆ? ಇಪ್ಪತ್ತು ವರ್ಷಗಳ ವರೆಗೆ ಬ್ರಿಟಿಷರ ವಿರುದ್ಧ ಹೋರಾಡಿದ್ದಾಯಿತು. ಇನ್ನು ಕಾಂಗ್ರೆಸಿನ ವಿರುದ್ಧ ಹೋರಾಟವೆ? ನಿಜಕ್ಕೂ ವೀರಣ್ಣನಿಗೆ ಅದಾವುದೂ ಬೇಡವಾಗಿತ್ತು. ಮಧ್ಯವಯಸ್ಸನ್ನು ಸಮೀಪಿಸುತ್ತಿದ್ದ ಅವನ ಮನಸ್ಸು ದೇಹ ಎರಡೂ ನೆಮ್ಮದಿಯನ್ನೂ ವಿರಾಮವನ್ನೂ ಬಯಸುತ್ತಿದ್ದುವು.

## ೭

" ಯಾರೋ ಒಬ್ಬರು ನಿನ್ನ ನೋಡುವದಕ್ಕೆ ಬಂದಿದ್ದಾರ ಮಾಮಾ" ಎಂದಳು ಸುಶೀಲಾ.

ಆಗತಾನೆ ಎದ್ದು ಸ್ನಾನ ಮಾಡುತ್ತಲಿದ್ದ ಸದಾಶಿವ ಹೇಳಿದ:

" ಕೂಡಲಿಕ್ಕೆ ಹೇಳು. ಬಂದುಬಿಟ್ಟೆ "

ಸ್ನಾನ ಮುಗಿಸಿ ಅವನು ಪಡಸಾಲೆಗೆ ಬಂದಾಗ ಎಳೆಯ ಹುಡುಗನೊಬ್ಬ ಕಾದು ನಿಂತಿದ್ದ.

" ಯಾರಪ್ಪಾ ನೀನು ? "

" ನಾನು ಕೇಶವರಾಯರ ಅಳಿಯ. "

" ಕೂಡಪ್ಪಾ, ಕೂಡು. ನಿಮ್ಮ ಮಾವ ಇಲ್ಲೇ ಇದಾರೆಯೆ ? "

" ಹೌದ್ರೀ, ಅವರಿಗೆ ನೆಟ್ಟಗಿಲ್ಲ. ಆರೇಳು ತಿಂಗಳಿಂದ ಇಲ್ಲೇ ನಮ್ಮಲ್ಲೇ ಇದ್ದಾರೆ. "

" ಏನಾಗಿದೆ ಅವರಿಗೆ ? "

" ಏನೋ ಪ್ಲೂರಸಿ ಅಂತಾರೆ ಡಾಕ್ಟರು. ನೀವು ಬಂದದ್ದು ಕೇಳಿ, ಸವುಡಾದರೆ ಭೆಟ್ಟಿಯಾಗಿ ಹೋಗಬೇಕಂತ ಹೇಳಿದ್ದಾರೆ. "

" ಯಾರು ? " ಎನ್ನುತ್ತಾ ಈಶ್ವರ ಅಟ್ಟವಿಳಿದು ಬಂದ.

" ಕೇಶವರಾಯರು. ಸೋಷಲಿಸ್ಟ್ ಪಾರ್ಟಿಯ ಕಾರ್ಯಕರ್ತರು. ನಿಮಗೂ ಗೊತ್ತಿರಬೇಕಲ್ಲ ಈಶ್ವರ್ ? "

" ಗೊತ್ತು ಗೊತ್ತು, ಹೋದ ವರ್ಷವೇ ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟು ಸಮಾಜವಾದಿ ಪಕ್ಷ ಸೇರಿಕೊಂಡರು. ಬಹಳ ಹುರುಪಿನ ವ್ಯಕ್ತಿ. "

" ಅವರಿಗೆ ಪ್ಲೂರಸಿ ಅಂತೆ. ನನಗೂ ಈಗ ಗೊತ್ತಾಯ್ತು. ಅವರೂ

ನಾನೂ ಕೂಡಿ ಕೆಲಸ ಮಾಡಿದವರು—ವಿದ್ಯಾರ್ಥಿಗಳಿದ್ದಾಗಿನಿಂದ. ಹೋಗಿ ನೋಡಿಕೊಂಡು ಬರೋಣ, ಬರ್ತೀರಾ ? "

" ಸ್ವಲ್ಪ ತಡೆಯಿರಿ. ಮುಖ ತೊಳೆದುಕೊಂಡು ಬರ್ತೀನೆ. "

ಸೋಮಶೇಖರಪ್ಪನವರು ಆರು ಗಂಟೆಗೇ ಎದ್ದು ವಾಯು ಸೇವನೆ ಗೆಂದು ಹೊರಟು ಹೋಗಿದ್ದವರು ಇನ್ನೂ ಬಂದಿರಲಿಲ್ಲ. ವೀರಣ್ಣ ಬೆಳಗಿನ ಗಾಡಿಗೆ ಹೊರಟು ಹೋಗಿದ್ದ. ಚೆನ್ನಯ್ಯಶಾಸ್ತ್ರಿಯೂ ಮೊದಲನೆಯ ಬಸ್ಸಿಗೆ ತನ್ನ ಹಳ್ಳಿಗೆ ಹೋಗಿದ್ದ.

" ಒಂದೆರಡು ದಿನ ಇದ್ದು ಹೋಗಪ್ಪಾ ಸದಾ "ಎಂದು ಒಳಗಿನಿಂದ ಕೂಗಿ ಹೇಳಿದರು ನೀಲಮ್ಮ. ಸದಾಶಿವ ಅವರ ಬಳಿ ಬಂದು,

" ಇಲ್ಲವ್ವ. ಇವತ್ತು ಊರಿಗೆ ಹೋಗಬೇಕು, ಮತ್ತೆ ಆಗಾಗ ಬರುತಿರು ತೇನಲ್ಲ ! " ಎಂದು ಹೇಳಿದ.

ಒಂದು ನಿಮಿಷ ಸುಮ್ಮನಿದ್ದು ಅನಂತರ ನೀಲಮ್ಮನವರು ಹೇಳಿದರು :

" ನಾ ಹೀಗೆ ಹೇಳುತೀನಿ ಅಂತ ಸಿಟ್ಟಾಗಬೇಡ ಸದಾ. ನಾನೇನು ಇನ್ನು ಬಹಳ ದಿನ ಉಳಿಯುವದಿಲ್ಲ. ಹೇಳಬೇಕನ್ನಿಸಿದ್ದು ಈಗಲೇ ಹೇಳಿಬಿಡು ತೀನಿ. ಇನ್ನುಮೇಲಾದರೂ ನೀನು ಚಳುವಳಿ ಬಿಟ್ಟು ಸ್ವಲ್ಪ ಶಾಂತವಾಗಿ ಇರ ಬೇಕಪ್ಪಾ. ಪಾಪ, ಮುಪ್ಪಿನ ಕಾಲದಲ್ಲಿ ನಿಮ್ಮ ತಂದೆಗೆ ಸ್ವಲ್ಪವಾದರೂ ಸಮಾಧಾನ ಸಿಗಲಿ. ನೀನೂ ಎಲ್ಲರ ಹಾಗೆ ಮದುವೆ ಮಾಡಿಕೊಂಡು ಸಂಸಾರಿ ಯಾಗಬೇಕಪ್ಪಾ. "

ಸದಾಶಿವ ನಗುತ್ತ ಹೇಳಿದ : " ಇನ್ನೊಂದು ಹತ್ತು ವರ್ಷ ಹೋಗಲಿ ಬಿಡವ್ವ. ಈಗಲೇ ಏನವಸರ ಮದುವೆಗೆ ? "

" ನೀನು ಹೀಗೇ ಹೇಳುತಾ ಇರು. ನಿನಗೆ ಮದುವೆಯಾಗಿ ಮಕ್ಕಳಾ ದದ್ದು ನೋಡಿ ಸಾಯಬೇಕೆಂತ ಎಷ್ಟೋ ದಿನ ಬಯಸಿ ಬಯಸಿ ಕಣ್ಣು ಮುಚ್ಚಿ ದಳು ನಿನ್ನ ತಾಯಿ. ನನ್ನದೂ ಕಾಲ ಮುಗೀತಾ ಬಂತಪ್ಪಾ. ನಾನಾದರೂ ನೋಡಬೇಕು ಅಂತೀನಿ ನಿನ್ನ ಸಂಸಾರವನ್ನ.... "

" ನಿನಗೇನೂ ಆಗುವದಿಲ್ಲ ಸುಮ್ಮನಿರವ್ವ. ತಿಂಗಳೊಪ್ಪತ್ತಿನಲ್ಲಿ ನೆಟ್ಟ ಗಾದೀತು. "

" ಇದು ನೆಟ್ಟಗಾಗುವ ಜಡ್ಡಲ್ಲ ಸದಾ. ಕ್ಷಯರೋಗ ಅಂತಾರೆ ಡಾಕ್ಟರು. "

" ಯಾವ ರೋಗ ಆದರೇನವ್ವ. ಎಲ್ಲಾ ರೋಗಗಳಿಗೂ ಔಷಧ ಇವೆ ಈಗಿನ ಕಾಲದಲ್ಲಿ. ನೀನೇನು ಆಶೆ ಬಿಡಬೇಡ. "

" ನನ್ನಿಂದಾಗಿ ಅವರಿಗೆ ಎಷ್ಟು ತ್ರಾಸ ಸದಾ ! ದೇವರು ನನ್ನ ಬೇಗ ಒಯ್ದರೇನೇ ಒಳ್ಳೆಯದು ನೋಡು. "

" ನೀನು ಹೀಗೆಲ್ಲ ಮಾತನಾಡಬಾರದವ್ವ. ಸಣ್ಣ ಸಣ್ಣ ಹುಡುಗರಿದ್ದಾರೆ, ಅವರನ್ನೆಲ್ಲ ಬಿಟ್ಟು ಯಾತಕ್ಕೆ ಹೋಗುತ್ತೀ ? ಧೈರ್ಯವಿರಲಿ. ಹೂಂ. ನಾನು ಬರುತ್ತೇನೆ " ಎಂದು ಅಲ್ಲಿಂದ ಹೊರಟ.

" ಮಧ್ಯಾಹ್ನ ಊಟಕ್ಕೆ ಬಾರಪ್ಪಾ. "

" ಊರಲ್ಲಿದ್ದರೆ ಬರುತ್ತೇನೆ. "

ಕೇಶವರಾಯನ ಮಾವ ಅಭ್ಯಂಕರರು ಮಧ್ಯಮ ವರ್ಗದ ಮಹಾರಾಷ್ಟ್ರೀಯ ಗೃಹಸ್ಥರು. ಒಂದು ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ಕೆಲಸ ಮಾಡುತ್ತಿದ್ದ ಅವರು, ಅಗಲ ಕಿರಿದಾದ ಸಂದಿಯೊಂದರಲ್ಲಿ ಸ್ವಲ್ಪ ಚಿಕ್ಕದೇ ಎನ್ನುವಂತಿದ್ದ ಬಾಡಿಗೆ ಮನೆಯಲ್ಲಿ ವಾಸವಾಗಿದ್ದರು. ವನಮಾಲಾ ಅವರ ಹಿರಿಯ ಮಗಳು. ಅವಳು ಮ್ಯಾಟ್ರಿಕ್ ವರ್ಗದಲ್ಲಿ ಓದುತ್ತಿದ್ದಾಗ ನಲವತ್ತೆರಡರ ಚಳುವಳಿಗಾರಂಭವಾಗಿತ್ತು. ಮೊದಲಿನಿಂದಲೂ ಸ್ವಾತಂತ್ರ್ಯ ಪ್ರೇಮಿಯಾಗಿದ್ದ ವನಮಾಲಾ ಕೂಡ ಶಾಲೆಯನ್ನು ತ್ಯಜಿಸಿ ಮುಷ್ಕರ ಮೆರವಣಿಗೆಗಳಲ್ಲಿ ಭಾಗವಹಿಸಿದ್ದಳು. ಚಳುವಳಿಗಾಗಿ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಸಂಘಟಿಸುತ್ತಿದ್ದ ಕೇಶವನಿಗೂ ಅವಳಿಗೂ ಪರಿಚಯವಾದುದು ಆ ಸಂದರ್ಭದಲ್ಲಿ. ಅವನ ಧೈರ್ಯ ಸಾಹಸಗಳನ್ನು ಕಂಡು ಅವಳೂ, ಅವಳ ಉತ್ಸಾಹವನ್ನು ಕಂಡು ಅವನೂ ಪರಸ್ಪರರಿಗೆ ಮಾರುಹೋಗಿದ್ದರು. ಕೇಶವನ ಬಂಧನಕ್ಕೆ ಆಜ್ಞೆ ಹೊರಟ ಬಳಿಕ ಆತ ಅಜ್ಞಾತವಾಸಿಯಾಗಿದ್ದಾಗ ಅವಳು ಅವನಿಗೆ ಅನೇಕ ರೀತಿಗಳಲ್ಲಿ ನೆರವಾಗಿದ್ದಳು. ಎಷ್ಟೋ ತಿಂಗಳುಗಳ ವರೆಗೆ ಅವಳ ಮನೆಯಿಂದಲೇ ಅವನಿಗೆ ಊಟ ಹೋಗುತ್ತಿತ್ತು. ಚಳುವಳಿಯ ಕಾಲಕ್ಕೆ ಬೆಳೆದ ಆ ಸ್ನೇಹ ಕ್ರಮೇಣವಾಗಿ ಪ್ರೇಮಕ್ಕೆ ತಿರುಗಿ, ಚಳುವಳಿ ಮುಗಿದ ತರುವಾಯ ಅವರಿಬ್ಬರನ್ನೂ ಒಂದು

ಗೂಡಿಸಿತ್ತು. ಕನ್ನಡಿಗ ಕೇಶವ, ಮಹಾರಾಷ್ಟ್ರದ ಕನ್ಯೆ ವನಮಾಲಾ ದಂಪತಿಗಳಾದುದು ಹಾಗೆ. ನವಮತವಾದಿಗಳಾದ ಅಭ್ಯಂಕರರು ಆ ವಿವಾಹಕ್ಕೆ ಹೃತ್ಪೂರ್ವಕವಾಗಿಯೆ ಒಪ್ಪಿ ಅವರನ್ನು ಆಶೀರ್ವದಿಸಿದ್ದರು. ರಾಜಕೀಯ ಕಾರ್ಯಕರ್ತರೊಡನೆ ಮದುವೆಯಾಗುವುದೆಂದರೆ ಸನ್ಯಾಸಿಯನ್ನು ಕಟ್ಟಿಕೊಂಡಂತೆ. ಅದರಲ್ಲೂ ಕೇಶವನಿಗೆ ಹೊಲ ಮನೆ ಯಾವುದೂ ಇರಲಿಲ್ಲ. ಯಾವುದೊಂದು ಕೆಲಸ ಹಿಡಿದು ಸಂಸಾರ ಸಾಗಿಸುವಂಥ ಆಸಾಮಿಯೂ ಅವನಲ್ಲ. ಅದೆಲ್ಲವೂ ಗೊತ್ತಿದ್ದರೂ ಅವನನ್ನು ಒಲಿದು ವರಿಸಿದ್ದಳು ವನಮಾಲಾ. ಅವನು ಸಾರ್ವಜನಿಕ ಕಾರ್ಯದಲ್ಲಿ ತೊಡಗಿದ್ದರೂ ತಾನು ದುಡಿದು ಸಂಪಾದಿಸಬಲ್ಲೆನೆಂಬ ಧೈರ್ಯ ಅವಳಿಗಿತ್ತು. ಮದುವೆಯಾಗಿ, ಒರಟೂರಿನಲ್ಲಿ ಮನೆಮಾಡಿದ ತರುವಾಯ ಅವಳು ಅಲ್ಪಾವಧಿಯಲ್ಲಿಯೆ ಅಕ್ಕಪಕ್ಕದ ಸ್ತ್ರೀಯರ ವಿಶ್ವಾಸಗಳಿಸಿಕೊಂಡು ಅವರ ಮಕ್ಕಳಿಗೆ ಪಾಠ ಹೇಳಿಕೊಡಲಾರಂಭಿಸಿದ್ದಳು. ಮುಂಬಯಿಯ ಮರಾಠಿ ಪತ್ರಿಕೆಗಳ ಪ್ರತಿನಿಧಿಯಾಗಿ ತಿಂಗಳಿಗೆ ಐವತ್ತು ಅರುವತ್ತು ರೂಪಾಯಿ ಸಂಪಾದಿಸತೊಡಗಿದ್ದಳು. ಮನೆಯಲ್ಲಿ ಹೊಲಿಗೆಯ ಯಂತ್ರವನ್ನಿಟ್ಟುಕೊಂಡು ಪರಿಚಯದ ಜನರ ಬಟ್ಟೆಗಳನ್ನು ಹೊಲಿದು ಕೊಟ್ಟು ಅಲ್ಪಸ್ವಲ್ಪ ಗಳಿಸುತ್ತಿದ್ದಳು. ಹಾಗೆ ವನಮಾಲಳ ಸ್ವಂತ ದುಡಿತದ ಆಧಾರದಿಂದ ಅವರ ಸಂಸಾರ ಸಾಗಿ ಬಂದಿತ್ತು. ಕೇಶವ ತನ್ನ ಪಾಡಿಗೆ ತಾನು ಕಾಂಗ್ರೆಸ್ ಚಟುವಟಿಕೆಗಳಲ್ಲಿ ಭಾಗವಹಿಸುತ್ತ ಬಂದು ತಾಲ್ಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷಸ್ಥಾನದ ವರೆಗೂ ಏರಿದ್ದನಾದರೂ, ಮೊದಲಿನಿಂದಲೂ ಕಾಂಗ್ರೆಸ್ ಸೋಶಲಿಸ್ಟ್ ಪಕ್ಷದ ಸದಸ್ಯನಾಗಿದ್ದು ಸಮಾಜವಾದದಲ್ಲಿ ಅಚಲ ಶ್ರದ್ಧೆಯಿರಿಸಿದ್ದ ಅವನಿಗೆ ಸ್ವಾತಂತ್ರ್ಯೋತ್ತರ ಕಾಂಗ್ರೆಸ್ ರಾಜಕೀಯದಿಂದ ತೃಪ್ತಿಯಾಗಿರಲಿಲ್ಲ. ಅಂತೆಯೆ, ತಾಲ್ಲೂಕು ಕಾಂಗ್ರೆಸ್ ಅಧ್ಯಕ್ಷತೆಗೂ ಕಾಂಗ್ರೆಸ್ ಸದಸ್ಯತ್ವಕ್ಕೂ ರಾಜೀನಾಮೆಯಿತ್ತು ಸಮಾಜವಾದಿ ಪಕ್ಷವನ್ನು ಸೇರಿಕೊಂಡು ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲೂ ಅದನ್ನು ಸಂಘಟಿಸಲು ದುಡಿಯತೊಡಗಿದ್ದ. ಕಾಹಿಲೆಯಾಗಿ ಅವನು ಹಾಸಿಗೆ ಹಿಡಿದುದೂ ಅದೇ ಸಮಯದಲ್ಲಿ. ಒರಟೂರಿನಲ್ಲಿ ಚಿಕಿತ್ಸೆಗೆ ಸರಿಯಾದ ಅವಕಾಶವಿರಲಿಲ್ಲವಾದುದರಿಂದ ಕಳ್ಳೀಕಾಯಿಗೆ ಬಂದು ಅವನಿಗೆ ಗುಣವಾಗುವ ವರೆಗೂ ಇದ್ದು ಹೋಗುವಂತೆ

ಅಭ್ಯಂಕರರು ಒತ್ತಾಯಪಡಿಸಿದ್ದರು. ತಂದೆಯ ಮನೆಗೆ ಬಂದರೂ ವನಮಾಲಾ ಸುಮ್ಮನೆ ಕೂತುಕೊಳ್ಳದೆ ಪತ್ರಿಕೆಗಳಿಗೆ ಬರೆದು ಅಷ್ಟಿಷ್ಟು ಹಣ ಗಳಿಸುತ್ತಲೇ ಇದ್ದಳು. ಮನೆಯ ಅಟ್ಟದ ಮೇಲೆ ಕೇಶವನಿಗಾಗಿ ಒಂದು ಪ್ರತ್ಯೇಕ ಕೊಟಡಿಯನ್ನು ಬಿಟ್ಟುಕೊಟ್ಟಿದ್ದರು ಅಭ್ಯಂಕರರು. ಅವನು ನಿಧಾನವಾಗಿ ಚೇತರಿಸಿಕೊಳ್ಳತೊಡಗಿದ್ದ.

ಸದಾಶಿವನೂ ಈಶ್ವರನೂ ಅಲ್ಲಿಗೆ ಬಂದಾಗ ಕೇಶವ ಮೈತುಂಬಾ ರಗ್ ಹೊದೆದು ಹಾಸುಗೆಯಲ್ಲಿ ಕಾಲು ಚಾಚಿ ಒರಗಿಕೊಂಡಿದ್ದ. ಕಾಹಿಲೆಯಿಂದ ಸೊರಗಿ ಕಡ್ಡಿಯಂತಾಗಿದ್ದ ಕೇಶವನನ್ನು ಕಂಡು ಬಲು ವ್ಯಸನವಾಯಿತು ಸದಾಶಿವನಿಗೆ. ಹತ್ತು ವರ್ಷಗಳ ಹಿಂದಿನ ಆರೋಗ್ಯಶಾಲಿಯೂ ತೇಜಸ್ವಿಯೂ ಆದ ಕೇಶವನ ಮೂರ್ತಿಯನ್ನು ಅವನು ಜ್ಞಾಪಿಸಿಕೊಂಡ. ಅಂದು ಕೇಶವನ ಕಣ್ಣುಗಳಲ್ಲಿ ಚಿಕ್ಕೆಗಳ ಹೊಳಪಿತ್ತು, ಕೆನ್ನೆಗಳ ಮೇಲೆ ಬಣ್ಣವಿತ್ತು, ದೇಹದಲ್ಲಿ ಉತ್ಸಾಹವಿತ್ತು. ಇಂದು ಅದಾವುದೂ ಇಲ್ಲ. ದುರ್ಬಲವಾದ ಶರೀರ, ನರೆತ ಕೂದಲು, ಒಳಸೇರಿದ ಕಣ್ಣು, ಬಣ್ಣಗೆಟ್ಟ ಮುಖ. ಕೇವಲ ಕಾಹಿಲೆಯೊಂದೇ ಇದಕ್ಕೆ ಕಾರಣವಲ್ಲ. ಕೇಶವನು ಸಂಸಾರಿಯಾದುದೇ ಮುಖ್ಯ ಕಾರಣ.

ಸದಾಶಿವ ಹಾಗೆ ಯೋಚಿಸುತ್ತ, ಗಂಡನ ತಲೆಯ ಬಳಿ ಕುಳಿತಿದ್ದ ವನಮಾಲಳ ಕಡೆ ದೃಷ್ಟಿ ಹೊರಳಿಸಿದ. ಅವಳಿಗೆ ಇಪ್ಪತ್ತೈದು ವರ್ಷವಿರಬಹುದು. ನಿರೋಗಿಯಾದ ಶರೀರ. ನಸುಗಪ್ಪು ಬಣ್ಣವಾದರೂ ಕೆನ್ನೆಗಳ ಮೇಲೆ ಹೊಳಪಿತ್ತು, ತುಟಿಗಳಲ್ಲಿ ಮೋಹಕತೆಯಿತ್ತು, ತುಂಬಿದ ಎದೆ, ತೆಳ್ಳನೆಯ ಕಟಿ. ಸದಾಶಿವ ಯೋಚಿಸಿದ : ಈ ವಕ್ರವಿನ್ಯಾಸಕ್ಕೆ ಮರುಳಾಗಿಯೆ ಕೇಶವ ಈ ಗತಿ ತಂದುಕೊಂಡ. ಇವಳಿಗೆ ಮಾತ್ರ ಏನೂ ಧಾಡಿಯಾಗಿಲ್ಲ. ಚೆನ್ನಾಗಿ ಮೈ ತುಂಬಿಕೊಂಡೇ ಇದಾಳೆ. ಹೆಣ್ಣು...ಗಂಡನ್ನು ಹಾಳುಮಾಡುವ ಹೆಣ್ಣು. ಧ್ಯೇಯವಾದಿಗಳ ಜೀವಂತ ಗೋರಿ ಸಂಸಾರ. ಅದರಲ್ಲಿ ಸಿಲುಕಿಕೊಳ್ಳದೆ ಉಳಿದ ತಾನೇ ಸುದೈವಿ.

"ಈಗ ಹ್ಯಾಗಿದೆ ಕೇಶವಾ ?"

"ಈಗ ಸ್ವಲ್ಪ ಆರಾಮು." ಕೇಶವ ಮುಗುಳ್ನಗಲು ಯತ್ನಿಸಿದ. ನಿಮ್ಮ ಬಿಡುಗಡೆಯಾದದ್ದು ಕೇಳಿ ಸಂತೋಷವಾಯಿತು. ಒಮ್ಮೆ ನೋಡೋಣವೆಂತ ಆಸೆಯಾಗಿ ಹೇಳಿ ಕಳಿಸಿದೆ. ನಿಮಗೆ ತೊಂದರೆಯಿಲ್ಲವಷ್ಟೆ ?"

ಸದಾಶಿವ ಆ ಮಾತನ್ನು ನಗೆಯಲ್ಲಿ ಮುಳುಗಿಸಿ, ಕೇಶವನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಮಾತನಾಡಿದ :

"ಎಷ್ಟು ಅಶಕ್ತರಾಗಿರುವಿರಲ್ಲ ಕೇಶವ್ !"

"ನಾಲ್ಕಾರು ತಿಂಗಳಿಂದ ಹಾಸಿಗೆ ಬಿಟ್ಟು ಅತ್ತಿತ್ತ ಸರಿದಿಲ್ಲ. ಅಶಕ್ತಿಯಾಗದಿರುವುದೇ ? ಇನ್ನೇನು ತಿಂಗಳೊಪ್ಪತ್ತಿನಲ್ಲಿ ಎದ್ದು ತಿರುಗಾಡಬಹುದೆಂತ ಡಾಕ್ಟರು ಹೇಳಿದ್ದಾರೆ. ಅದಿರಲಿ. ನೀವು ನೆಟ್ಟಗಿದ್ದೀರಾ ?"

"ನೋಡಿದರೆ ಗೊತ್ತಾಗುವುದಿಲ್ಲವೆ ? ಕಡಿದರೆ ನಾಲ್ಕು ಜನರಿಗೆ ಸಾಲುವಷ್ಟು ಇದ್ದೇನೆ," ಎಂದ ಸದಾಶಿವ.

"ಏನು ಈಶ್ವರ್, ನೀವು ಯಾವಾಗ ಬಂದಿದ್ದಿರಿ ?"

"ನಿನ್ನೆ. ನೀವು ಜಡ್ಡಾಗಿ ಮಲಗಿದ್ದು ನನಗೂ ಗೊತ್ತಿರಲಿಲ್ಲ ಬಿಡಿರಿ. ಗೊತ್ತಾಗಿದ್ದರೆ ಆಗಲೆ ಬಂದು ನೋಡಬಹುದಾಗಿತ್ತು."

"ಇಲ್ಲಿಗೆ ಮೇಲಿಂದ ಮೇಲೆ ಬರುತ್ತಿರುತ್ತೀರೇನು ?" ಎಂದು ಕೇಳಿದಳು ವನಮಾಲಾ.

"ಹೌದು. ವಾರಕ್ಕೊಮ್ಮೆಯಾದರೂ ಬರುತ್ತೇನೆ. ನಮ್ಮೂರು ಇಲ್ಲಿಗೆ ಬಹಳ ಸಮೀಪ. ಮುಂಜಾನೆ ಬಂದರೆ ಸಂಜೆ ವಾಪಸಾಗಬಹುದು. ಬೇಕಾದಷ್ಟು ಗಾಡಿಗಳಿವೆ."

"ಓರೆಕೋರೆ ನಗರವನ್ನು ಬಿಟ್ಟ ಹಾಗೇ ಆಯಿತೇ ?"

"ಅದನ್ನು ಬಿಟ್ಟು ವರ್ಷವಾಗುತ್ತ ಬಂತು."

"ಪತ್ರಿಕೆ ಏನಾಯಿತು ?"

"ಬಹಳ ಹಾನಿಯಾಗಿ ಅದೂ ನಿಂತು ಹೋಯ್ತು."

"ಈಗ ಫ್ರೀಲಾನ್ಸ್ ಆಗಿದ್ದೀರೋ ಏನು ?"

"ಹೌದು. ನಿಮ್ಮ ಹಾಗೇ. ಆದರೆ ನನ್ನ ಲೇಖನಗಳನ್ನು ಪ್ರಕಟಿಸಲು ಯಾವ ಪತ್ರಿಕೆಯವರೂ ತಯಾರಿಲ್ಲ."

ಹಾಗೆ ಆ ಮಾತು ಈ ಮಾತು ನಡೆದು ಕೊನೆಗೆ ರಾಜಕೀಯಕ್ಕೆ ಬಂದು ಮುಟ್ಟಿತು. ವಿರೋಧಿಪಕ್ಷ ಸಂಘಟಿಸುವ ತನ್ನ ವಿಚಾರವನ್ನು ಸದಾಶಿವ ತಿಳಿಸುತ್ತಲೂ ಕೇಶವನೆಂದ :

"ಸ್ವಾಮಿ ಇನ್ನೂ ಜೈಲಿನಲ್ಲೇ ಇದ್ದಾರಲ್ಲ ಸದಾಶಿವ ?"

"ಇದ್ದರೇನಾಯ್ತು ?"

"ಅವರನ್ನು ಬಿಟ್ಟೇ ಪಕ್ಷ ಕಟ್ಟುವಿರಾ ನೀವು ?"

"ಒಬ್ಬ ವ್ಯಕ್ತಿಗಾಗಿ ಒಂದು ಕೆಲಸ ತಡೆದು ನಿಲ್ಲುವುದೇ ಕೇಶವ? ಅಲ್ಲದೆ ನಾನೇನೂ ಸ್ವಾಮಿಗೆ ನನ್ನನ್ನು ಮಾರಿಕೊಂಡಿಲ್ಲವಲ್ಲ. ನನ್ನ ಮಟ್ಟಿಗೆ ನಾನು ಸ್ವತಂತ್ರನಿದ್ದೇನೆ. ಸ್ವಾಮಿ ಬಿಡುಗಡೆ ಹೊಂದಿ ಬಂದ ಬಳಿಕ ನಮ್ಮೊಡನೆ ಸೇರಿಕೊಂಡರೆ ಸರಿ. ಸೇರಿಕೊಳ್ಳದಿದ್ದರೂ ಚಿಂತೆಯಿಲ್ಲ."

ಕಾಫಿ ತೆಗೆದುಕೊಂಡು ಬರಲು ವನಮಾಲಾ ಎದ್ದು ಹೋದಳು. ಕೇಶವ ಅನುಮಾನಿಸುತ್ತ ಹೇಳಿದ :

"ನಿಮ್ಮ ಬಗ್ಗೆ ನಾನು ಏನೇನೋ ಭಯಂಕರ ಸುದ್ದಿ ಕೇಳಿದ್ದೆನಪ್ಪ. ಅವುಗಳಲ್ಲಿ ಎಷ್ಟು ನಿಜವೊ ಎಷ್ಟು ಸುಳ್ಳೋ ನೀವೇ ಹೇಳಬೇಕು.

"ಹೌದ್ರೀ. ನಾನೂ ಕೇಳಿದ್ದೇನೆ. ನಿಜವಾದ ಸಂಗತಿಯಾದರೂ ಏನು ?" ಎಂದ ಈಶ್ವರ.

"ನಮ್ಮ ಗುಂಪು ದರೋಡೆ ಮಾಡುತ್ತಿತ್ತು, ಕೊಲೆ ಮಾಡುತ್ತಿತ್ತು ಅಂತ ಸುದ್ದಿಯೆದ್ದಿತ್ತು. ನಾನೂ ಕೇಳಿದ್ದೇನೆ."

"ಸರಕಾರ ಹಾಗೆ ಪ್ರಸಿದ್ಧಿಸಿತ್ತು."

"ಕೋರ್ಟಿನಲ್ಲಿ ವಿಚಾರಣೆ ನಡೆದಾಗಲೇ ನಮ್ಮ ಮೇಲಿನ ಆರೋಪಗಳನ್ನೆಲ್ಲ ನಾವು ಅಲ್ಲಗಳೆದಿದ್ದೇವೆ. ಆದರೂ ಅನೇಕರ ಮನಸ್ಸಿನಲ್ಲಿ ನಮ್ಮ ಬಗ್ಗೆ ಇನ್ನೂ ಅನುಮಾನವಿರುವದು ನಿಜವಾಗಿಯೂ ಆಶ್ಚರ್ಯದ ಸಂಗತಿ."

"ನಡೆದದ್ದಾದರೂ ಏನು ಹೇಳಬಾರದೇ ಸದಾಶಿವ ?"

ಒಂದು ನಿಮಿಷ ಮೌನ.

ಅನಂತರ ಗಂಭೀರ ಸ್ವರದಲ್ಲಿ ಹೇಳತೊಡಗಿದ ಸದಾಶಿವ :

"ನಲವತ್ತೆರಡರ ಚಳುವಳಿಯಲ್ಲಿ ನೀವೂ ಬಂದೂಕು ಪಿಸ್ತೂಲು ಹಿಡಿದು ಕೆಲಸ ಮಾಡಿದಿರಿ ಕೇಶವ. ಕಡುಗಲಿಯ ಗುಂಪೂ ಶಸ್ತ್ರ ಹಿಡಿಯಿತು. ಇನ್ನೂ ಅನೇಕರು ಹಿಡಿದರು. ಸ್ವಾಮಿಯ ಗುಂಪಿನವರಾದ ನಾವೂ ಹಿಡಿದೆವು. ನಮಗೂ ಬೇರೆಯವರಿಗೂ ಇದ್ದ ವ್ಯತ್ಯಾಸವಿಷ್ಟೆ. ನಮ್ಮ ಗುಂಪಿನಲ್ಲಿ

ನೂರಾರು ಜನರಿದ್ದರು. ನೂರಾರು ಬಂದೂಕಗಳಿದ್ದುವು. ಬೇರೆ ಗುಂಪುಗಳಲ್ಲಿ ಶಿಸ್ತು ಇರಲಿಲ್ಲ. ನಮ್ಮಲ್ಲಿ ಇತ್ತು. ಬಂದೂಕು ಪಿಸ್ತೂಲು ಉಪಯೋಗಿಸುವ ಶಿಕ್ಷಣವನ್ನು ನಮಗೆ ಕೊಡಲಾಗುತ್ತಿತ್ತು. ಮಾಡುವುದನ್ನೆಲ್ಲಾ ನಾವು ಅಚ್ಚುಕಟ್ಟನಿಂದ ಮಾಡುತ್ತಿದ್ದೆವು. ನಮಗೂ ಬೇರೆಯವರಿಗೂ ಇದ್ದ ವ್ಯತ್ಯಾಸ ಇದೇ."

"ಸ್ವಾಮಿ ಮೊದಲಿನಿಂದಲೂ ಕಾಂಗ್ರೆಸ್ಸಿಗರೇನ್ರೀ ಸದಾಶಿವ?" ಈಶ್ವರ ಕೇಳಿದ.

"ಕಾಂಗ್ರೆಸ್ಸಿಗರಲ್ಲವಾದರೂ ರಾಷ್ಟ್ರೀಯ ಚಳುವಳಿ ಬಗ್ಗೆ ಅವರಿಗೂ ಅಭಿಮಾನವಿತ್ತು. ನಿಜವಾಗಿ ಒಂದು ಮಠದ ಸ್ವಾಮಿಗಳು ಅವರು. ಸಂನ್ಯಾಸಿ. ಅವರ ಸಂಗಡ ಇದ್ದುದು ಅವರ ಭಕ್ತವೃಂದ. ಆಗಸ್ಟ ಚಳುವಳಿಯ ಕಾಲಕ್ಕೆ ಕಾಂಗ್ರೆಸ್ ಮುಂದಾಳುಗಳೇ ಸ್ವಾಮಿಯನ್ನು ಪ್ರೋತ್ಸಾಹಿಸಿ ಕ್ರಾಂತಿಕಾರ್ಯಗಳಿಗೆ ತೊಡಗಿಸಿದರು. ಆಗಲೇ ನಾನೂ ಅವರೊಡನೆ ಸೇರಿಕೊಂಡದ್ದು. ದೇಶೀ ಸಂಸ್ಥಾನಗಳ ಗಡಿಯಲ್ಲಿ ನಾವು ಕೆಲಸಮಾಡುತ್ತಿದ್ದುದರಿಂದ ಬಂದೂಕು ಕಾಡತೂಸು ಪಿಸ್ತೂಲುಗಳನ್ನು ಸಂಗ್ರಹಿಸಲು ಬಹಳ ಅನುಕೂಲವಾಯಿತು. ಸಂಸ್ಥಾನದ ಪೋಲೀಸರೇ ನಮಗೆ ಗುಂಡುಗಳನ್ನೊದಗಿಸುತ್ತಿದ್ದರು. ಗೋವಾದಿಂದಲೂ ಗುಂಡು ಸಿಗುತ್ತಿದ್ದುವು. ಇಂದು ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧಿಕಾರ ಸ್ಥಾನದಲ್ಲಿರುವ ಜವಾಬ್ದಾರಿ ಕಾರ್ಯಕರ್ತರೇ ಆಗ ಸ್ವಾಮಿಗೆ ಪ್ರೋತ್ಸಾಹ ಕೊಡುತ್ತಿದ್ದರು."

"ಮನೆಗಳನ್ನು ಸುಲಿದದ್ದು ನಿಜವೇ ಸದಾಶಿವ?"

"ನಿಜ. ಅದರಲ್ಲೇನೂ ಸುಳ್ಳಿಲ್ಲ. ಬ್ರಿಟಿಷ್ ಸರಕಾರದ ಪಕ್ಷಪಾತಿಗಳಾಗಿದ್ದ ಶ್ರೀಮಂತರ ಮನೆಗಳನ್ನೊಡೆದು ಸುಲಿಯಬೇಕೆಂದು ಕಾಂಗ್ರೆಸ್ ಮುಖಂಡರೇ ಆಗ ಬೋಧಿಸುತ್ತಿದ್ದರು. ಲೂಟಿಯ ಹಣವೂ ಅವರ ಕೈಗೇ ಹೋಗುತ್ತಿತ್ತು. ಹಾಗೆ ಸ್ವಾಮಿಯಿಂದ ಹಣ ತೆಗೆದುಕೊಂಡವರು ಇಂದು ದೊಡ್ಡ ದೊಡ್ಡ ಮುಖಂಡರಾಗಿದ್ದಾರೆ. ಸ್ವಾಮಿ ಮಾತ್ರ ಕ್ರಿಮಿನಲ್ ಆಗಿ ಜೇಲು ಸೇರಬೇಕಾಯಿತು."

"ಕಾಂಗ್ರೆಸ್ಸಿಗರಿಗೂ ನಿಮಗೂ ಕೆಡಲು ಕಾರಣವೇನಾಯಿತು?".

" ಚಳುವಳಿಯನ್ನು ಒಮ್ಮಿಂದೊಮ್ಮೆ ನಿಲ್ಲಿಸಿದ್ದು ನಮಗೆ ಒಪ್ಪಿಗೆಯಾಗಲಿಲ್ಲ. ನಾವೆಲ್ಲಾ ನಮ್ಮ ಬಂದೂಕು ಗುಂಡುಗಳ ಸಂಗಡ ಸರೆಂಡರ್ ಆಗಬೇಕೆಂತ ಕಾಂಗ್ರೆಸ್ಸಿಗರು ಸೂಚನೆ ಕೊಟ್ಟಿದ್ದನ್ನು ನಾವು ಒಪ್ಪಲಿಲ್ಲ. ಅದಕ್ಕೆ ನಮ್ಮನ್ನೆಲ್ಲಾ ಕ್ರಿಮಿನಲ್ ಮಾಡಿ ಜೇಲಿಗೆ ಹಾಕಿಸಿದರು."

" ಮತ್ತೆ ಎರಡನೆಯ ಸಲ ನಿಮ್ಮನ್ನು ಹಿಡಿದದ್ದು ಯಾಕೆ ? "

" ನಾವು ಹೊರಗಡೆ ಇರುವುದರಿಂದ ಅವರಿಗೇನಾದರೂ ಹಾನಿಯಾದೀತು ಅಂತ ಹೆದರಿ ಕಾಂಗ್ರೆಸ್ಸಿಗರೇ ನಮ್ಮನ್ನು ಹಿಡಿಸಿದರು."

" ಕಮ್ಯುನಿಸ್ಟರಿಗೆ ನೀವು ಸಹಾಯ ಮಾಡುತ್ತಿದ್ದಿರಂತಲ್ಲ ? " ಎಂದ ಕೇಶವ.

" ಅದೊಂದು ನೆವ ಅನ್ನುವದೇನು ತಿಳಿಯುದಿಲ್ಲವೇ ನಿಮಗೆ ? ಕಮ್ಯುನಿಸ್ಟ್ ಅಂತ ಆರೋಪ ಹೊರಿಸಿ ಯಾರನ್ನೂ ಹಿಡಿಯಬಹುದಲ್ಲ ! ನಿಜ ಹೇಳಬೇಕಾದರೆ ಆಗ ಕಮ್ಯುನಿಸ್ಟರ ಪರಿಚಯವೇ ಇರಲಿಲ್ಲ ನನಗೆ. ಸ್ವಾಮಿಗೂ ಇರಲಿಲ್ಲ. ಕಮ್ಯುನಿಸ್ಟರನ್ನೂ ನಮ್ಮನ್ನೂ ಒಂದು ಕಡೆ ಕೂಡಿಸಿದ್ದು ಸರಕಾರವೇ. ಜೇಲಿನಲ್ಲೇ ಅವರ ಪರಿಚಯವಾದದ್ದು ನಮಗೆ."

" ಸರಿ. ಈಗಲಾದರೂ ನಿಮ್ಮ ಒಲವು ಎತ್ತ ಇದೆ ? ಕಮ್ಯುನಿಸ್ಟರೊಡನೆ ಕೂಡಬೇಕು ಅಂತೀರಾ ?" ಎಂದು ಕೇಳಿದ ಈಶ್ವರ.

" ರೈತ ಕೂಲಿಕಾರರ ರಾಜ್ಯ ಸ್ಥಾಪಿಸಬೇಕೆನ್ನುವವರೆಲ್ಲಾ ಈಗ ಒಂದಾಗಿ ಕೆಲಸ ಮಾಡುವ ವೇಳೆ ಬಂದಿದೆಯೆಂತ ನನಗನ್ನಿಸುತ್ತದೆ. ಪುರೋಗಾಮಿ ಪಕ್ಷ, ಕಮ್ಯುನಿಸ್ಟ್ ಪಕ್ಷ, ಸೋಶಲಿಸ್ಟ್ ಪಕ್ಷ ಎಲ್ಲಾ ಒಂದಾಗಬೇಕು."

ಆ ವೇಳೆಗೆ ಕಾಫಿಯೊಡನೆ ಬಂದ ವನಮಾಲ ಹೇಳಿದಳು :

" ಬರಾಬರಿ ಹೇಳಿದಿರಿ ಸದಾಶಿವ. ನಾನೂ ಎಷ್ಟೋ ದಿನದಿಂದ ಇವರಿಗೆ ಇದನ್ನೇ ಹೇಳುತಾ ಬಂದಿದೇನೆ."

" ಸಂಯುಕ್ತರಂಗದ ವಿಚಾರವೇ ಒಪ್ಪಿಗೆಯಿಲ್ಲ ನಮ್ಮ ಪಕ್ಷದ ಮುಖಂಡರಿಗೆ " ಎಂದ ಕೇಶವ.

" ಕಾಂಗ್ರೆಸ್ಸಿಗರೊಡನೆ ಕೂಡಿದರೂ ಕೂಡಬಹುದು ಸಮಾಜವಾದಿ ಪಕ್ಷ ಕಮ್ಯುನಿಸ್ಟರೊಡನೆ ಮಾತ್ರ ಕೂಡುವ ಮಾತೇ ಇಲ್ಲ. ಇತ್ತಿತ್ತಲಾಗಿ ಸಮಾಜ

ವಾದಿ ಪಕ್ಷದ ಮುಖಂಡತ್ವ ಪ್ರತಿಗಾಮಿಗಳ ಕೈಗೆ ಸಿಕ್ಕುಬಿಟ್ಟಿದೆ. ಮಾರ್ಕ್ಸ್ವಾದವನ್ನು ಬಿಟ್ಟುಕೊಟ್ಟು ಗಾಂಧೀವಾದ ಸರ್ವೋದಯಗಳ ಆಶ್ರಯ ಪಡೆಯುತ್ತಿದ್ದಾರೆ ಈ ಮುಖಂಡರು. ಅರುಣಾ ಅಸಫಾಲಿ ಪಕ್ಷವನ್ನು ಬಿಟ್ಟು ಹೋದದ್ದು ಇದಕ್ಕೇ" ಎಂದಳು ವನಮಾಲಾ.

"ಇವಳೂ ಅರುಣಳ ಶಿಷ್ಯೆಯಪ್ಪಾ, ಸದಾಶಿವ. ಅವಳಂತೆ ಇವಳೂ ನನ್ನ ಪಕ್ಷದಿಂದ ಒಡೆದು ಹೋದರೆ ದೇವರೇ ಗತಿ!" ಎಂದು ನಗುತ್ತ ನುಡಿದ ಕೇಶವ.

"ಸಮಾಜವಾದಿ ಪಕ್ಷದ ಬಗ್ಗೆ ನನಗೇನೂ ಆಶಾ ಉಳಿದಿಲ್ಲ. ಎಲ್ಲಾ ಬೂರ್ಜುವಾ ಜನ ತುಂಬಿಕೊಂಡು ಬಿಟ್ಟಿದ್ದಾರೆ ಇದರಲ್ಲಿ." ಎಂದಳು ವನಮಾಲ.

"ಎಲ್ಲಿಯ ಬೂರ್ಜುವಾ ಜನ ಬಿಡೇ, ನಮ್ಮ ವಿಚಾರವನ್ನೇ ತೆಗೆದುಕೊಳ್ಳೋಣ. ನಾನೆಂಥ ಬೂರ್ಜುವಾ? ನೀನೆಂಥ ಬೂರ್ಜುವಾ? ಕರ್ನಾಟಕದಲ್ಲಿರುವ ನಮ್ಮ ಕೆಲಸಗಾರರಲ್ಲಿ ಎಷ್ಟು ಜನ ಬೂರ್ಜುವಾಗಳಿದ್ದಾರೆ? ಪಕ್ಷದ ಪ್ರಚಾರಕ್ಕೊಂದು ಪತ್ರಿಕೆ ಬೇಕೆಂದರೆ ಅದಕ್ಕಾಗಿ ಹಣವಿಲ್ಲ. ಚುನಾವಣೆ ಹತ್ತಿರ ಬಂತು. ಪಕ್ಷದ ಸಂಘಟನೆ ಬಲಪಡಿಸಬೇಕೆಂದು ಕೇಂದ್ರ ಸಮಿತಿಯವರು ಪತ್ರದ ಹಿಂದೆ ಪತ್ರ ಹಾಕುತ್ತಿದಾರೆ. ಏನು ಸಂಘಟನೆ ಮಾಡುವರು, ಹೇಗೆ ಮಾಡುವರು? ಕಾರ್ಯಕರ್ತರೆಲ್ಲಾ ಬಡವರು. ಪ್ರವಾಸಕ್ಕೆ ಕೂಡಾ ಕಾಸಿರುವುದಿಲ್ಲ ಕೈಯಲ್ಲಿ. ನಾನ್ನೋ ಹೀಗೆ ಹಾಸಿಗೆ ಹಿಡಿದು ಮಲಗಿದೆ......"

"ಈ ವಯಸ್ಸಿನಲ್ಲಿ ಇದೇನು ಗಂಟುಬಿತ್ತು ನಿಮಗೆ ಕೇಶವ?" ಎಂದ ಈಶ್ವರ.

"ಆಗಸ್ಟ್ ಚಳುವಳಿಯ ಕಾಲಕ್ಕೆ ಪರಾರಿಯಾಗಿದ್ದಾಗ ಒಮ್ಮೆ ಒಂದು ರಾತ್ರಿಯೆಲ್ಲಾ ಮಳೆಯಲ್ಲಿ ನೆನೆದು ಪೂರಾ ಶೀತವಾಗಿತ್ತು. ಅದರಿಂದೇನಾದೀತು ಅಂತ ಆಗ ನಿರ್ಲಕ್ಷ್ಯ ಮಾಡಿದೆ. ಅಂದಿನಿಂದ ಪುಪ್ಪುಸ ದುರ್ಬಲವಾಗುತ್ತಾ ಬಂತು. ಅದರ ಕಡೆಗೆ ಗಮನ ಕೊಡದೆ ಪಕ್ಷದ ಸಂಘಟನೆಗಾಗಿ ಊರೂರು ತಿರುಗಿದ್ದಾಯ್ತು. ಕಿಸೆಯಿಂದ ರೊಕ್ಕ ಹೋಯಿತಷ್ಟೆ. ಉಪಯೋಗವೇನೂ

ಆಗಲಿಲ್ಲ. ಕರ್ನಾಟಕದ ಮಂದಿ ಅಲ್ಪತೃಪ್ತರೆಂದೇ ತೋರುತ್ತದೆ. ಆಲಸಿಗಳು ; ಸ್ವಾರ್ಥಿಗಳು. ಪ್ರತಿಯೊಬ್ಬನೂ ತನ್ನ ಸ್ವಾರ್ಥ ಹೇಗೆ ಸಾಧಿಸೀತೆಂಬುದನ್ನಷ್ಟೆ ನೋಡಿಕೊಳ್ಳುತ್ತಿದ್ದಾನೆ. ರೊಕ್ಕ ಬೇಕಾಗಿದೆ ಎಲ್ಲರಿಗೂ. ರೊಕ್ಕ ರೊಕ್ಕ ರೊಕ್ಕ. ಬೇರೆ ಯಾವುದರ ವಿಚಾರವೂ ಇಲ್ಲ. ದೇಶ, ಬಡ ಜನತೆ, ಅವರ ಕಲ್ಯಾಣ, ಸಮಾಜವಾದ ಯಾರಿಗೂ ಬೇಕಾಗಿಲ್ಲ. ಸ್ವಾತಂತ್ರ್ಯ ಬಂದಿತಲ್ಲಾ ! ಇದು ಎಂಥ ಸ್ವಾತಂತ್ರ್ಯ ಎಂಬುದರ ಅರಿವು ಯಾರಿಗೂ ಇಲ್ಲ. ನಮ್ಮದೆಲ್ಲಾ ಅರಣ್ಯರೋದನ."

"ಕೆಲವು ಕಡೆಗಾದರೂ ಸಮಾಜವಾದಿ ಪಕ್ಷ ಲೋಕಪ್ರಿಯವಾಗಿರುವದು ನಿಜ. ಮೇಲಿಂದ ಮೇಲೆ ಸಭೆಗಳೂ ಆಗುತ್ತಿರುತ್ತವಲ್ಲ..." ಎಂದ ಈಶ್ವರ.

"ಸಭೆಗಳು. ಹೌದು. ಸಭೆಗಳೇನೋ ಆಗುತ್ತಿರುತ್ತವೆ. ಐದಾರು ಊರುಗಳಲ್ಲಿ ಪಕ್ಷದ ಬಗ್ಗೆ ಅಭಿಮಾನವಿರುವ ಧ್ಯೇಯವಾದಿ ತರುಣರು ಕೆಲವರಿದ್ದಾರೆ. ಎಲ್ಲಾ ಕೆಲಸಗಳನ್ನೂ ಅವರೇ ಮಾಡಬೇಕು. ಹಣದ ಕೊರತೆಯಂತೂ ವಿಪರೀತ. ನಮ್ಮ ಪಕ್ಷದ ಸದಸ್ಯರೆಲ್ಲಾ ದಟ್ಟದರಿದ್ರರೇ. ಇನ್ನು ಹಣ ಎಲ್ಲಿಂದ ಬರಬೇಕು. ಕಾಂಗ್ರೆಸ್ಸಿನಲ್ಲಿ ದೊಡ್ಡ ದೊಡ್ಡ ಶ್ರೀಮಂತ ಜಮೀನ್ದಾರರಿದ್ದಾರೆ, ಬಂಡವಾಳಗಾರರಿದ್ದಾರೆ, ಕಳ್ಳಸಂತೆಯವರಿದ್ದಾರೆ. ಅವರೆಲ್ಲಾ ಹಣ ಕೊಡುತ್ತಾರೆ. ಕಾಂಗ್ರೆಸ್ಸಿಗೆ ಹಣದ ತೊಂದರೆಯಿಲ್ಲ, ಪತ್ರಿಕೆಗಳೆಲ್ಲಾ ಅವರ ಕೈಯಲ್ಲೇ. ನಮ್ಮ ಪಕ್ಷದ ಸುದ್ದಿಗಳನ್ನೂ ಕೂಡ ಪ್ರಕಟಿಸುವುದಿಲ್ಲ ಅವರು. ಈಗ ಜರೂರಾಗಿ ಒಂದು ಪತ್ರಿಕೆ ಬೇಕು ನಮಗೆ. ನೀವಾದರೂ ಒಂದು ಪತ್ರಿಕೆ ಯಾಕೆ ಮಾಡಬಾರದು ಈಶ್ವರ ? "

"ಮಾಡಬಹುದು. ಅದಕ್ಕೆ ಹಣ ಕೊಡುವವರು ಯಾರು ? "

"ಅದೇ ಮುಖ್ಯ ಸಮಸ್ಯೆಯಾಗಿದೆ ನಮಗೂ. ಸ್ವಾಮಿಯಂಥವರು ನಮ್ಮೊಡನೆ ಸೇರಿದರೆ ಏನಾದರೂ ಅನುಕೂಲವಾದೀತೊ ಏನೊ."

"ಸ್ವಾಮಿಯ ಹತ್ತಿರ ಹಣವಿದೆಯೆಂದು ತಿಳಿದಿದ್ದೀರಾ ಕೇಶವ ? "

"ಮತ್ತೆ? ಇಲ್ಲವೆ ? "

"ಇದ್ದು ಬಿದ್ದ ಹಣವನ್ನೆಲ್ಲಾ ಗೊಬ್ಬೂರಿನ ದಿನಪತ್ರಿಕೆಯವರು ಕಿತ್ತುಕೊಂಡು ಹೋದರಲ್ಲ ! ನಿಮಗೆ ಗೊತ್ತಿಲ್ಲವೆ ? "

" ಯಾರೋ ಹೇಳುತ್ತಿದ್ದರಪ್ಪ. ನನಗೇನು ನಂಬಿಕೆಯಾಗಿರಲಿಲ್ಲ."

" ನಿಜವಾಗಿಯೂ ಸ್ವಾಮಿಯ ಹಣವನ್ನೆಲ್ಲ ಆ ದಿನಪತ್ರಿಕೆಯವರೇ ಎತ್ತಿಕೊಂಡು ಹೋದರು ಕೇಶವ. ಸ್ವಾಮಿಯ ರೊಕ್ಕ ನುಂಗಿ ನೀರು ಕುಡಿದ ಅದೇ ಕಾಂಗ್ರೆಸ್ಸಿಗರೇ ಇಂದು ಅವರನ್ನು ಸೆರೆಮನೆಯಲ್ಲಿಟ್ಟದ್ದಾರೆ."

" ಅವರಿಗೇನು ನಾಚಿಕೆಯೇ, ಮರ್ಯಾದೆಯೇ ? ಹೋಗಲಿ ಬಿಡಿರಿ. ನೀವ್ಯಾಕೆ ನಮ್ಮ ಪಾರ್ಟಿಗೆ ಸೇರಬಾರದು ? "

" ಸರ್ವೋದಯ ಗಾಂಧಿವಾದಗಳನ್ನು ನಾನು ಒಪ್ಪುವುದಿಲ್ಲ " ಎಂದ ಸದಾಶಿವ.

" ನಾನೂ ಒಪ್ಪುವುದಿಲ್ಲ " ಎಂದಳು ವನಮಾಲಾ. " ಸಮಾಜವಾದಿ ಪಕ್ಷ ಯಶಸ್ವಿಯಾದೀತು ಅಂತಲೂ ನನಗನ್ನಿಸುವುದಿಲ್ಲ ಈಗ ಬೇಕಾದ್ದು ಎಲ್ಲಾ ಎಡಪಕ್ಷಗಳ ಸಂಯುಕ್ತರಂಗ."

" ಮತ್ತೆ ತೆಗೆದೆಯಲ್ಲಾ ನಿನ್ನ ಆ ಸಂಯುಕ್ತರಂಗದ ರಾಗವನ್ನ ! ಕಮ್ಯುನಿಸ್ಟರ ಮೋಸದ ಘೋಷಣೆ ಇದೆಲ್ಲಾ. ಅವರ ಸಹವಾಸದಲ್ಲಿ ನಿನ್ನ ಗುರು ಅರುಣಳ ಮೆದುಳು ಕೆಟ್ಟು ಹೋಗಿದೆ. ಅವರು ಸಾಕಿದ ಗಿಳಿಯಂತೆ ಹಾಡುತ್ತಿದಾಳೆ ಆಕೆ. ನಮ್ಮ ಬೇಳೆ ಬೇಯುವದಿಲ್ಲವೆಂತ ಅನ್ನಿಸಿದಾಗಲೆಲ್ಲಾ ಆ ಕಿಡಿಗೇಡಿ ಕಮ್ಯುನಿಸ್ಟರು ಸಂಯುಕ್ತರಂಗದ ಹೂಲಿಯೆಬ್ಬಿಸುತ್ತಾರೆ. ಅವರ ಸವಿಮಾತಿಗೆ ಬಲಿಬಿದ್ದು ನಾವು ಸಂಯುಕ್ತರಂಗಕ್ಕೆ ಸೇರಿದೆವೋ, ಮುಗಿಯಿತು, ನಮ್ಮ ನಮ್ಮಲ್ಲೇ ಒಡಕು ಹುಟ್ಟಿಸಿ ನಮ್ಮ ಕಾರ್ಯಕರ್ತರ ತಲೆ ಕೆಡಿಸಿ ನಮ್ಮ ಶಕ್ತಿಯನ್ನೆಲ್ಲಾ ಮುರಿದು ತಮ್ಮ ಬೇಳೆ ಬೇಯಿಸಿಕೊಳ್ಳುತ್ತಾರೆ. ಹಿಂದೊಮ್ಮೆ ಇವರೊಡನೆ ಸೇರಿ ಒಳ್ಳೆಯ ಬುದ್ಧಿ ಕಲಿತಿದ್ದಾಗಿದೆ. ಇನ್ನು ಮುಂದೆ ಮಾತ್ರ ಕಮ್ಯುನಿಸ್ಟರೊಡನೆ ಕೂಡುವ ಮಾತೇ ಇಲ್ಲ. ಅವರು ಹಿಂಸಾವಾದಿಗಳು, ದೇಶದ್ರೋಹಿಗಳು " ಎಂದು ಆವೇಶದ ಧ್ವನಿಯಲ್ಲಿ ನುಡಿದ ಕೇಶವ ಆಯಾಸ ದಿಂದ ಕೆಮ್ಮಲಾರಂಭಿಸಿದ.

" ಕಮ್ಯುನಿಸ್ಟರ ವಿಚಾರವಿರಲಿ. ಮೊದಲು ನಿಮ್ಮ ಕೆಮ್ಮು ನೋಡಿಕೊ ಳ್ಳಿರಿ. ಬಹಳ ಮಾತಾಡ ಬ್ಯಾಡ್ರಿ," ಎಂದು ಹೇಳುತ್ತಾ ವನಮಾಲಾ ಗಂಡನ ಎದೆಯ ಮೇಲೆ ರಗ್ಗನ್ನು ಸರಿಯಾಗಿ ಹೊದ್ದಿಸಿದಳು.

ಎರಡು ಮೂರು ನಿಮಿಷ ಯಾರೂ ಮಾತನಾಡಲಿಲ್ಲ ಮತ್ತೆ ಕೇಶವನೇ ಧ್ವನಿಯೆತ್ತಿ ಕೇಳಿದ.

" ಹಾಗಾದರೆ ನೀವು ನಮ್ಮ ಪಕ್ಷಕ್ಕೆ ಸೇರುವಂತಿಲ್ಲ, ಅನ್ನಿರಿ."

" ಸದಸ್ಯನಾಗಲಾರೆ. ಸಂಯುಕ್ತರಂಗದ ವಿಚಾರ ಯಶಸ್ವಿಯಾದರೆ ಮಾತ್ರ ಎಲ್ಲರೂ ಕೂಡಿಯೆ ಕೂಡುತ್ತೇವಲ್ಲ ! "

೭

ಶಾಲೆ ಬಿಡುವ ಗಂಟೆ ಬಾರಿಸುವುದನ್ನೆ ಕಾಯುತ್ತ ಕುರ್ಚಿಯಲ್ಲಿ ಕುಳಿತಿದ್ದಳು ಸಾವಿತ್ರಿ. ವರ್ಗದಲ್ಲಿ ಮಕ್ಕಳು ಗಟ್ಟಿಯಾಗಿ ಧ್ವನಿ ತೆಗೆದು ಓದಿಕೊಳ್ಳುತ್ತಿದ್ದರು: "ಮೂರು ಮೂರಲೆ ಒಂಭತ್ತು, ಮೂರು ನಾಲ್ಕಲೆ ಹನ್ನೆರಡು."

ಚಿಕ್ಕ ಹುಡುಗಿಯೊಬ್ಬಳು ಎದ್ದು, ಸಾವಿತ್ರಿಯ ಬಳಿ ಬಂದು ಕೇಳಿದಳು:

"ಮೂರು ಎಂಟಲೆ ಇಪ್ಪತ್ನಾಲ್ಕು ಅಲ್ಲೇನ್ರೀ ಅಕ್ಕಾವರೆ?"

ಅವಳ ಪ್ರಶ್ನೆ ಸರಿಯಾಗಿ ಅರ್ಥವಾಗಲೆ ಇಲ್ಲ ಸಾವಿತ್ರಿಗೆ. ಅವಳ ಮನಸ್ಸು ಬೇರೊಂದು ಲೆಕ್ಕದಲ್ಲಿ ತೊಡಗಿಕೊಂಡಿದ್ದಿತು. ಹನ್ನೆರಡು ಗಂಟೆಗೆಲ್ಲ ಸ್ಟೇಷನ್ನಿಗೆ ರೈಲು ಬರುತ್ತದೆ. ಅಲ್ಲಿಂದ ಇಲ್ಲಿಗೆ ಬರಲು ಹದಿನೈದು ನಿಮಿಷ. ಅಂತೂ ಹನ್ನೆರಡೂವರೆಗೆಲ್ಲ ಸದಾಶಿವ ಮನೆಗೆ ಬರಬಹುದು. ಇಂದು ಶಾಲೆಗೆ ರಜವಿದ್ದಿದ್ದರೆಷ್ಟು ಚೆನ್ನಾಗುತಿತ್ತು. ತಾನೇ ಕುಳಿತು ಸದಾಶಿವನಿಗಾಗಿ ಸಿಹಿಯಡುಗೆ ಮಾಡಿ ಸಿದ್ಧಗೊಳಿಸಲು ಸಾಧ್ಯವಾಗುತಿತ್ತು. ಸೆರೆಮನೆಯಲ್ಲಿ ಸಿಹಿಯೂಟ ಎಲ್ಲಿಂದ ಬರಬೇಕು?

"ಯಾಕ್ರೀ, ಹೀಗೆ ಕೂತಿದ್ದೀರಿ?"

ಸಾವಿತ್ರಿ ಬೆಚ್ಚಿ ತಲೆಯೆತ್ತಿದಳು. ಮಾತನಾಡಿದವಳು, ಮುಖ್ಯೋಪಾಧ್ಯಾಯಿನಿ ಸುಂದರಾಬಾಯಿ. ಸಾವಿತ್ರಿಯ ಬುದ್ಧಿಶಕ್ತಿ, ಸರಳ ಸ್ವಭಾವಗಳನ್ನು ಕಂಡು ಮೆಚ್ಚಿ ಅವಳನ್ನು ಸ್ವಂತ ಮಗಳಂತೆ ಪ್ರೀತಿಸುತ್ತಿದ್ದವಳು ಸುಂದರಾಬಾಯಿ. ತಾನು ಮುಖ್ಯೋಪಾಧ್ಯಾಯಿನಿಯೆಂದು ಅವಳಿಗೆ ಕೊಂಚವೂ ಜಂಬವಿರಲಿಲ್ಲ. ಕೈಕೆಳಗಿನ ಶಿಕ್ಷಿತೆಯರನ್ನೆಲ್ಲ ಸೋದರಿಯರಂತೆ ಭಾವಿಸಿ ಎಲ್ಲರೊಡ

ನೆಯೂ ಮರ್ಯಾದೆಯಿಂದ ವರ್ತಿಸುತ್ತ ಬಂದಿದ್ದವಳು ಸುಂದರಾಬಾಯಿ. ಶಿಕ್ಷಿತೆಯರಲ್ಲೆಲ್ಲ ಚಿಕ್ಕವಳಾಗಿದ್ದ ಸಾವಿತ್ರಿಯ ಬಗೆಗಂತೂ ಅವಳಿಗೆ ವಿಶೇಷವಾದ ಮಮತೆ.

" ಏನಾಯ್ತು ಇವೊತ್ತು ? ತಲೆನೋವೋ ಏನು ? "

—ಏನಾಗಿದೆ ತನಗೆ ಇಂದು ?

ಸಾವಿತ್ರಿ ತನ್ನನ್ನು ತಾನೆ ಕೇಳಿಕೊಂಡಳು.

ಸದಾಶಿವನ ಆಗಮನವನ್ನೆ ಎದುರು ನೋಡುತ್ತಾ ತಾನು ಮೈಮರೆತುದರ ಜ್ಞಾಪಕ ಬರುತ್ತಲೂ ಸಾವಿತ್ರಿಯ ಮುಖಕ್ಕೆ ರಕ್ತವೇರಿತು. ತನ್ನ ರಹಸ್ಯವನ್ನು ಸುಂದರಾಬಾಯಿ ಕಂಡುಹಿಡಿದಿರಲಿಕ್ಕಿಲ್ಲವಷ್ಟೆ ? ಇಂಥ ವಿಷಯಗಳಲ್ಲಿ ಬಹಳ ಪಳಗಿದವಳು ಈಕೆ.

" ಇವತ್ತು ಸದಾಶಿವ ಬರ್‍ತಾರೆ. ಅದಕ್ಕೇ ಇಲ್ಲಿ ನಮ್ಮ ಸಾವಿತ್ರಿಗೆ ಅದೇ ಧ್ಯಾನ ನಡೆದಿರಬೇಕು ! " ತುಟಿಗಳ ಮೇಲೆ ತುಂಟುತನದ ನಗು ತುಳುಕಿಸುತ್ತಾ ಹೇಳಿದಳು ಸುಂದರಾಬಾಯಿ.

" ಚ್ ! ಚ್ ! ಹುಡುಗರ ಮುಂದೆ ಅಕ್ಕಾವರೆ ! "

" ನಿನ್ನೆಯೆ ನನಗೆ ಗೊತ್ತಾಯ್ತು ಸದಾಶಿವರ ಬಿಡುಗಡೆಯಾದದ್ದು. ಕಳ್ಳೇಕಾಯಿಯಲ್ಲಿ ' ಅವರು ' ನೋಡಿದರಂತೆ. ಕ್ಲಾಸಿನಲ್ಲಿ ಲಕ್ಷ್ಯವಾದರೂ ಹ್ಯಾಗೆ ಉಳಿದೀತು ನಿಮಗೆ ಪಾಪ ! ಬೇಕಾದರೆ ಈಗಲೇ ಮನೆಗೆ ಹೋಗಿ ಬಿಡಿರಿ. "

" ಏನೂ ಬೇಡ ಅಕ್ಕಾವರೆ. "

ಒಯ್ಯಾರದಿಂದ ನಗುತ್ತಾ ಸುಂದರಾಬಾಯಿ ತನ್ನ ವರ್ಗಕ್ಕೆ ಹೊರಟು ನಡೆದಳು. ಸಾವಿತ್ರಿ ಸದಾಶಿವನನ್ನು ಗುಪ್ತವಾಗಿ ಪ್ರೀತಿಸುವುದನ್ನು ಎರಡು ವರ್ಷಗಳ ಹಿಂದೆಯೆ ಕಂಡುಹಿಡಿದಿದ್ದಳು ಸುಂದರಾಬಾಯಿ. ಅವರಿಬ್ಬರ ಮದುವೆಯಾಗಬೇಕೆಂದು ಅವಳೂ ಮನಃಪೂರ್ವಕವಾಗಿ ಬಯಸುತ್ತಿದ್ದವಳು ಸಾವಿತ್ರಿಯ ತಂದೆ ಮಲ್ಲಪ್ಪನಿಗೆ ಮಾತ್ರ ಸದಾಶಿವನನ್ನು ಕಂಡರಾಗುತ್ತಿರಲಿಲ್ಲ. ಒಬ್ಬ ಸದಾಶಿವನನ್ನಷ್ಟೆ ಅಲ್ಲ, ಒಟ್ಟಾರೆ ಬಡವರನ್ನು ಕಂಡರೇನೆ ಮೂಗು ಮುರಿಯುತ್ತಿದ್ದವನು ಮಲ್ಲಪ್ಪ. ಸ್ವತಃ ಅವನು ಶ್ರೀಮಂತನೇನೂ ಆಗಿರಲಿಲ್ಲ.

ಸ್ವಂತದ ಭೂಮಿಯೂ ಅವನಿಗಿರಲಿಲ್ಲ. ಇನಾಂದಾರ್ ನರಹರಿರಾಯರ ಎಂಟು ಎಕರೆ ಭೂಮಿಯನ್ನು ಪಾಲಿಗೆ ಹಿಡಿದು ಅದರಿಂದ ಬಂದುದರಿಂದಲೇ ಸಂಸಾರ ಸಾಗಿಸುತ್ತಿದ್ದವನು ಮಲ್ಲಪ್ಪ. ಈಚೆಗೆ, ಮನೆಯಲ್ಲಿ ಮಕ್ಕಳ ಸಂಖ್ಯೆ ಹೆಚ್ಚುತ್ತ ಬಂದ ಹಾಗೆ ಮಲ್ಲಪ್ಪನ ತೊಂದರೆಗಳೂ ಹೆಚ್ಚುತ್ತ ಬಂದಿದ್ದುವು. ಸಾವಿತ್ರಿ ಯನ್ನು ಹೊರತುಪಡಿಸಿ ಮತ್ತೆ ಹತ್ತು ಮಕ್ಕಳು. ಸಾವಿತ್ರಿಗಿಂತ ಹಿರಿಯರಾದ ಇಬ್ಬರು ಹೆಣ್ಣು ಮಕ್ಕಳ ಮದುವೆಯಾಗಿತ್ತು. ಸಾವಿತ್ರಿಗೆ ಮಾತ್ರ ಇಪ್ಪ ತ್ತೊಂದು ಮುಗಿಯುತ್ತ ಬಂದಿದ್ದರೂ ಮದುವೆಯಾಗಿರಲಿಲ್ಲ. ಅವಳು ಮುಲ್ಕೀ ಪರೀಕ್ಷೆ ಪಾಸಾಗುತ್ತಲೂ ಸ್ಕೂಲ್‌ಬೋರ್ಡ್ ಅಧ್ಯಕ್ಷರಿಗೆ ದಮ್ಮಯ್ಯಗುಡ್ಡೆ ಹಾಕಿ ಮಗಳಿಗೆ ಉಪಾಧ್ಯಾಯಿನಿಯ ಕೆಲಸ ಕೊಡಿಸಿ ತಮ್ಮೂರಿನ ಶಾಲೆಯ ಲ್ಲಿಯೆ ಅವಳನ್ನಿರಿಸುವಂತೆ ಯತ್ನಿಸಿ ಯಶಸ್ವಿಯಾಗಿದ್ದ ಮಲ್ಲಪ್ಪ. ಅವಳ ಸಂಬಳ ಬರತೊಡಗಿದಂದಿನಿಂದ ಅವನ ತೊಂದರೆ ಸ್ವಲ್ಪ ಕಡಿಮೆಯಾಗಿತ್ತು. ತಿಂಗಳಿಗೆ ಎಪ್ಪತ್ತೈದು ರೂಪಾಯಿ ಗಳಿಸುವ ಆ ಮಗಳನ್ನು ಕಳೆದುಕೊಳ್ಳಲು ಅವನಿಗೆ ಕೊಂಚವೂ ಇಷ್ಟವಿರಲಿಲ್ಲ. ಅಂತೆಯೆ, ಅನೇಕರು ಅವಳನ್ನು ಮದುವೆ ಮಾಡಿಕೊಡಲು ಕೇಳಿದ್ದರೂ ಮಲ್ಲಪ್ಪ ಯಾವುದೊಂದು ನೆಪ ಮಾಡಿ ನಿರಾಕರಿ ಸುತ್ತಾ ಬಂದಿದ್ದ. ಅದೇ ಊರಿನಲ್ಲಿ ನೂರಾರು ಎಕರೆ ಭೂಮಿಯನ್ನುಳ್ಳ ಶ್ರೀಮಂತರ ಮನೆಗೆ, ಆಸ್ತಿಗೆಲ್ಲ ಏಕಮಾತ್ರ ಅಧಿಕಾರಿಯಾಗಿರುವಂಥ ವರನಿಗೆ ಅವಳನ್ನು ಕೊಡುವುದೆಂದು ಅವನ ಸಂಕಲ್ಪ. ಆ ವರನಿಗೆ ವಯಸ್ಸು ಬಹಳ ವಾಗಿದ್ದರಂತೂ ಬಹಳ ಒಳ್ಳೆಯದೇ. ಮಗಳ ಆಸ್ತಿಯನ್ನೆಲ್ಲ ತಾನೇ ವಶಪಡಿಸಿ ಕೊಂಡು ವೃದ್ಧಾಪ್ಯದಲ್ಲಿ ನೆಮ್ಮದಿಯ ಜೀವನ ಸಾಗಿಸುವ ಯೋಚನೆ ಮಲ್ಲಪ್ಪ ನದು. ಆದರೆ ಅವನ ಎಣಿಕೆಗೆ ಸರಿಹೋಗುವಂಥ ಧನಿಕ ವರ ಅದುವರೆಗೆ ದೊರೆತಿರಲಿಲ್ಲ. ಅಂತೆಯೆ, ಇಪ್ಪತ್ತೊಂದರ ಪ್ರಾಯದ ಯುವತಿಯಾದರೂ ಅವಿವಾಹಿತೆಯಾಗಿ ಒಂಟಿ ಜೀವನ ಸಾಗಿಸುವ ಪ್ರಸಂಗ ಬಂದಿತ್ತು ಸಾವಿತ್ರಿಗೆ.

ಆ ಜೀವನ ಅವಳನ್ನು ಬೇಸರಗೊಳಿಸಿರಲಿಲ್ಲವೆಂದೇನೂ ಇಲ್ಲ. ತಾರುಣ್ಯ ಸಹಜವಾದ ಭಾವ ರಾಗ ವಿಕಾರಗಳಿಗೆ ಅವಳ ಮನಸ್ಸು ಸಿಲುಕಿಕೊಳ್ಳದಿರು ತ್ತಿರಲಿಲ್ಲ. ಆದರೂ ಆ ವಿಕಾರಗಳನ್ನು ಹತೋಟಿಯಲ್ಲಿಟ್ಟುಕೊಂಡು ಸಂಯಮದ ಜೀವನ ಸಾಗಿಸುವ ಭಾವಶುದ್ಧಿಯೂ ಅವಳಲ್ಲಿತ್ತು. ಮದುವೆಯಾಗಿ ಸಂಸಾರ

ಸುಖ ಸವಿಯಬೇಕೆಂಬ ಬಯಕೆಯೇನೊ ಆಗಾಗ ಅವಳೆದೆಯಲ್ಲಿ ತುಂಬಿ ಬರುತ್ತಿದ್ದಿತಾದರೂ ತನಗೆ ಅನುರೂಪನಲ್ಲದವರನ್ನು ಕೈಹಿಡಿವ ಇಚ್ಛೆಯೂ ಅವಳಿಗಿರಲಿಲ್ಲ. ಚಾತಕಪಕ್ಷಿ ಮಳೆ ನೀರಿಗಾಗಿ ಕಾದುಕೊಂಡಿರುವ ಹಾಗೆ ಅವಳು ತಾನು ಮೆಚ್ಚಿ ಮನಸ್ಸಿನಲ್ಲಿಯೆ ಆರಾಧಿಸುತ್ತಿದ್ದ ಸದಾಶಿವನಿಗಾಗಿ ಕಾದು ಕುಳಿತಿದ್ದಳು. ಇಂದಿಲ್ಲ ನಾಳೆಯಾದರೂ ಅವನಿಗೆ ಮದುವೆಯಾಗುವ ಮನಸ್ಸು ಬಂದೀತು, ಅಲ್ಲಿಯ ವರೆಗೂ ತಾಳ್ಮೆಯಿಂದ ಕಾಯಬೇಕು.

ಹಾಗೆ, ಆರೇಳು ವರ್ಷಗಳಿಂದ ಕಾದು ಕುಳಿತಿದ್ದವಳು ಸಾವಿತ್ರಿ. ತನ್ನದೊಂದು ಮಾತನ್ನೇ ಎದುರು ನೋಡುತ್ತ ಅವಳು ಹಾಗೆ ಕಾಯುತ್ತಿರಬಹುದೆಂಬ ಕಲ್ಪನೆಯೂ ಸದಾಶಿವನಿಗಿರಲಿಲ್ಲ. ಅವನ ಬಗೆಗೆ ಅವಳಲ್ಲಿದ್ದಂಥ ಭಾವನೆ ಅವಳ ಬಗೆಗೆ ಅವನಲ್ಲಿದ್ದಿತೆಂದೂ ಹೇಳಲಾಗುವುದಿಲ್ಲ. ಅವನ ದೃಷ್ಟಿಯಲ್ಲಿ ಸಾವಿತ್ರಿಯೆಂದರೆ ಒಬ್ಬಳು ಹುಡುಗಿ, ಜಗತ್ತಿನಲ್ಲಿ ಲಕ್ಷಾಂತರ ಹುಡುಗಿಯರಂತೆ ಒಬ್ಬಳು ಸಾಧಾರಣ ಹುಡುಗಿ. ನೆರೆಮನೆಯವಳಾದುದರಿಂದ ಅವಳೊಡನೆ ವಿಶೇಷವಾದ ಸಲುಗೆ ಬೆಳೆದು ಬಂದಿದ್ದಿತಷ್ಟೆ. ಅವನು ಮಲ್ಲಾಪುರದಲ್ಲಿದ್ದಾಗಲೆಲ್ಲ ಅವಳು ಅವನ ಬಳಿಯಲ್ಲಿಯೆ ಹೆಚ್ಚು ಸಮಯ ಕಳೆಯುತ್ತಿದ್ದುದಿತ್ತು. ಅವನಿಂದ ಪುಸ್ತಕಗಳನ್ನು ಪತ್ರಿಕೆಗಳನ್ನು ಪಡೆದುಕೊಂಡು ಓದುತ್ತಿದ್ದುದಿತ್ತು. ತನಗೆ ಅರ್ಥವಾಗದ ವಿಚಾರಗಳನ್ನು ಅವನಿಂದ ಕೇಳಿ ತಿಳಿದುಕೊಳ್ಳುತ್ತಿದ್ದುದಿತ್ತು. ಅತಿಶಯವಾದ ಪರಿಚಯದಿಂದ ಉದ್ಭವಿಸುವ ಒಂದು ಬಗೆಯ ಅನಾಸ್ಥೆಯಿಂದಲೆ ಅವನು ಅವಳನ್ನು ನಡಸಿಕೊಳ್ಳುತ್ತಿದ್ದ. ಆ ಅನಾಸ್ಥೆಯನ್ನು ಗುರುತಿಸಿದಾಗಲೆಲ್ಲ ಅವಳು ನೊಂದುಕೊಳ್ಳದಿರುತ್ತಿರಲಿಲ್ಲ. ಅವನ ಸ್ವಭಾವದ ಒರಟುತನ ಬಿರುಸುತನಗಳನ್ನು ಕಂಡು ಅವಳಿಗೆ ಮುನಿಸೂ ಉಂಟಾಗದಿರುತ್ತಿರಲಿಲ್ಲ. ಅವಳು ಪ್ರಶ್ನೆ ಕೇಳಿದಾಗ ಅವನು ಉತ್ತರವೀಯದೆ ಪರಮನಿರ್ಲಕ್ಷ್ಯದಿಂದಿದ್ದ ಸನ್ನಿವೇಷಗಳಿಗೂ ಕೊರತೆಯಿರಲಿಲ್ಲ. ಅಂಥ ಸಮಯದಲ್ಲಿ ಅವಳಿಗೆ ಸಹಜವಾಗಿಯೆ ಕೋಪ ಬರುತ್ತಿತ್ತು. ಬಂದ ಕೋಪ ಹೆಚ್ಚು ಸಮಯ ಉಳಿಯದೆ ಐದಾರು ನಿಮಿಷಗಳಲ್ಲಿಯೆ ಮಾಯವಾಗುತ್ತಿತ್ತು. ಅವನ ಅಸಡ್ಡೆ, ವಿಮನಸ್ಕತೆ, ನಯವನ್ನರಿಯದ ಒರಟುತನಗಳೂ ಅವಳಿಗೆ ಮೋಜಿನ ಅಂಶಗಳಾಗಿ ಕಾಣುತ್ತಿದ್ದುವು. ಅವನು ಊರಲ್ಲಿಲ್ಲದಾಗ ಅವುಗಳನ್ನು ಜ್ಞಾಪಿಸಿ

ಕೊಂಡು ಅವಳು ನಗುತ್ತಿದ್ದುದೂ ಇತ್ತು. ಒಟ್ಟಾರೆ, ಅವನ ರೂಪು, ಅವನ ನಿಲುವು, ಅವನ ಹಾವಭಾವ, ಅವನ ನಗು, ಅವನ ಮಾತು, ಅವನ ಧ್ವನಿ, ಅವನ ನಡಗೆ, ಅವನ ಧ್ಯೇಯವಾದಿ ಜೀವನ ಎಲ್ಲವೂ ಅವಳಿಗೆ ಪ್ರಿಯವಾದ ಅಂಶಗಳಾಗಿದ್ದುವು ಅಂಥ ಧೀರೋದಾತ್ತ ವ್ಯಕ್ತಿಯನ್ನು ತನ್ನವನನ್ನಾಗಿ ಮಾಡಿಕೊಳ್ಳಬೇಕೆಂಬ ಸ್ತ್ರೀಸಹಜ ಹಂಬಲ ಅವಳೆದೆಯಲ್ಲಿ ಬೆಳೆದು, ದಿನಗಳೆದ ಹಾಗೆ ದೃಢತರವಾಗುತ್ತ ಬಂದಿತ್ತು. ತನ್ನ ಬಗೆಗೆ ಅವಳಲ್ಲಿದ್ದ ಆ ಪ್ರಚಂಡ ಪ್ರೇಮವನ್ನು ಸದಾಶಿವ ಒಂದು ಸಲವೂ ಕಂಡುಕೊಂಡವನಲ್ಲ. ಪ್ರಣಯ ಪ್ರೇಮಗಳ ಬಗ್ಗೆ ಯೋಚನೆ ಮಾಡುವುದಕ್ಕೂ ಕೂಡ ಅವನಿಗೆ ಬಿಡುವಿರಲಿಲ್ಲ. ಅವನು ಊರಿನಲ್ಲಿರುತ್ತಿದ್ದುದೂ ಬಹಳ ಅಪರೂಪವಾಗಿ. ನಲವತ್ತೆರಡರ ಚಳುವಳಿಯ ಕಾಲಕ್ಕಂತೂ ಎರಡು ವರ್ಷ ಅಲೆದಾಟದಲ್ಲಿಯೆ ಕಳೆದು ಹೋಗಿತ್ತು. ಅನಂತರ ಸೆರೆಮನೆ. ಮತ್ತೆ ಅಲೆದಾಟ–ಮತ್ತೆ ಸೆರೆಮನೆ.

"ಈ ಸಲವಾದರೂ ಅವರು ಸ್ವಲ್ಪ ವಿಶ್ರಾಂತಿ ಪಡೆಯಬಹುದೇ, ಇಲ್ಲೇ ಇದ್ದು ?" ಎಂದು ತನ್ನಷ್ಟಕ್ಕೆ ತಾನೆ ಹೇಳಿಕೊಂಡಳು ಸಾವಿತ್ರಿ.

"ಯಾರಿಗೆ ಗೊತ್ತು ! ಸುಮ್ಮನೆ ಕೂಡುವದು ಅವರ ಸ್ವಭಾವದಲ್ಲೇ ಬಂದ ಹಾಗಿಲ್ಲ. ಏನಾದರೂ ಮಾಡುತ್ತಿದ್ದರೇನೆ ಸಮಾಧಾನವಿರುತ್ತದೆ ಅವರಿಗೆ. ಈ ಸಲ ಊರಿಗೆ ಬಂದ ಬಳಿಕ ಯಾವ ಚಳುವಳಿಗೆ ಧುಮುಕುವರೋ ? ಅವರು ಕಮ್ಯುನಿಸ್ಟರಾಗಿರುವರೆಂದು ಅಪ್ಪ ಹೇಳುತ್ತಿದ್ದ ಮೊನ್ನೆ ಮೊನ್ನೆ. ಊರಲ್ಲಿನ ಕಾಂಗ್ರೆಸ್ ಜನರೆಲ್ಲಾ ಹಾಗೇ ಹೇಳುವರಂತೆ. ಅವರು ಬಿಡುಗಡೆಯಾಗಿ ಬರುವದಕ್ಕೆ ಮೊದಲೇ ಇಲ್ಲಿ ಅವರ ಬಗ್ಗೆ ಸಾಕಷ್ಟು ಅಪಪ್ರಚಾರ ಮಾಡಿದ್ದಾರೆ. ಅವರು ದರೋಡೆಕೋರರಂತೆ. ಖೂನಿ ಮಾಡುವವರಂತೆ. ಇದೆಲ್ಲಾ ಸುಳ್ಳು, ಆಗದವರ ಅಪಪ್ರಚಾರ ಎನ್ನುವುದು ನನಗೊಬ್ಬಳಿಗೆ ಗೊತ್ತು. ನನ್ನಂತೆ ಎಲ್ಲರಿಗೂ ಗೊತ್ತಾಗಲು ಸಾಧ್ಯವಿಲ್ಲ....ಸುಂದರಾಬಾಯಿಗೂ ಕೂಡ ಸಂಶಯವೇ ಇದೆ ಅವರ ಬಗ್ಗೆ. ಚಿಮಣಾಜಿ ಹೇಳುತ್ತಿದ್ದರಂತೆ ಏನೇನನ್ನೋ. ಚಿಮಣಾಜಿ...."

ಸಾವಿತ್ರಿಯ ತುಟಿಗಳ ಮೇಲೆ ನಗೆಯ ನೆರಳೊಂದು ಸುಳಿದು ಮಾಯವಾಯಿತು. ಚಿಮಣಾಜಿಯ ನೆನಪು ಬಂದಾಗಲೆಲ್ಲ ನಗೆ ಬರದಿರುವುದಿಲ್ಲ

ಅವಳಿಗೆ. ಅವಳಿಗೊಬ್ಬಳಿಗೇ ಅಲ್ಲ, ಮಲ್ಲಾಪುರದ ಜನರಿಗೆಲ್ಲ ನಗೆ ಬರುತ್ತದೆ ಅವನನ್ನು ಕಂಡಾಗ. ಬ್ರಹ್ಮಚರ್ಯದಿಂದಿದ್ದು ದೇಶಸೇವೆ ಮಾಡಹೊರಟ ಚಿಮಣಾಜಿ ಇಂದು ಸುಂದರಾಬಾಯಿಯ ಸೇವೆಗೆ ತೊಡಗಿರುವುದು ನಗೆಯ ವಿಷಯ ಅಲ್ಲವೆ! ಅವಳು ಬಾಲ ವಿಧವೆ. ಉಪಾಧ್ಯಾಯಿನಿಯಾಗಿ ಈ ಊರಿಗೆ ಬಂದಂದಿನಿಂದ ನಾಲ್ಕಾರು ಜನರ ಪ್ರೇಯಸಿಯಾಗಿ ಮೋಜು ಮಾಡಿದವಳು. ಈಚೆಗೆ ಎರಡು ವರ್ಷಗಳಿಂದ ಚಿಮಣಾಜಿಯ ಗೆಳೆತನ ಕಟ್ಟಿಕೊಂಡಿದ್ದಾಳೆ. ತನ್ನೊಡನೆ ಮದುವೆಯಾಗಬೇಕೆಂದು ಅವಳನ್ನಾತ ಮತ್ತೆ ಮತ್ತೆ ಕೇಳುತ್ತಿರುವನಂತೆ. "ಅವನೊಬ್ಬ ಹುಚ್ಚ. ಅಂಥವನನ್ನು ಮದುವೆಯಾಗಿ ಫಜೀತಿ ಪಡುವದು ಬೇಡ" ಎನ್ನುತ್ತಾಳೆ ಸುಂದರಾಬಾಯಿ. ಅವಳಂಥ ರಸಿಕ ಸ್ತ್ರೀ ಈ ಊರಲ್ಲಿ ಇನ್ನೊಬ್ಬಳಿಲ್ಲ. ಅವಳ ವೈಯಕ್ತಿಕ ಚಾರಿತ್ರ್ಯ ಇಂಥದಾದರೂ ಬೇರೆ ಎಲ್ಲ ವಿಷಯಗಳಲ್ಲಿ ಬಲು ಒಳ್ಳೆಯವಳು ಸುಂದರಾಬಾಯಿ. ಎಲ್ಲರನ್ನೂ ಆತ್ಮೀಯತೆಯಿಂದ ಸಮಾನಭಾವದಿಂದ ಕಾಣುವುದು ಅವಳ ದೊಡ್ಡ ಗುಣಗಳಲ್ಲೊಂದು. ಯಾರ ಮೇಲೂ ಕೋಪ ಮಾಡಿಕೊಳ್ಳದೆ ಯಾವಾಗಲೂ ಎಲ್ಲರ ಹತ್ತಿರವೂ ನಗುತ್ತಲೇ ಇರುತ್ತಾಳೆ. ಯಾರಿಗಾದರೂ ತೊಂದರೆ ಬಂದಾಗ ತನ್ನ ಕೈಯಿಂದಾದ ಸಹಾಯ ಸಲ್ಲಿಸುತ್ತಾಳೆ. ತಾನು ಬ್ರಾಹ್ಮಣಳಾಕೆಯಾದರೂ ಬ್ರಾಹ್ಮಣೇತರರ ಬಗೆಗೆ ಕೊಂಚವೂ ಮತ್ಸರವಿಲ್ಲ. ತಾನೇ ಬುದ್ಧಿವಂತೆ ಎಂಬ ಜಂಬವಿಲ್ಲ. ಶೀಲದ ವಿಷಯವೊಂದನ್ನು ಹೊರತು ಪಡಿಸಿದರೆ ಅವಳೊಬ್ಬಳು ಆದರ್ಶ ಮಹಿಳೆಯೆಂತಲೇ ಹೇಳಬೇಕು. ಚಿಮಣಾಜಿಯೂ ಕೆಲ ವರ್ಷಗಳ ಹಿಂದೆ ಆದರ್ಶ ವ್ಯಕ್ತಿಯೇ ಆಗಿದ್ದ. ಈಚೆಗೆ ಅವನ ಆದರ್ಶಗಳೂ ಹೋದುವು. ಊರಲ್ಲಿ ಅವನಿಗಿದ್ದ ಮರ್ಯಾದೆಯೂ ಹೋಯಿತು. ಸುಂದರಾಬಾಯಿಯೊಡನೆ ಸಖ್ಯ ಬೆಳಸಿದ್ದೇ ಅವನ ಪತನಕ್ಕೆ ಮೂಲ ಕಾರಣವಾಯಿತು. ಒಮ್ಮೆ ಎಡವಿ ಬಿದ್ದವನು ಹಾಗೇ ಬೀಳುತ್ತಲೇ ಬಂದ. ರೈತರ ಸೇವೆ ಮಾಡಲೆಂದು ಇಲ್ಲಿಗೆ ಬಂದವನು ಜಮೀನ್ದಾರರ ಸೇವೆಗೆ ನಿಂತುಕೊಂಡು ರೈತರ ವಿಶ್ವಾಸ ಕಳೆದುಕೊಂಡ. 'ಜಮೀನ್ದಾರರು ಸಾಕಿದ ನಾಯಿ' ಎಂದು ರೈತರು ಅವನನ್ನು ಕರೆಯುತ್ತಾರೆ. ಅದರಲ್ಲಿ ಅತಿಶಯೋಕ್ತಿಯೂ ಇಲ್ಲ. ರೈತರನ್ನು ತುಳಿಯುವ ಜಮೀನ್ದಾರರ ಪ್ರಬಲ ಹಸ್ತಕನಾಗಿಬಿಟ್ಟಿದ್ದಾನೆ ಚಿಮಣಾಜಿ.

ಸದಾಶಿವ ಇಲ್ಲಿಗೆ ಬಂದ ಬಳಿಕ ಚಿಮಣಾಜಿಗೂ ಅವರಿಗೂ ಚಕಮಕಿಯಾದರೂ ಆದೀತು. ಈ ವಿಷಯವನ್ನು ಚಿಮಣಾಜಿಯೂ ಈಗಾಗಲೇ ಊಹಿಸಿಕೊಂಡಿರ ಬೇಕು. ಅಂತೆಯೆ, ಅವರ ಬಗ್ಗೆ ಅಪಪ್ರಚಾರ ಸಾಗಿಸಿದ್ದಾನೆ, ಈಗಿ ನಿಂದಲೇ.

"ಸರಿ. ಇಂಥವನ ಅಪಪ್ರಚಾರದಿಂದ ನನ್ನ ಸದಾಶಿವರಿಗೇನಾದೀತು!" ಎಂದು ಮನಸ್ಸಿನಲ್ಲೇ ಹೇಳಿಕೊಂಡಳು ಸಾವಿತ್ರಿ.

ಅವಳು ಮನೆಗೆ ಬರುತ್ತಲೂ ಅವಳ ತಾಯಿ ಗಂಗವ್ವ ಹೇಳಿದಳು :

"ಸಣ್ಣ ಹುಡುಗನ್ನ ಸ್ವಲ್ಪ ಎತ್ತಿಕೊ ಸಾವಿತ್ರೀ. ಬಹಳ ಹೊತ್ತಾಯ್ತು, ಅಳುತ್ತಾ ಇದ್ದಾನೆ."

ಅಳುವ ಹುಡುಗನನ್ನು ಕಂಕುಳಲ್ಲಿಟ್ಟುಕೊಂಡು ಸಾವಿತ್ರಿ ಹಿತ್ತಿಲಲ್ಲಿ ಹಾಯ್ದು ಸದಾಶಿವನ ಮನೆಗೆ ಬಂದಳು.

"ಏನು ಮಾಡುತ್ತಿದ್ದಿ ಮಾವಾ?"

ಸದಾಶಿವನ ತಂದೆ ಮಹಾದೇವಪ್ಪನನ್ನು ಸಾವಿತ್ರಿ ಹಾಗೆ ಸಂಬೋಧಿ ಸುತ್ತಿದ್ದಳು.

ನಡುಮನೆಯಲ್ಲಿ ಚರಖದ ಮೇಲೆ ನೂಲು ತೆಗೆಯುತ್ತ ಕುಳಿತಿದ್ದ ಮಹಾದೇವಪ್ಪ ಅತ್ತಿತ್ತ ದೃಷ್ಟಿ ತಿರುಗಿಸದೆ ಹೇಳಿದ :

"ಬಾ ಸಾವಿತ್ರೀ, ಕೂಡು."

ಹುಡುಗನನ್ನು ತೊಡೆಯ ಮೇಲಿಟ್ಟು ಅವಳು ಕುಳಿತುಕೊಂಡಳು. ಮಹಾದೇವಪ್ಪನ ಸ್ವಭಾವವನ್ನು ಪೂರ್ಣವಾಗಿ ಅರಿತವಳಾದ ಅವಳಿಗೂ ಆಗ ಕೊಂಚ ಆಶ್ಚರ್ಯವಾಗದಿರಲಿಲ್ಲ. ಮಗನು ಮನೆಗೆ ಬರುವ ದಿನವೂ ಕೂಡ ಈ ಮುದುಕನ ದಿನಚರಿಯಲ್ಲಿ ಕೊಂಚವೂ ಬದಲಾವಣೆಯಾಗಿಲ್ಲವಲ್ಲ! ಸದಾಶಿವ ನೊಬ್ಬನನ್ನು ಬಿಟ್ಟರೆ ಬೇರೆ ಮಕ್ಕಳಿಲ್ಲ ಇವನಿಗೆ. ಆ ಏಕಮಾತ್ರ ಪುತ್ರ ಒಂದೂವರೆ ವರ್ಷ ಸೆರೆಮನೆವಾಸದ ತರುವಾಯ ಇಂದು ಮನೆಗೆ ಮರಳಿ ಬರು ತ್ತಿದಾನೆ. ಈ ನಡುವೆ ತಂದೆ ಮಕ್ಕಳ ಭೆಟ್ಟಿಯಾಗಿಲ್ಲ. ಮಗನನ್ನು ನೋಡಲು ಒಂದು ಸಲವೂ ಸೆರೆಮನೆಗೆ ಹೋಗಲಿಲ್ಲ ಮುದುಕ. ಸರಿ. ಅವನನ್ನು ಎದುರುಗೊಂಡು ಕರೆದು ತರಲು ಸ್ಟೇಶನ್ನಿಗಾದರೂ ಹೋಗಬಹು

ದಿತ್ತು. ಇವನು ಅಷ್ಟನ್ನೂ ಮಾಡದೆ ದಿನದಂತೆ ನೂಲುತ್ತಾ ಕುಳಿತಿದ್ದಾನೆ. ಮುಖದ ಮೇಲೆ ಎಂದಿನಂತೆ ಶಾಂತಿಯಿದೆ. ಕೊಂಚವೂ ಉದ್ರೇಕವಿಲ್ಲ. ವಿಕಾರವಿಲ್ಲ. ಸದಾಶಿವ ಒಂದು ರೀತಿಯಲ್ಲಿ ಅದ್ಭುತವ್ಯಕ್ತಿಯಾದರೆ ಈ ಮುದುಕನೂ ಇನ್ನೊಂದು ರೀತಿಯಲ್ಲಿ ಅದ್ಭುತವ್ಯಕ್ತಿಯೆ. ದಿನದ ಕರ್ಮಗಳ ನ್ನೆಲ್ಲ ನಿಯಮಿತ ವೇಳೆಗೆ ಸರಿಯಾಗಿ ಮಾಡುತ್ತಾನೆ. ಸ್ವಾತಂತ್ರ್ಯ ಬಂದ ತರುವಾಯ ಎಷ್ಟೋ ಜನ ಕಾಂಗ್ರೆಸ್ಸಿಗರು ಐಷಾರಾಮಕ್ಕೆ ಬಲಿಬಿದ್ದರಾದರೂ ಈತನೊಬ್ಬ ಬೀಳದೆ ಮೊದಲಿನಂತೆ ಸಾದಾ ಜೀವನ ಸಾಗಿಸುತ್ತ ಬಂದಿದ್ದಾನೆ. ಅಧಿಕಾರದ ಆಸೆಯಿಲ್ಲ, ದುಡ್ಡಿನ ಆಮಿಷವಿಲ್ಲ. ಆಸ್ತಿಯನ್ನು ಬೆಳಸುವ ದುರಾಸೆ ಯಿಲ್ಲ. ಹಿರಿಯರಿಂದ ಬಂದ ಹತ್ತು ಎಕರೆ ಭೂಮಿಯಿಂದಲೇ ತೃಪ್ತನಾಗಿ ದ್ದಾನೆ. ವಯಸ್ಸು ಅರುವತ್ತರ ಗಡಿ ದಾಟಿದ್ದರೂ, ದೇಹದಲ್ಲಿನ ಶಕ್ತಿ ಕುಗ್ಗಿ ಹೋಗಿದ್ದರೂ ದಿನವೂ ಹೊಲಕ್ಕೆ ಹೋಗಿ ಕೆಲಸ ಮಾಡುವುದನ್ನು ನಿಲ್ಲಿಸಿಲ್ಲ, ಮನೆಯಲ್ಲಿ ತಾನೇ ಅಡುಗೆ ಮಾಡಿಕೊಂಡು ತಿನ್ನಬೇಕು. ಅದರ ಬಗೆಗೂ ಬೇಸರವಿಲ್ಲ. ಹೊಲ ಮನೆಗಳ ಕೆಲಸವನ್ನೆಲ್ಲ ನೋಡಿಕೊಂಡೂ ಮತ್ತೆ ಮಧ್ಯಾಹ್ನ ನೂಲುತ್ತ ಕೂಡುತ್ತಾನೆ. ಸೂರ್ಯನುದಯಿಸುವುದು ತಪ್ಪಿದರೂ ತಪ್ಪೀತು, ಇವನು ನೂಲುವುದು ತಪ್ಪುವಂತಿಲ್ಲವೆನ್ನುವ ಹಾಗಾಗಿದೆ. ಇದೊಂದು ಕಠೋರ ವ್ರತದಂತಾಗಿದೆ ಇವನ ಪಾಲಿಗೆ ತನ್ನ ತಂದೆ, ಜಿಮಣಾಜಿ, ಮತ್ತಿ ತರ ಕಾಂಗ್ರೆಸ್ಸಿಗರೆಲ್ಲ ನೂಲುವುದನ್ನು ನಿಲ್ಲಿಸಿ ಎಂಟು ಹತ್ತು ವರ್ಷವಾಯಿತು. ಈಗ ಈ ಊರಲ್ಲಷ್ಟೆ ಅಲ್ಲ, ಸುತ್ತಲಿನ ನೂರು ಹಳ್ಳಿಗಳಲ್ಲೆಲ್ಲ ನಿಯಮಿತವಾಗಿ ನೂಲು ತೆಗೆಯುವವನೆಂದರೆ ಮಹಾದೇವಪ್ಪ ಮಾವನೊಬ್ಬನೆ. ಇವನ ಈ ನಿತ್ಯಕರ್ಮ ಹಲವರಿಗೆ ಹಾಸ್ಯದ ವಿಷಯವೂ ಆಗಿದೆ. "ಇವನೇನಪ್ಪಾ, ಕರ್ನಾಟಕದ ವಿನೋಬಾ!" ಎಂದು ಅಣಕವಾಡಿ ನಗುತ್ತಾರೆ ಈ ಜನ. ಆದರೆ ಇಂಥ ಕುಹಕಿಗಳು ಬಹಳ ಕಡಮೆ. ಮಹಾದೇವಪ್ಪ ಮಾವನನ್ನು ಗೌರವಾದರಗಳಿಂದ ಕಾಣುವ ಜನರೇ ಹೆಚ್ಚು.

"ಊಟ ಆಯಿತೇನು ಸಾವಿತ್ರೀ?" ನೂಲುತ್ತಿದ್ದ ಹಾಗೆಯೆ ಮಹಾದೇವಪ್ಪ ಪ್ರಶ್ನಿಸಿದ.

"ಇನ್ನೂ ಇಲ್ಲ ಮಾವಾ. ನಿನ್ನದು?"

"ಇಲ್ಲ. ಇವತ್ತು ಸ್ವಲ್ಪ ತಡವಾಗುತದೆ. ನೀನ್ಯಾಕೆ ಇನ್ನೂ ಉಣ್ಣ ಲಿಲ್ಲ ? ಹೋಗಿ ಊಟ ಮಾಡು ಹೋಗು. ಹಸಿವಾಗಿಲ್ಲೇನು ?"

"ಇಲ್ಲ."

ಮಹಾದೇವಪ್ಪ ನೂಲುವುದನ್ನು ನಿಲ್ಲಿಸಿ ಸಾವಿತ್ರಿಯ ಮುಖವನ್ನೇ ದಿಟ್ಟಿಸಿದ. ಅವನ ತುಟಿಯ ಮೇಲೆ ಮುಗಳ್ನಗೆಯ ಹೂವರಳಿತು. ಸದಾಶಿವನ ಬಗೆಗೆ ಸಾವಿತ್ರಿಯಲ್ಲಿದ್ದ ಪ್ರೇಮದ ಆಳವೆಷ್ಟೆಂಬುದನ್ನು ಅವನೂ ಬಲ್ಲವ ನಾಗಿದ್ದ. ಈ ಸುಶೀಲ ಕನ್ಯೆಯ ಕೈಹಿಡಿದು ಸದಾಶಿವನೂ ಸಂಸಾರಿಕನಾಗ ಬೇಕೆಂದು ಅವನೂ ಅಪೇಕ್ಷೆಪಟ್ಟುದಾಗಿತ್ತು. ಹೊಲ ಮನೆಗಳ ಹೊಣೆಗಾರಿಕೆ ಯನ್ನು ಮಗನಿಗೊಪ್ಪಿಸಿ ತಾನು ನೂಲುವುದರಲ್ಲೂ ಪ್ರಾರ್ಥನೆಯಲ್ಲೂ ಕಾಲ ಕಳೆಯಬೇಕೆಂದು ಅವನು ಎಷ್ಟೋ ಬಾರಿ ಯೋಚಿಸಿಕೊಂಡಿದ್ದ. ಸದಾಶಿವನಿಗೆ ಮಾತ್ರ ಯಾವ ಹೊಣೆಗಾರಿಕೆಯನ್ನೂ ವಹಿಸಿಕೊಳ್ಳುವ ಇಷ್ಟವಿದ್ದಂತಿರಲಿಲ್ಲ. ಅವನು ವಿದ್ಯಾಭ್ಯಾಸವನ್ನೂ ಮುಗಿಸಲಿಲ್ಲ; ಇತ್ತ ಮನೆಗೂ ಅಂಟಿಕೊಳ್ಳಲಿಲ್ಲ. ಚಳುವಳಿ ಮುಗಿದರೂ ಕೂಡ ಅವನು ತನ್ನ ಅಲೆದಾಟವನ್ನು ನಿಲ್ಲಿಸಲಿಲ್ಲ. ಸ್ವಾಮಿಯ ಗುಂಪಿನ ಚಟುವಟಿಗೆಗಳಾವುವೂ ಮಹಾದೇವಪ್ಪನಿಗೆ ಒಪ್ಪಿಗೆಯಾ ಗಿರಲಿಲ್ಲ. ಗಾಂಧೀಜಿಯವರ ತತ್ವಗಳನ್ನು ಕೊಂಚವೂ ಬಿಡದೆ ಅನುಸರಿಸುತ್ತ ಬಂದ ನಿಷ್ಠುರ ಗಾಂಧೀವಾದಿಯಾದ ಅವನಿಗೆ ಬಂದೂಕು ಪಿಸ್ತೂಲುಗಳನ್ನು ಕೈಯಲ್ಲಿ ಹಿಡಿಯುವುದೂ ಕೂಡ ಸರಿಬಂದಿರಲಿಲ್ಲ. ಧನಿಕರ ಮನೆಗಳನ್ನು ಲೂಟಿ ಮಾಡುವುದು, ಬೆಂಕಿಯಿಡುವುದೇ ಮೊದಲಾದ ಹಿಂಸಾಕೃತ್ಯಗಳ ಬಗೆಗೆ ಕೇಳಿದಾಗಲಂತೂ ಅವನು ಕಿವಿಗಳನ್ನು ಮುಚ್ಚಿಕೊಳ್ಳುತ್ತಿದ್ದ. ತನ್ನ ಸ್ವಂತ ಮಗನೇ ಅಂಥ ಕೃತ್ಯಗಳಲ್ಲಿ ಭಾಗವಹಿಸುತ್ತಿದ್ದುದು ತಿಳಿದು ಬಂದಾಗ ಅವನಿ ಗಾದ ನೋವು ಅಷ್ಟಿಷ್ಟಲ್ಲ. ಆರು ತಿಂಗಳುಗಳ ಕಾಲ ಮೌನವ್ರತ ತಳೆದು ಆ ನೋವನ್ನೆಲ್ಲ ನುಂಗಿಕೊಂಡ. ಅಂದಿನಿಂದ ಅವನ ದಾರಿ ಅವನದಾಯಿತು; ಮಗನ ದಾರಿ ಮಗನದಾಯಿತು. ಮಗ ಸೆರೆಮನೆ ಸೇರಿದಾಗ ಅಪ್ಪನಿಗೆ ವ್ಯಸನವಾಗಲಿಲ್ಲ. ಅವನನ್ನು ನೋಡುವುದಕ್ಕೂ ಇವನು ಹೋಗಲಿಲ್ಲ. ಮಗನದೂ ಅಷ್ಟೇ ನಿಷ್ಠುರ ಸ್ವಭಾವ. ಅವನೂ ತಂದೆಗೆ ಪತ್ರ ಬರೆಯಲಿಲ್ಲ. ತನ್ನ ಕೃತ್ಯಗಳಿಂದಾಗಿ ತಂದೆಯ ಮನಸ್ಸಿಗೆ ನೋವಾಗುವುದೆಂಬುದನ್ನು

ಅರಿತೂ ಅವನು ತನ್ನ ದಾರಿಯಲ್ಲಿಯೆ ಮುಂದುವರೆಪ. ತಂದೆಗಿಂತಲೂ ಧ್ಯೇಯ ಹೆಚ್ಚಿನದಾಗಿತ್ತು ಅವನ ದೃಷ್ಟಿಯಲ್ಲಿ. ತನ್ನ ಧ್ಯೇಯ ಆದರ್ಶ ಮತ್ತು ವಿಚಾರಗಳನ್ನು ಅರ್ಥಮಾಡಿಕೊಳ್ಳಲೆತ್ನಿಸುವುದು ತಂದೆಯ ಕರ್ತವ್ಯ. ಅವನಿಗದು ಇಷ್ಟವಿಲ್ಲ. ಬ್ರಿಟಿಷರು ಹೊರಟು ಹೋಗುತ್ತಲೂ ಸ್ವಾತಂತ್ರ್ಯ ಬಂದು ಬಿಟ್ಟಂತಾಯಿತು, ಇನ್ನು ಹೋರಾಟವೇ ಅನಾವಶ್ಯಕವೆಂದು ಅವನ ಭಾವನೆ ಈಗ ಬಂದ ಸ್ವಾತಂತ್ರ್ಯ ನಿಜವಾಗಿ ಎಂಥ ಸ್ವಾತಂತ್ರ್ಯ, ಯಾರಿಗೆ ಬಂದ ಸ್ವಾತಂತ್ರ್ಯ, ಇದರಿಂದ ಸುಖ ಲಭಿಸಿದ್ದು ಯಾರಿಗೆ ಎಂದು ಮುಂತಾಗಿ ಕೇಳಿದರೆ ಅವನು ಸುಮ್ಮನಿದ್ದು ಬಿಡುವನೇ ಹೊರತು ಆ ಬಗ್ಗೆ ಯೋಚನೆಮಾಡುವುದಿಲ್ಲ. ಸಮಾಜವಾದವೆಂದಾಗ ಸಮತಾವಾದವೆಂದಾಗ ಸುಮ್ಮನೆ ಮೂಗು ಮುರಿಯುವನೇ ಹೊರತು ಅವುಗಳ ತಿರುಳು ಏನೆಂಬುದನ್ನು ಅರಿತುಕೊಳ್ಳಲು ಮನಸ್ಸು ಮಾಡುವುದಿಲ್ಲ. ಈ ಹಳೆಯ ಕಾಲದ ಕಾಂಗ್ರೆಸ್ಸಿಗರ ಮನೋವೃತ್ತಿಯೇ ಇಂಥದೆಂದು ತೋರುತ್ತದೆ. ಹೊಸವಿಚಾರಗಳಿಗೆ ಅವರನ್ನೊಪ್ಪಿಸುವುದು ಸಾಧ್ಯವೇ ಇಲ್ಲ. ಹಾಗೆ ಯೋಚಿಸಿ ಸದಾಶಿವ ತಂದೆಯೊಡನೆ ವಾದ ಮಾಡುವುದನ್ನು ನಿಲ್ಲಿಸಿಬಿಟ್ಟಿದ್ದ. ತನ್ನ ಪಾಡಿಗೆ ತಾನು ಚರಖ ತಿರುಗಿಸುತ್ತಾ ಕೂತಿರಲೊಲ್ಲನೇಕೆ, ಅದರಿಂದಾಗುವ ಹಾನಿಯೇನು ? ಎಂದುಕೊಂಡು ತನ್ನ ಚಟುವಟಿಕೆಗಳನ್ನು ಮುಂದುವರೆಸುತ್ತ ಬಂದಿದ್ದ ಸದಾಶಿವ. ಅವನು ಏನಾದರೂ ಮಾಡಿಕೊಳ್ಳಲೊಲ್ಲನೇಕೆ—ಎಂದುಕೊಂಡು ಮಹಾದೇವಪ್ಪನೂ ತಟಸನಾಗಿ ಬಿಟ್ಟಿದ್ದ.

ಅದರೂ ತಂದೆಯ ಕರುಳು. ಮಾನವಸಹಜವಾದ ಭಾವರಾಗಗಳು ಮಹಾದೇವಪ್ಪನ ಮನಸ್ಸನ್ನು ಆಗಾಗ ತಲಮುಲಗೊಳಿಸದಿರುತ್ತಿರಲಿಲ್ಲ. ಮಗನ ಮೇಲೆ ಸುರಿಯಬೇಕಿದ್ದ ವಾತ್ಸಲ್ಯದ ಪ್ರವಾಹವನ್ನು ಸಾವಿತ್ರಿಯ ಮೇಲೆ ಸುರಿಸುತ್ತಾ ಮನಸ್ಸನ್ನು ಸಮಾಧಾನ ಮಾಡಿಕೊಳ್ಳಲು ಹವಣಿಸುತ್ತಿದ್ದ. ದಿನವೂ ತಪ್ಪದೆ ಅಲ್ಲಿಗೆ ಬಂದು ಚಿಕ್ಕಪುಟ್ಟ ಕೆಲಸಗಳಲ್ಲಿ ನೆರವಾಗುತ್ತಿದ್ದಳು ಸಾವಿತ್ರಿ. ಮನೆಯ ಕಸ ಗುಡಿಸುವುದು, ಬಾವಿಯಿಂದ ನೀರು ತಂದು ತುಂಬಿಸುವುದು, ಪಾತ್ರೆ ತಿಕ್ಕುವುದು, ಆಗಾಗ ರೊಟ್ಟಿ ತಟ್ಟಿಕೊಡುವುದು ಮೊದಲಾದ ಕೆಲಸಗಳನ್ನು ಮಾಡುತ್ತಾ ಮುದುಕನ ಊರುಗೋಲಿನಂತಿದ್ದಳು. ತನ್ನ

ಮಗಳು ಈ ರೀತಿ ಮಹಾದೇವಪ್ಪನ ಮನೆಯಲ್ಲಿ ದುಡಿಯುತ್ತಿರುವುದನ್ನು ಮಲ್ಲಪ್ಪ ಸಹಿಸುತ್ತಿರಲಿಲ್ಲವಾದರೂ ಅವಳ ಹಟದ ಮುಂದೆ ಅವನೇನನ್ನೂ ಮಾಡುವಂತಿರಲಿಲ್ಲ. ಕೈತುಂಬಾ ಸಂಬಳ ತಂದು ಒಪ್ಪಿಸುವ ಆ ಮಗಳನ್ನು ಗದರಿಸುವಂತೆಯೂ ಇರಲಿಲ್ಲ. ಒಂದೆರಡು ಸಲ ಸೂಚ್ಯವಾಗಿಯೂ ಮೃದುವಾಗಿಯೂ ಹೇಳಿ ನೋಡಿದ್ದ : "ಹಾಗೆ ದಿನಾಲೂ ಹೋಗಬಾರದವ್ವಾ. ಮಂದಿ ಏನಾದರೂ ಆಡಿಕೊಳ್ತಾರೆ." "ಮಂದಿಯ ಬಾಯಿಗೆ ಬೀಗ ಹಾಕುವುದು ಶಕ್ಯವೇ ಅಪ್ಪ ?" ಎಂದು ನಗುತ್ತ ನುಡಿದು ಆ ಮಾತನ್ನು ಮರೆಸಿಬಿಟ್ಟಿದ್ದಳು ಸಾವಿತ್ರಿ. ಮಹಾದೇವಪ್ಪನ ಮನೆಗೆ ಹೋಗಿ ಅವನಿಗೆ ನೆರವಾಗುವುದನ್ನು ಮಾತ್ರ ನಿಲ್ಲಿಸಿರಲಿಲ್ಲ ಒಂದೆರಡು ಬಾರಿ ಹೇಳಿ ನೋಡಿದ ಬಳಿಕ ಮಲ್ಲಪ್ಪನೂ ಬೇಸರಪಟ್ಟುಕೊಂಡು, "ಅದೊಂದು ಕತ್ತೆ. ದುಡಿದರೆ ದುಡಿಯಲಿ. ಅದರಿಂದ ಆಗುವ ಹಾನಿಯೇನು ?" ಎಂದುಕೊಂಡು ಸುಮ್ಮನಾಗಿದ್ದ.

೮

ಮತ್ತೆ ಒಂದು ಗಂಟೆ ಕಳೆದರೂ ಸದಾಶಿವ ಬರಲಿಲ್ಲ. " ಗಾಡಿ ತಡವಾಗಿದ್ದರೂ ಆಗಿದ್ದೀತು. ನೀನು ಹೋಗಿ ಊಟ ಮಾಡು ಸಾವಿತ್ರೀ " ಎಂದು ನಾಲ್ಕೈದು ಬಾರಿ ಮಹಾದೇವಪ್ಪ ಹೇಳಿದರೂ ಅವಳು ಎದ್ದು ಹೋಗದೆ ಅಲ್ಲಿಯೆ ಕುಳಿತುಕೊಂಡಳು. ಒಂದೂವರೆ ಗಂಟೆಯ ಸಮಯಕ್ಕೆ ಬೀದಿಯಲ್ಲಿ ಸದಾಶಿವನ ಆಕೃತಿ ಕಾಣಿಸಿಕೊಂಡಿತು. ಈಶ್ವರನೂ ಅವನ ಜತೆಯಲ್ಲಿದ್ದ. ಮಲ್ಲಾಪುರದ ಕಾಂಗ್ರೆಸ್ ಕಾರ್ಯಕರ್ತರಲ್ಲೊಬ್ಬನಾದ ಪ್ರಭಣ್ಣ ಸದಾಶಿವನನ್ನು ಹಿಂಬಾಲಿಸಿಕೊಂಡು ಬರುತ್ತಿದ್ದ. ಅವನು ಮಧ್ಯ ವಯಸ್ಸಿನ, ಮಧ್ಯಮ ತರಗತಿಯ ಎತ್ತರದ, ಗೂರಲು ರೋಗದಿಂದ ಕೃಶವಾದ ದೇಹದ ಆಸಾಮಿ. ಮಲ್ಲಪ್ಪ, ಮಹಾದೇವಪ್ಪ, ಚಿಮಣಾಜಿ ಮತ್ತಿತರರೊಡನೆ ಇಪ್ಪತ್ತು ವರ್ಷಗಳಿಂದ ಕಾಂಗ್ರೆಸ್ ಸಂಸ್ಥೆಗಾಗಿ ದುಡಿಯುತ್ತ ಬಂದಿದ್ದವನು ಪ್ರಭಣ್ಣ. ಹತ್ತಿಪ್ಪತ್ತು ಗುಂಟೆಗಳಷ್ಟು ಇದ್ದ ಭೂಮಿಯನ್ನು ಹೊರತುಪಡಿಸಿದರೆ ಬೇರಾವ ಆಸ್ತಿಯೂ ಅವನದಾಗಿರಲಿಲ್ಲ. ಆ ಹಳ್ಳಿಯ ಅನೇಕರಂತೆ ಅವನೂ ಕೂಡ ಜಮೀನ್ದಾರ್ ನರಹರಿ ರಾಯರ ರೈತನಾಗಿ ಮೂರು ಎಕರೆ ಭೂಮಿಯನ್ನು ಲಾವಣಿಗೆ ಹಿಡಿದು ಅದರಿಂದ ಬರುವ ಕಾಳಿನಿಂದ ಹೇಗೋ ಸಂಸಾರ ಸಾಗಿಸುತ್ತ ಬಂದಿದ್ದ.

" ಏನು ಸಾವಿತ್ರೀ, ನೆಟ್ಟಗಿದ್ದೀಯಾ ? " ಎಂದು ಕೇಳುತ್ತಾ ಸದಾಶಿವ ಮನೆಯೊಳಗಡೆ ಅಡಿಯಿರಿಸಿದ. ಅವಳು ಮಗುವನ್ನೆತ್ತಿಕೊಂಡು ಎದ್ದು ಒಳಗೆ ಹೋಗಿ ನೀರು ತಂದುಕೊಟ್ಟಳು.

ಕೈಕಾಲು ಮುಖ ತೊಳೆದುಕೊಂಡು ಬಂದು ಚಾಪೆಯ ಮೇಲೆ ಕುಳಿತುಕೊಳ್ಳುತ್ತ ಸದಾಶಿವನೆಂದ :

" ನೆಟ್ಟಗಿದ್ದೀಯಾ ಅಪ್ಪಾ ? "

" ಇದೀನಿ ನೋಡಪ್ಪಾ ಹೀಗೆ. "

ತಂದೆ ಮಕ್ಕಳ ಮಾತು ಅಲ್ಲಿಗೇ ಮುಗಿದಂತಾಯಿತು.

" ಅಡಿಗೆ ಆಗಿದೆಯಿಲ್ಲೋ ಸಾವಿತ್ರೀ ? ಇಲ್ಲದಿದ್ದರೆ ಬೇಗ ಬೇಗ ರೊಟ್ಟಿ ಮಾಡು. ಈಶ್ವರಪ್ಪನವರೂ ಇಲ್ಲೇ ಊಟಕ್ಕೇಳುತ್ತಾರೆ. ಇವರು ಗೊತ್ತಿಲ್ಲವೇ ನಿನಗೆ ? ಇಲ್ಲೇ ಕಾಡಾಪುರದಲ್ಲಿರುತ್ತಾರೆ. "

" ಊಟಕ್ಕೆ ನಮ್ಮಲ್ಲಿಗೇ ಹೋಗೋಣ " ಎಂದ ಪ್ರಭಣ್ಣ.

" ಇಂಥ ವೇಳೆಯಲ್ಲಿ ಮತ್ತೆ ನಿಮ್ಮ ಮನೆಯವರಿಗ್ಯಾಕೆ ತ್ರಾಸಬಿಡಪ್ಪಾ. ಸಾವಿತ್ರಿಯಿದ್ದಾಳಲ್ಲ, ಎಲ್ಲಾ ತಯಾರು ಮಾಡಿರಬೇಕು " ಎಂದ ಸದಾಶಿವ. ಅವನ ಮಾತಿನಿಂದಾಗಿ ಅವಳಿಗೆ ರೋಮಾಂಚನವಾಗದಿರಲಿಲ್ಲ. ತನ್ನ ಬಗೆಗೆ ಎಂಥ ಆತ್ಮೀಯತೆ ಸದಾಶಿವನಿಗೆ ! ತನ್ನ ಮೇಲೆ ಅಧಿಕಾರವಿರುವ ಹಾಗೆ ಮಾತನಾಡುತ್ತಾನೆ. ಮಗುವನ್ನು ಕಂಕುಳಲ್ಲಿರಿಸಿಕೊಂಡು ಅಡುಗೆಯ ಮನೆಗೆ ಧಾವಿಸಿದಳು.

" ಖಟ್ಲೆ ಸುರುವಾಗಿ ಎಷ್ಟು ದಿವಸ ಆಯ್ತು ಪ್ರಭಣ್ಣಾ ? " ಸದಾಶಿವ ಕೇಳಿದ.

" ಒಂದು ವರ್ಷ ಆಗುತಾ ಬಂತಪ್ಪ. "

" ಖಟ್ಲೆ ಯಾಕೆ ? " ಎಂದು ಪ್ರಶ್ನಿಸಿದ ಈಶ್ವರ.

" ಹೊಲಕ್ಕಾಗಿ. ಮನೆಯಿಂದ ಮಾಡುತ್ತಾರಂತೆ ನರಹರಿರಾಯರು. ಖಟ್ಲೆ ಹಾಕಿದ್ದಾರೆ. "

" ಅವರು ಕಳ್ಳೀಕಾಯಿಯಲ್ಲಿರುತ್ತಾರಲ್ಲ. ಇಲ್ಲಿ ಹ್ಯಾಗೆ ಮನೆಯಿಂದ ಮಾಡುವವರು ? "

" ಮನೆಯಿಂದ ಮಾಡುವುದೆನ್ನುವದು ಬರೀ ನೆಪಕ್ಕೆ. ನಿಜವಾಗಿ ಅವರು ಮಾಡಿಸುವದು ಕೂಲಿಯಾಳು ಹಚ್ಚಿ. ಕಾಂಗ್ರೆಸ್ ಸರಕಾರದವರು ಟೆನನ್ಸಿ ಕಾಯ್ದೆ ಮಾಡಿದಂದಿನಿಂದ ನಮ್ಮಂಥಾ ರೈತರಿಂದ ಹೊಲ ಬಿಡಿಸಿ ಕೊಳ್ಳುವದಕ್ಕೆ ಸುರು ಮಾಡಿದ್ದಾರಲ್ಲ ಜಮೀನ್ದಾರರೆಲ್ಲಾ. ನಿಮಗೆ ಗೊತ್ತಿಲ್ಲ ವೇನು ? "

ಹಲವು ತಿಂಗಳುಗಳಿಂದ ಹಳ್ಳಿಗಾಡಿನಲ್ಲಿಯೆ ನೆಲಸಿದ್ದ ಈಶ್ವರನೂ ಆ

ವಿಚಾರವನ್ನು ಬಲ್ಲವನಾಗಿದ್ದ. ಜಮೀನ್ದಾರರು ಸ್ವತಃ ಸಾಗುವಳಿ ಮಾಡುವಂತಿದ್ದಲ್ಲಿ ಐವತ್ತು ಎಕರೆಗಳಷ್ಟು ಭೂಮಿಯನ್ನು ಅವರು ರೈತರಿಂದ ಬಿಡಿಸಿಕೊಳ್ಳಲು ಕಾಯ್ದೆಯಲ್ಲಿ ಅವಕಾಶವಿತ್ತು. ಅದರ ದುರುಪಯೋಗ ಪಡೆದು ಅನೇಕ ಜಮೀನ್ದಾರರು ರೈತರಿಂದ ಹೊಲಗಳನ್ನು ಕಿತ್ತುಕೊಳ್ಳುವ ಕಾಯಕಕ್ಕಾರಂಭಿಸಿದ್ದರು. ಪ್ರತಿಯೊಂದು ತಾಲ್ಲೂಕಿನಲ್ಲಿಯೂ ಅಂಥ ಸಾವಿರಾರು ಮೊಕದ್ದಮೆಗಳು ನಡೆಯುತ್ತಿದ್ದುವು. ಹಳ್ಳಿಗಳಿಂದ ನ್ಯಾಯಾಸ್ಥಾನಗಳಿಗೆ ಅಲೆದು ರೈತರು ನರಳತೊಡಗಿದ್ದರು. ಬಡರೈತರ ಆ ಬವಣೆಯನ್ನು ಕಂಡು ಈಶ್ವರನ ಜೀವವೂ ಮರುಗುತ್ತಿದ್ದಿತಾದರೂ ಅವರಿಗಾಗಿ ತಾನೇನನ್ನೂ ಮಾಡಲು ಸಾಧ್ಯವಿಲ್ಲವಲ್ಲಾ ಎಂಬ ಅಸಹಾಯಕತೆಯಿಂದ ನೊಂದುಕೊಳ್ಳುತ್ತ ಅವನು ತೆಪ್ಪಗೆ ಕುಳಿತುಕೊಂಡಿದ್ದ. ನರಹರಿರಾಯರಂಥ ಗಾಂಧೀವಾದಿ ಮುಖಂಡರೂ ಕೂಡ ರೈತರನ್ನು ಗೋಳಿಗೀಡು ಮಾಡುತ್ತಿದ್ದುದನ್ನು ಕೇಳಿದಾಗ ಈಶ್ವರನಿಗೆ ಆಶ್ಚರ್ಯವೂ ಆಯಿತು, ವ್ಯಸನವೂ ಆಯಿತು.

"ನರಹರಿರಾಯರೂ ಕೂಡ ಇಂಥ ಹೇಸಿತನ ಮಾಡಬಹುದೆಂದು ನನಗನ್ನಿಸಿರಲಿಲ್ಲ ಪ್ರಭಣ್ಣಾ" ಎಂದ ಈಶ್ವರ.

"ಅವರ ಹೇಸಿತನ ಈಗಲೇ ಗೊತ್ತಾಯಿತೇನು ನಿಮಗೆ?"

"ನಾನಂತೂ ಕೇಳಿರಲಿಲ್ಲ ಬಿಡಿರಿ."

"ಅವರೆಂಥವರು ಅನ್ನುವದು ಕಳ್ಳೀಕಾಯಿ ಜಿಲ್ಲಾಕ್ಕೆಲ್ಲಾ ಗೊತ್ತೈತಿ. ನಿಮಗೊಬ್ಬರಿಗೆ ಗೊತ್ತಿಲ್ಲ. ಕಾಡಾಪುರದಲ್ಲಿ ಕೂತುಕೊಂಡು ಏನು ಮಾಡುತ್ತಿದ್ದೀರಿ?" ಒರಟು ಧ್ವನಿಯಲ್ಲಿ ನುಡಿದ ಪ್ರಭಣ್ಣ. ಅವನ ಮಾತಿನ ಧಾಟಿಯನ್ನು ಕಂಡಾಗಲೂ ಈಶ್ವರನಿಗೆ ವಿಸ್ಮಯವಾಗದಿರಲಿಲ್ಲ. ತಪ್ಪು ಮಾಡಿದವರನ್ನು ಬಂಡಿಸುವ ರೀತಿಯಲ್ಲಿ ತನ್ನೊಡನೆ ಮಾತನಾಡುವನಲ್ಲ ಈ ಪ್ರಭೃತಿ. ತಾನು ಮಾಡಿದ ತಪ್ಪೇನು? ತನ್ನ ಬಗೆಗೇಕೆ ಕೋಪವೊ ಇವನಿಗೆ? ಅಥವಾ ಇವನ ಸ್ವಭಾವವೇ ಹೀಗಿದೆಯೊ? ಜಮೀನ್ದಾರರ ಪೀಡೆಗೊಳಗಾದಂದಿನಿಂದ ಮನಸ್ಸು ಬಹಳ ಕಹಿಯಾಗಿ ಇವನು ಹೀಗಾಗಿದ್ದರೂ ಇರಬಹುದು.

ಹಾಗೆ ಯೋಚಿಸಿ ಈಶ್ವರ ಸಹಾನುಭೂತಿ ವ್ಯಕ್ತಗೊಳಿಸುತ್ತ ಹೇಳಿದ:

"ನನ್ನ ಮೇಲೇಕೆ ಸಿಟ್ಟು ಮಾಡುತ್ತೀರಿ ಪ್ರಭಣ್ಣಾ? ನೀವು ಇರುವ

ದಿಲ್ಲಿ, ನಾನಿರುವದು ಅಲ್ಲಿ. ನೀವು ನಮ್ಮಲ್ಲಿಗೆ ಬಂದಿಲ್ಲ, ನಾನು ನಿಮ್ಮಲ್ಲಿಗೆ ಬಂದಿಲ್ಲ. ಇವತ್ತೇ ಸದಾಶಿವಣ್ಣ ಒತ್ತಾಯದಿಂದ ಕರೆದು ತಂದರೆಂದು ಬಂದೆ. ನಿಮ್ಮ ಸಮಸ್ಯೆಗಳು ನನಗೆ ಗೊತ್ತಾಗುವದಾದರೂ ಹ್ಯಾಗೆ ? "

ಪ್ರಭಣ್ಣ ನೆಲವನ್ನು ಕೆರೆಯುತ್ತ ಐದಾರು ನಿಮಿಷ ಸುಮ್ಮನೆ ಕುಳಿತಿದ್ದು ಅನಂತರ ಕೇಳಿದ :

" ಮುಂದೆ ನಾನು ಹ್ಯಾಗೆ ಮಾಡಬೇಕಂತೀ ಸದಾಶಿವಣ್ಣಾ ? "

" ಖಟ್ಲೆ ಅಂತೂ ನಡೆದಿದೆಯಲ್ಲಾ. ಯಾವ ವಕೀಲರನ್ನಿಟ್ಟಿದ್ದೀ ? "

" ಟೋಪಿ ಶಾಂತಣ್ಣನವರನ್ನ. "

ಆ ಹೆಸರು ಕೇಳುತ್ತಲೂ ಈಶ್ವರನಿಗೆ ನಗು ಬರದಿರಲಿಲ್ಲ.

" ಒಳ್ಳೆಯ ವಕೀಲನೇ ಸಿಕ್ಕಿದಾನಲ್ಲ ! "

ಪ್ರಭಣ್ಣ ಹುಬ್ಬುಗಂಟು ಹಾಕಿ ಎತ್ತರಿಸಿದ ಧ್ವನಿಯಲ್ಲಿ ನುಡಿದ :

" ಯಾಕೆ ? ಏನಾಗೈತಿ ಅವರಿಗೆ ? ಅವರಂಥಾ ಶ್ಯಾಣ್ಯಾ ವಕೀಲ ನಮ್ಮ ಜಿಲ್ಲಾದಾಗ ಇನ್ನೊಬ್ಬ ಇಲ್ಲ. "

" ಸರಿ. ಸರಿ. " ಎಂದ ಈಶ್ವರ.

" ರಾಯರ ಪ್ರೀತಿ ಬಹಳ ಇತ್ತಲ್ಲ ನಿನ್ನ ಮೇಲೆ ಪ್ರಭಣ್ಣಾ. ಒಮ್ಮಿಂ ದೊಮ್ಮೆಲೆ ಹೀಗ್ಯಾಕೆ ವಿರುದ್ಧ ಆದರು ? " ಎಂದು ಕೇಳಿದ ಸದಾಶಿವ

" ಎಲ್ಲಿಯ ಪ್ರೀತಿ ಸದಾಶಿವಣ್ಣಾ ಸುಮ್ಮನೆ ನಮ್ಮಂಥವರನ್ನ ದುಡಿಸಿ ಕೊಳ್ಳುವದಕ್ಕೆ ಪ್ರೀತಿಯ ನಾಟಕಾ ಮಾಡುತ್ತಿದ್ದರವರು. ನಾವೆಲ್ಲಾ ಕತ್ತೆಗಳ ಹಾಂಗ ದುಡಿದೆವೆಂತ ಅವರೂ ಒಬ್ಬ ಪ್ರಸಿದ್ಧ ಮುಖಂಡರಾದರು. ಈಗ ದೇಶಕ್ಕೆ ಸ್ವಾತಂತ್ರ್ಯ ಬಂತಲ್ಲಾ. ನಮ್ಮ ಅಗತ್ಯ ಏನವರಿಗೆ ? ಅದಕ್ಕೇ ಸುರು ಆಗೈತಿ ಕಾಟ. "

" ಊರಲ್ಲಿ ಎಷ್ಟು ಜನರ ಮೇಲೆ ಖಟ್ಲೆ ಹಾಕಿದ್ದಾರೆ ? "

" ಖಟ್ಲೆ ಬೇರೆ ಯಾರ ಮ್ಯಾಲೂ ಇಲ್ಲ. ನನ್ನೊಬ್ಬನ ಮ್ಯಾಲೇ. ಬ್ಯಾರೆಯವರೆಲ್ಲಾ ಅವರು ಹೇಳಿದ ಹಾಂಗ ಕೇಳಿ ಉಳಿದುಕೊಂಡರು. "

" ಅಂದರೆ ? "

" ಅವರ ಮ್ಯಾಲ ರಾಯರು ಖಟ್ಲೇ ಹಾಕುವ ಪ್ರಸಂಗವೇ ಬರಲಿಲ್ಲ.

ಹೊಲ ಕೊಟ್ಟುಬಿಡಿರಿ ಅಂತ ಅವರು ಕೇಳಿದ ಕೂಡಲೆ ಇವರು ರಾಜೀನಾಮಾ ಬರೆದುಕೊಟ್ಟುಬಿಟ್ಟರು. ರಾಜೀನಾಮಾ ಕೊಡು ಅಂತ ನನ್ನನ್ನೂ ಕೇಳಿದರು. ನನಗೆ ಬ್ಯಾರೆ ಹೊಲಾ ಕೊಡುತೀವಿ ಅಂತ ಆಶಾ ತೋರಿಸಿದರು. ಏನೇನೋ ಬೆದರಿಕೆ ಹಾಕಿದರು. ಚಿಮಣಾಜಿಯೂ ಬಹಳ ಹೇಳಿ ನೋಡಿದ. ಹೊಲಾ ಮಾತ್ರ ಬಿಡಬಾರದು ಅಂತ ನಾನೊಬ್ಬ ಹಟ ಹಿಡಿದು ಕಡೀತನಕ ಬಡದಾಡ ಲಿಕ್ಕೆ ತಯಾರಾಗಿ ನಿಂತಿನಿ. ಅವರ ವಿರುದ್ಧ ನಿಂತವ ಬದುಕಿ ಹ್ಯಾಂಗ ಉಳೀತಾನ ನೋಡೂನು ಅಂತ ಅವರೂ ಹಟಕ್ಕೆ ಬಿದ್ದು ಖಟ್ಲೀ ಹಾಕಿ ದ್ದಾರೆ. ”

“ ಅವರು ಮನೆಯಿಂದ ಮಾಡುವದಾಗಿ ಸಿದ್ಧವಾಗಲು ಸಾಧ್ಯವಿದೆ ಯೇನು ? ”

“ ಆದರೂ ಆದೀತು. ಅವರ ಕಡೆಗೂ ಇಬ್ಬರು ಸಾಕ್ಷಿಗಳಿದ್ದಾರೆ. ”

“ ಯಾರು ? ”

“ ಹಳ್ಳದ ದಂಡೆಯ ಮ್ಯಾಲ ಅವರ ತೋಟಾ ಮಾಡುತಾನಲ್ಲ–ಸಿದ್ದಪ್ಪ ಒಬ್ಬ. ಸಾಹುಕಾರ ಧರ್ಮಣ್ಣ ಒಬ್ಬ. ”

“ ಏನೆಂದು ಸಾಕ್ಷಿ ಹೇಳುತ್ತಾರೆ ಅವರು ? ”

“ ರಾಯರು ಮಲ್ಲಾಪುರದಾಗ ಮನೆಯಿಂದ ಒಕ್ಕಲುತನ ಮಾಡುತಾರ ಅಂತ. ಆ ಮಾತು ಕೋರ್ಟಿನೊಳಗೆ ಸಿದ್ಧವಾಗಬೇಕು ಅಂತ ಇತ್ತೀತ್ತಲಾಗಿ ನಾಲ್ಕು ಎತ್ತು ಖರೀದಿ ಮಾಡಿ ತಂದು ಕಟ್ಟಿದ್ದಾರೆ. ರಾಯರ ಮೊಮ್ಮಗ ರಮೇಶ ಅಂತ ಇದ್ದಾನಲ್ಲ, ಅವ ಆಗಾಗ ಇಲ್ಲಿಗೆ ಬಂದು ಹೋಗುತಿರುತಾನ. ಅವನು ಇಲ್ಲೇ ಇದ್ದುಕೊಂಡು ಒಕ್ಕಲುತನ ಮಾಡುತಾನಂತ ರಾಯರು ಸಾಧಿ ಸಲಿಕ್ಕೆ ಹೊಂಟಿದ್ದಾರ. ”

“ ಅವನಿಗೆ ನೇಗಿಲು ಆದರೂ ಹಿಡಿಯುವದು ಗೊತ್ತಿದೆಯೇನು ? ” ಎಂದ ಸದಾಶಿವ.

“ ಅವನ್ಯಾತಕ್ಕ ನೇಗಿಲು ಹಿಡೀಬೇಕ್ರೀ ? ಆಳುಗಳಿಗೇನು ಕಡಮೆ ಅವ ರಿಗೆ ? ಆಳು ಹಚ್ಚಿ ಮಾಡಿದರೂ ಸ್ವತಃ ಒಕ್ಕಲತನ ಮಾಡಿದ ಹಾಂಗ ಅಂತ ಕಾಯ್ದೆದೊಳಗೇ ಹೇಳುತಾರಲ್ಲ. ”

“ ಈ ಕಾಯ್ದೆ ತಯಾರಿಸಿದವರೂ ಜಮೀನ್ದಾರರೇ ” ಎಂದ ಈಶ್ವರ.

“ ಅವರೂ ಆಳುಗಳನ್ನು ದುಡಿಸಿ ಕೂತು ತಿನ್ನತಕ್ಕವರು. ಅವರು ತಮಗೆ ಅನುಕೂಲವಾಗುವ ಹಾಗೆ ಕಾಯ್ದೆ ಮಾಡುವದೂ ಸಹಜವೇ ಅಲ್ಲವೇನು ? ”

“ ಈಗಲಾದರೂ ಗೊತ್ತಾಯಿತೋ ಇಲ್ಲೋ ಪ್ರಭಣ್ಣಾ, ಈ ಸರಕಾರ ಯಾರದು ಅನ್ನುವದು ? ”

“ ಯಾರದು ಅಂತೀರಿ ನೀವು ? ”

“ ಇನ್ನೂ ನಿನಗೆ ಗೊತ್ತಾಗಲಿಲ್ಲ ಅಂದಂತಾಯಿತಲ್ಲ. ನಿಮ್ಮಂಥದರ ಮುಂದೆ ಹೇಳುವದೆಂದರೆ ಅಡವಿಯೊಳಗಿನ ಗಿಡದ ಮುಂದೆ ಭಾಷಣ ಮಾಡಿದಂತೆ. ” ಬೇಸರದ ಧ್ವನಿಯಲ್ಲಿ ಹೇಳಿದ ಸದಾಶಿವ

ಪ್ರಭಣ್ಣಾ ರೇಗಿ ಹತ್ತು ಹದಿನೈದು ನಿಮಿಷ ಮೌನವಾಗಿ ಕುಳಿತುಕೊಂಡಿದ್ದ. ಅವನು ಹಾಗೆ ಮೇಲಿಂದ ಮೇಲೆ ರೇಗುವುದನ್ನು ಕಂಡು ಈಶ್ವರನಿಗೆ ಬಲು ಮೋಜೆನ್ನಿಸದಿರಲಿಲ್ಲ.

“ ಕುತ್ತಿಗೆಯ ವರೆಗೆ ಬಂದರೂ ಏನೂ ತಿಳಿಯುವದಿಲ್ಲವಲ್ಲ ಇಂಥವರಿಗೆ. ಕಾಂಗ್ರೆಸ್ ರಾಜ್ಯ ಅಂದರೆ ಬಂಡವಾಳಶಾಹಿಗಳ ರಾಜ್ಯ ಅನ್ನುವುದನ್ನು ತಿಳಿದುಕೊಳ್ಳುವಷ್ಟು ಕೂಡ ಬುದ್ಧಿಯಿಲ್ಲ ” ಎಂದ ಸದಾಶಿವ

ಕಾಂಗ್ರೆಸ್ ಸಂಸ್ಥೆಯ ಬಗೆಗೆ ಅಂಧಶ್ರದ್ಧೆಯಿರಿಸಿಕೊಂಡು ಬಂದಿದ್ದ ಪ್ರಭಣ್ಣನಿಗೆ ಸದಾಶಿವನ ಮಾತಿನಿಂದಾಗಿ ಬಹಳ ಅವಮಾನವಾದಂತಾಯಿತು. ರಾಜಕೀಯದ ಬಗೆಗೆ ಅವನಿಗಿದ್ದ ಜ್ಞಾನ ಅತ್ಯಲ್ಪವಾದುದಾಗಿದ್ದರೂ ದಿನ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದ ನಾಯಕರ ಭಾಷಣಗಳನ್ನು ನೆನಪಿಟ್ಟುಕೊಂಡು ಅವುಗಳನ್ನೆ ಉರುಹೊಡೆಯುತ್ತ ತನಗೂ ರಾಜಕಾರಣ ತಿಳಿದಿದೆಯೆಂದು ತೋರಿಸಿಕೊಳ್ಳುವ ಹವ್ಯಾಸ ಅವನದಾಗಿತ್ತು.

“ ಕಾಂಗ್ರೆಸ್ ಅಂದರೆ ಗಾಂಧೀ ಸಂಸ್ಥೆ. ಬಂಡವಾಳಶಾಹಿಗಳದ್ದು ಯಾಕಾದೀತು ? ಇದೆಲ್ಲಾ ಕಮ್ಯುನಿಸ್ಟರ ಅಪಪ್ರಚಾರ ” ಎಂದ ಪ್ರಭಣ್ಣಾ.

“ ಕಮ್ಯುನಿಸ್ಟರೆಂದರೆ ಯಾರು, ಅವರ ವಿಚಾರಗಳೇನು ಅನ್ನುವದಾದರೂ ಗೊತ್ತಿದೆಯೇನು ನಿಮಗೆ ? ” ಎಂದು ನಗುತ್ತಲೇ ಕೇಳಿದ ಈಶ್ವರ.

" ಅವರ ತಳಾ ಬುಡಾ ಎಲ್ಲಾ ಗೊತ್ತೈತಿ. ಗಾಂಧೀ ಸರಕಾರಾನ್ನ ಬುಡಮ್ಯಾಲ ಮಾಡಿ ರಶಿಯಾದ ರಾಜ್ಯ ಸ್ಥಾಪಿಸೂದಕ್ಕ ಹೊಂಚು ಹಾಕುತಾ ಇದ್ದಾರ ಆ ಫುಂಡರು. ಬಾಂಬು ಹಾಕೂದು, ರೇಲ್ವೆ ಗಾಡಿ ಕೆಡವ್ಹೂದು, ಜಮೀನ್ದಾರರನ್ನ ಕೊಂದು ಹಾಕೂದು ಇಂಥಾ ಹಿಂಸಾ ಮಾಡುವ ಕಮ್ಯುನಿಸ್ಟರನ್ನ ದೇಶದಾಗ ಸುದ್ಧಾ ಇರಗೊಡಬಾರದು."

ಈಶ್ವರ ಮತ್ತೂ ನಗುತ್ತ ಕೇಳಿದ: "ಅವರೆಲ್ಲಿಗೆ ಹೋಗಬೇಕು ಅಂತೀರಿ?"

" ಹೋಗಬೇಕು ರಶಿಯಾಕ್ಕ. "

" ಸರದಾರ ಪಟೇಲರ ರಿಕಾರ್ಡು ಹಚ್ಚಿದ್ದಾನೆ ಪ್ರಭಣ್ಣ " ಎಂದ ಸದಾಶಿವ. ಆ ಮಾತು ಪ್ರಭಣ್ಣನಿಗೆ ಪೂರ್ತಿಯಾಗಿ ಅರ್ಥವಾಗಲಿಲ್ಲ.

" ಕಮ್ಯುನಿಸ್ಟರು ಹಿಂಸಾವಾದಿಗಳು ಅಂತ ನಿಮಗೆ ಸಿಟ್ಟು—ಅವರ ಬಗ್ಗೆ ಹೀಗೆ ದ್ವೇಷದಿಂದ ಮಾತಾಡುವದು ಅಹಿಂಸಾವಾದವೇನ್ರೀ ಪ್ರಭಣ್ಣ? ಗಾಂಧೀಜೀ ಎಂದಾದರೂ ಹೀಗೆ ಅಕ್ಕಸದಿಂದ ಮಾತಾಡುತಿದ್ದರೇನು?"

" ಎಲ್ಲರೂ ಗಾಂಧಿಯ ಹಾಂಗs ಆಗಲಿಕ್ಕೆ ಎಲ್ಲಿ ಶಕ್ಯ ಐತಿ?"

" ಹೂಂ. ಹೀಗೆ ಒರ್‍ರಿ ದಾರಿಗೆ. ಅಹಿಂಸಾವಾದಿಗಳೆಂದು ಹೇಳಿಕೊಳ್ಳುವ ನಮ್ಮಂಥವರಿಗೇ ಇನ್ನೂ ಗಾಂಧಿಯವರ ತತ್ವಗಳಂತೆ ನಡೆಯಲು ಸಾಧ್ಯವಾಗಿಲ್ಲ ಅಂದ ಮೇಲೆ ಬೇರೆ ತತ್ವ ನಂಬಿರುವ ಕಮ್ಯುನಿಸ್ಟರನ್ನು ನೀವು ಸಹಾನುಭೂತಿಯಿಂದ ನೋಡಬೇಕು. ಹೌದೋ ಅಲ್ಲವೋ?"

" ಕಮ್ಯುನಿಸ್ಟರೆಂದರ ದೇಶದ್ರೋಹಿಗಳು. ಅಂಥವರಿಗೆ ಸಹಾನುಭೂತಿ ತೋರಿಸೂದು ಅಂದರ ಹಾವಿಗೆ ಸಹಾನುಭೂತಿ ತೋರಿಸಿದ ಹಂಗ. ನೀವೂ ಅವರೂ ಒಂದs ಇದ್ದಂಗ ಕಾಣುತ್ತೈತಿ. ನಿಮ್ಮಂಥವರ ಸಂಗಡ ಏನು ಬಡಿದಾಡೂದು" ಎನ್ನುತ್ತಾ ಪ್ರಭಣ್ಣ ಎದ್ದು ಹೊರಟು ಹೋದ.

ಈಶ್ವರ ವಿಷಾದಪೂರಿತ ನಗು ಬೀರಿ ಸುಮ್ಮನಾದ. ಸದಾಶಿವ ಮಾತನಾಡಲಿಲ್ಲ.

ಊಟ ನಡೆದಿದ್ದ ಹಾಗೆ ಮಹಾದೇವಪ್ಪ ಕೇಳಿದ:

" ಮುಂದೆ ಏನು ವಿಚಾರ ನಿನ್ನದು ಸದಾಶಿವ?"

" ಯಾವುದರ ವಿಚಾರ ? "

" ಇನ್ನಾದರೂ ಮನೆಯ ಕಡೆ ಲಕ್ಷ್ಯ ಕೊಡುತ್ತೀಯೋ ಅಥವಾ. . "

ಉತ್ತರವೀಯುವ ಗೊಡವೆಗೆ ಹೋಗದೆ ಸದಾಶಿವ ಮೌನವಾಗಿ ಊಟ ಮುಂದುವರೆಸಿದ. ಮಹಾದೇವಪ್ಪನೂ ಅಷ್ಟಕ್ಕೆಯೆ ಮಾತು ನಿಲ್ಲಸಿದ. ತಂದೆ ಮಕ್ಕಳ ನಡುವಿನ ವಿಲಕ್ಷಣ ಸಂಬಂಧವನ್ನು ಗಮನಿಸಿದ ಈಶ್ವರನಿಗೆ ಸ್ವಾರಸ್ಯ ವೆನ್ನಿಸದಿರಲಿಲ್ಲ.

ಸಾಯಂಕಾಲ ಹೊಲಗಳ ಕಡೆ ತಿರುಗಾಡಿಕೊಂಡು ಬರಲು ಹೋಗಿದ್ದಾಗ ಈಶ್ವರ ಕೇಳಿದ :

" ನಿಮ್ಮ ತಂದೆಯವರಿಗೆ ಸಿಟ್ಟೇನ್ರಿ ನಿಮ್ಮ ಮೇಲೆ ಸದಾಶಿವ ? "

" ಸಿಟ್ಟೇನೂ ಇರಲಿಕ್ಕಿಲ್ಲ. ಸಮಾಧಾನ ಇಲ್ಲ ಅನ್ನುವದು ಮಾತ್ರ ನಿಜ. ಅವರು ಪಕ್ಕಾ ಗಾಂಧೀವಾದಿ. ನಾನು ಮಾಡುವ ಕೆಲಸವೊಂದೂ ಅವರಿಗೆ ಒಪ್ಪಿಗೆಯಿಲ್ಲ. "

" ಎಲ್ಲರಂತೆ ನೀವೂ ಮದುವೆ ಮಾಡಿಕೊಂಡು ಹೊಲ ಮನೆ ನೋಡಿ ಕೊಂಡು ಸಂಸಾರ ಸಾಗಿಸಬೇಕು ಅಂತ ಇದ್ದೀತು ಅವರ ಮನಸ್ಸು.

" ಹೌದು. ಆದರೆ ನನಗೆ ಮಾತ್ರ ಎಲ್ಲರಂತೆ ಇರಲು ಮನಸ್ಸಿಲ್ಲವಲ್ಲ. ಜಗತ್ತಿನಲ್ಲಿನ ಕೋಟಿಗಟ್ಟಲೆ ಜನರು ಮದುವೆಯಾಗಿ ಸಂಸಾರ ಸಾಗಿಸಿ ಮಕ್ಕಳನ್ನು ಹಡೆದು ಸತ್ತುಹೋಗುತ್ತಾರೆ. ಅವರೆಲ್ಲರಂತೆ ನಾನೂ ಮಾಡಹೊರಟರೆ ನನ್ನ ವೈಶಿಷ್ಟ್ಯ ಏನುಳಿಯಿತು ? "

ಈಶ್ವರ ಚಕಿತನಾಗಿ ಪ್ರಶ್ನಿಸಿದ :

" ನಿಮ್ಮ ವೈಶಿಷ್ಟ್ಯವಾದರೂ ಏನಿರಬಹುದು ಹಾಗಾದರೆ ? "

" ಎಲ್ಲರ ಹಾಗೆ ಮಾಡದೆ ಏನಾದರೊಂದು ವಿಶಿಷ್ಟ ಕೆಲಸ ಮಾಡುವುದೇ ನನ್ನ ವೈಶಿಷ್ಟ್ಯ. ಭಗತಸಿಂಗ, ನೇತಾಜಿ ಬೋಸ್ ಇವರ ಹಾದಿಯಲ್ಲಿ.... " ಎಂದು ಹೇಳುತ್ತಿದ್ದ ಸದಾಶಿವ ಥಟ್ಟನೆ ಮಾತು ನಿಲ್ಲಿಸಿ ಅಂತರ್ಮುಖಿಯಾಗಿ ಕುಳಿತುಕೊಂಡ.

ಎಮ್ಮೆಗಳನ್ನು ಬಿಟ್ಟುಕೊಂಡು ಮನೆಯ ಕಡೆ ಹೊರಟಿದ್ದ ರೈತನೊಬ್ಬ ಹತ್ತಿರ ಬಂದು ಕೇಳಿದ :

“ ಯಾವಾಗ ಬಂದಿ ಸದಾಶಿವಣ್ಣಾ ? ”

“ ಮಧ್ಯಾಹ್ನ. ಕೂಡು ಕಾಡಪ್ಪ. ಚೆನ್ನಾಗಿದ್ದೀಯಾ ? ”

“ ಏನು ಚಲೋನೋ ಬಿಡಣ್ಣಾ. ಮೂರು ತಿಂಗಳಾತು ನೋಡು, ಹೊಲಾನೂ ಕಳಕೊಂಡು ಕುಂತಿದ್ದೀನಿ. ”

“ ಯಾಕೆ ? ಏನಾಯಿತು ? ”

ಕಾಡಪ್ಪ ಮುಂಡಿಯೂರಿ ಕುಳಿತುಕೊಂಡು, ವಿಷಾದ ಬೆರೆತ ಧ್ವನಿಯಲ್ಲಿ ಹೇಳತೊಡಗಿದ :

“ ನರಹರಿರಾಯರ ಎಂಟು ಎಕರೆ ಹೊಲಾ ನಾ ಹಿಡಿದಿದ್ದೆನಲ್ಲಾ, ಲಾವಣಿಗೆ. ಅದನ್ನ ಅವರು ಮಾರಲಿಕ್ಕೆ ತೆಗೆದರು. ಧರ್ಮಣ್ಣ ಕೊಂಡುಕೊಂಡು ಮನೀಲೆ ಒಕ್ಕಲತನ ಮಾಡುತೀನಂತ ಹೇಳಿ ದಾವಾ ಹಾಕಿ ಬಿಡಿಸಿಕೊಂಡ. ”

ಪ್ರಭಣ್ಣನದೂ ಅದೇ ಕತೆ ; ಕಾಡಪ್ಪನದೂ ಅದೇ ಕತೆ. ದೇಶದಲ್ಲಿನ ಬಹು ಸಂಖ್ಯಾತ ರೈತರದೆಲ್ಲ ಅದೇ ಕತೆ.

ಈಶ್ವರ ಕೇಳಿದ :

“ ಹೊಲ ಕೊಂಡುಕೋ ಅಂತ ನಿನಗೇ ಮೊದಲು ಕೇಳಿದರೋ ಇಲ್ಲೋ ರಾಯರು ? ”

“ ಕೇಳಿದರು. ಹದಿನೈದು ಸಾವಿರ ರೂಪಾಯಿ ಎಲ್ಲಿಂದ ತರಲಿರೀಯಪ್ಪಾ ನಾ ? ಮನಿಯಾಗ ತಿನ್ನಾಕ ಜೋಳ ಇರೂದಿಲ್ಲ. ”

“ ಅಪೀಲು ಮಾಡಿದಿಯೋ ಇಲ್ಲೋ ? ”

“ ಮುಂಬಯಿ ತನಕ ಹೋಗಿ ಬಡಿದಾಡಿದರ ಹೊಲಾ ಉಳೀತೈತಿ ಅಂತ ವಕೀಲರು ಹೇಳಿದ್ದಕ್ಕ ಮನಿಯೊಳಗಿನ ಎತ್ತು ಮಾರಿ ಐದುನೂರು ರೂಪಾಯಿ ಖರ್ಚು ಮಾಡಿದ್ದಾತು. ಬಡವರನ್ನ ಯಾರು ಕೇಳಬೇಕ್ರೀ ಈಗಿನ ಕಾಲದಾಗ ? ಹೊಲಾನೂ ಹೋತು. ಎತ್ತೂ ಹೋದುವು ” ಎಂದು ನುಡಿದು ನಿಟ್ಟುಸಿರು ಬಿಟ್ಟ ಕಾಡಪ್ಪ. ಅವನ ಮುಗ್ಧನೇತ್ರಗಳಲ್ಲಿ ಅಶ್ರುಬಿಂದುಗಳೆರಡು ಕಾಣಿಸಿಕೊಂಡುವು. ಗದ್ಗದವೆನ್ನುವ ಧ್ವನಿಯಲ್ಲಿ ಅವನು ಮತ್ತೆ ಹೇಳಿದ :

“ ಮಂತ್ರಿಗಳನ್ನ ಭೆಟ್ಟಿಯಾಗಿ ಅವರ ಕಿವಿಯ ಮ್ಯಾಲ ಈ ಸಂಗತಿ ಹಾಕಿದರ ಹೊಲಾ ಹೊರಳಿ ಕೊಡಿಸುತಾರಂತ ವಕೀಲರು ಹೇಳಿದರು. ಮೊನ್ನೆ

ಮೊನ್ನಿ ಮುಖ್ಯಮಂತ್ರಿ ಕಳ್ಳೀಕಾಯಿಗೆ ಬಂದಾಗ ಅಲ್ಲಿಯ ತನಕ ಹೋಗಿ ಅವರನ್ನ ಭೆಟ್ಟಿಯಾಗೂದಕ್ಕ ಖಟಪಟ ಮಾಡಿದಿನಿ. ಅವರ ಸುತ್ತಮುತ್ತ ಇದ್ದ ದೊಡ್ಡ ಮಂದಿ ನನ್ನ ಬೆದರಿಸಿ ಕಳಿಸಿದರು. ಕಡೀಕ ಸಭಾ ಕೂಡಿದಾಗಾದರೂ ಎದ್ದು ಅವರಿಗೆ ವಿನಂತಿ ಮಾಡಿಕೊಳ್ಳಬೇಕಂತ ಹಾಂಗ ಮಾಡಿದಿನಿ. ಗದ್ದಲಾ ಮಾಡುತೀಯಾ ಮಗನs ಅಂತ ಗದರಿಸಿ ಪೋಲೀಸ ನನ್ನ ಎಳಕೊಂಡು ಹೋಗಿ ಎರಡು ಹೊಡೆದು ದೂರ ಅಟ್ಟಿಬಿಟ್ಟ...."

ಸ್ವಲ್ಪ ತಡೆದು, ಒಂದು ಸಲ ಕೆಮ್ಮಿ, ರಭಸದಿಂದ ಉಗುಳಿ ಕಾಡಪ್ಪ ಕೇಳಿದ :

"ಸ್ವರಾಜ್ಯ ಬಂದರ ಬಡವರಿಗೆಲ್ಲಾ ಸುಕಾ ಸಿಗುತೈತಿ ಅಂತ ನಾವು ತಿಳಿದಿದ್ದಿವಿ. ಕಾಂಗ್ರೆಸದವರು ಮಂತ್ರಿಗಳಾದರ ನಮಗೆಲ್ಲಾ ಚಲೋ ಆಗುತೈತಿ ಅಂತ ನಂಬಿದ್ದಿವಿ. ಅದಕ್ಕೇ ಹುರುಪಿನಿಂದ ಹೋಗಿ ಅವರಿಗೆ ವೋಟು ಕೊಟ್ಟಿದ್ದಿವಿ. ಕಾಂಗ್ರೆಸದವರ ರಾಜ್ಯ ಬಂದರೂ ನಮ್ಮಂಥವರು ಹೊಲಾ ಕಳಕೊಂಡು ತಿನ್ನೂದಕ್ಕಿಲ್ಲದ ಸಾಯುವ ಪರಸಂಗ ಬಂತಲ್ಲ ಸದಾಶಿವಣ್ಣಾ ? ಹಿಂಗ್ಯಾಕ ಆತು ಇದು, ಆಂ, ಹಿಂಗ್ಯಾಕ ಆತು ? "

ಕಾಡಪ್ಪನಿಗೆ ಏನೆಂದು ಉತ್ತರವೀಯಬೇಕು ? ಸದಾಶಿವನ ಮುಷ್ಟಿಗಳೆರಡೂ ತಾವಾಗಿಯೆ ಬಿಗಿದುಕೊಂಡುವು. ಸಾವಿರಾರು ರೈತರಂತೆ ಕಾಡಪ್ಪನೂ ಒಬ್ಬ ಸಾಮಾನ್ಯ ರೈತ. ಓದಲು ಕಲಿತವನಲ್ಲ, ಬರೆಯಲು ಕಲಿತವನಲ್ಲ, ಪ್ರಭಣ್ಣನ ಹಾಗೆ ಕಾಂಗ್ರೆಸ್ ಸಂಸ್ಥೆಗಾಗಿ ಕೆಲಸ ಮಾಡಿದವನೂ ಅಲ್ಲ. ಆದರೂ ಆ ಸಂಸ್ಥೆಯ ಬಗೆಗೆ ಅಂಥ ಅಭಿಮಾನವಿಟ್ಟುಕೊಂಡು ಬಂದವನು. ಕಾಂಗ್ರೆಸ್ಸಿನ ಪ್ರತಿಗಾಮಿ ಸ್ವರೂಪದ ವಿಚಾರವಾಗಿ ಅವನೆದುರಿಗೊಂದು ಭಾಷಣ ಬಿಗಿಯುವ ಮನಸ್ಸು ಬರಲಿಲ್ಲ ಸದಾಶಿವನಿಗೆ.

ಈಶ್ವರ ಹೇಳಿದ :

" ಇದಕ್ಕೆಲ್ಲಾ ಒಂದೇ ಒಂದು ಕಾರಣ ಇದೆ ಕಾಡಪ್ಪ. ಆ ಕಾರಣವನ್ನ ನಾವು ದೂರ ಮಾಡಬೇಕು. "

ಹತಾಶನಾಗಿ ಕುಳಿತಿದ್ದ ಕಾಡಪ್ಪನ ಮುಖದಲ್ಲಿ ಆಶೆಯ ಹೊಳಪು ಮಿನುಗಿದಂತಾಯಿತು.

" ಏನು ಮಾಡಬೇಕು ಹೇಳಿರಿ. ಏನು ಮಾಡಬೇಕು? ನೀವು ಹೇಳಿದರ ಪ್ರಾಣಾ ಕೊಡೂದಕ್ಕ ಪ್ರಾಣಾ ತಗೊಳ್ಳೂದಕ್ಕ ಸುದ್ದಾ ತಯಾರಿದೀನಿ ನಾ. "

" ಅದರದೇನೂ ಅಗತ್ಯ ಇಲ್ಲ ಕಾಡಪ್ಪ. ಬಡೆಯುವ ಹೊಡೆಯುವ ಕೆಲಸದಿಂದೇನೂ ಉಪಯೋಗ ಆಗುವದಿಲ್ಲ. ಧರ್ಮಣ್ಣಾ ನರಹರಿರಾಯರಂಥ ಜಮೀನ್ದಾರರ ಕೈಯಲ್ಲಿ ಸಿಕ್ಕಿರುವ ಕಾಂಗ್ರೆಸಿಗೆ ಬದಲು ಮತ್ತೊಂದು ಪಕ್ಷ ಕಟ್ಟಬೇಕು. ಚುನಾವಣೆಯಲ್ಲಿ ಕಾಂಗ್ರೆಸ್ಸನ್ನು ಸೋಲಿಸಬೇಕು. "

" ಯಾಕಾಗಲೊಲ್ಲದು ! ಪಕ್ಷ ಕಟ್ಟಿರಲ್ಲ. ನೀವು ಹೇಳಿದ್ದು ಮಾಡೂದಕ್ಕ ತಯಾರಿದೀನಿ ನಾ. "

" ಇಂಥವರನ್ನೇ ನಂಬಿಕೊಂಡು ಪಕ್ಷ ಕಟ್ಟಬಹುದು ಸದಾಶಿವ. ಪ್ರಭಣ್ಣಾನಂಥವರು ಅತ್ತೂ ಇಲ್ಲ, ಇತ್ತೂ ಅಲ್ಲದ ಹಾಗಾಗುತ್ತಾರೆ. "

" ನಿಜ " ಎಂದ ಸದಾಶಿವ.

" ರೈತ ಕೂಲಿಕಾರರದೊಂದು ಪಕ್ಷ ಕಟ್ಟಬೇಕಂತ ಸದಾಶಿವಣ್ಣಾ ನಿಶ್ಚಯ ಮಾಡಿದ್ದಾರೆ. ರೈತರೆಲ್ಲಾ ಸೇರಬಹುದೇನು ಅದರಲ್ಲಿ, ಕಾಡಪ್ಪ ? "

" ಎಲ್ಲಾರೂ ಅಂದರೆ ಎಲ್ಲಾರೂ ಕೂಡಲಿಕ್ಕಿಲ್ಲರೀ. ನನ್ನ ಹಾಂಗ ಹೊಲಾಗಿಲಾ ಕಳಕೊಂಡು ಗತಿಗೇಡಿಗಳಾಗಿ ಕುಂತವರೇನೋ ಬಂದಾರು. ಪ್ರಭಣ್ಣಾ, ಮಲ್ಲಪ್ಪರಂಥವರು ಯಾಕ ಬಂದಾರು ಹೇಳಿರಿ. "

ಒಂದು ನಿಮಿಷ ಸುಮ್ಮನಿದ್ದು ಮತ್ತೆ ಕೇಳಿದ ಈಶ್ವರ :

" ನಿನಗೆ ಮಕ್ಕಳೆಷ್ಟು ಮಂದಿ ಕಾಡಪ್ಪ ? "

" ನಾಕು ಹುಡುಗರದಾರರೀ. ಇನ್ನೂ ಕುನ್ನಿಗಳು. "

" ಹೊಲ ಹೋಯಿತಲ್ಲ ಕಾಡಪ್ಪ. ಈಗ ಹ್ಯಾಗೆ ಸಾಗಿಸಿದ್ದೀ ಸಂಸಾರ?"

" ಏನ ಹೇಳೂದ್ರೀ ನಮ್ಮ ಸಂಕಟಾನ್ನ ! ಹೋದ ವರ್ಷದ್ದು ಸ್ವಲ್ಪ ಜೋಳ ಉಳಿದಿತ್ತು ಅಂತ ಹ್ಯಾಂಗೋ ನಡದೈತಿ. ಇಲ್ಲದಿದ್ದರ ಎಲ್ಲರೂ ವಿಷಾ ಕುಡಿದು ಸಾಯಬೇಕಾಗುತ್ತಿತ್ತು. "

" ಬೇರೆ ಏನಾದರೂ ಕೆಲಸ ಮಾಡಬಹುದಲ್ಲ ? "

" ಕೆಲಸ ? ಎಲ್ಲಿದಾವ ಕೆಲಸ ? ಇಲ್ಲೇನು ಒಂದು ಗಿರಣಿ ಐತ್ಯೋ,

ಒಂದು ಕಾರಖಾನೆ ಐತ್ಯೋ ; ಏನೈತಿ ? ಮನಿಯಾಗ ನೂತು ಹೊಟ್ಟಿ ತುಂಬಿ ಕೊಳ್ಳಿರಿ ಅಂತ ಹೇಳುತಾರ ಕಾಂಗ್ರೆಸ ಮಂದಿ. ನಾನೂ ನನ್ನಾಕಿ ಇಬ್ಬರೂ ನೂತರೂ ಒಂದು ಸೇರು ಜೋಳ ಸಿಗಾಕಿಲ್ಲ. ಈ ಕಾಂಗ್ರೆಸದವರದೆಲ್ಲಾ ಇಂಥಾ ಜೊಳ್ಳು ಮಾತೇ. ತಾವು ಮಾತ್ರ ನೂರಿನ್ನೂರು ರೂಪಾಯಿ ಪಗಾರ ಹೊಡಿಯುತಾ ಅರಾಮು ಇದ್ದಾರ. ಅದೇನೋ ಸರ್ವೋದಯ ಅಂತ ಹೇಳು ತಾರಲ್ರೀ.... "

" ಸರ್ವೋದಯ. "

" ನಮಗ ಮಾತ್ರ ನೂಲಿರಿ ಅನ್ನೂದು. ತಾವು ಮಾತ್ರ ಸಕ್ಕರೀ ತುಪ್ಪಾ ಹೊಡಿಯೂದು. ನಮ್ಮೂರವನೇ ಆ ಮಲ್ಲೇಶಿ ಅಂತ ಇದ್ದದಲ್ಲ ಸದಾಶಿವಣ್ಣಾ, ನರಹರಿರಾಯರ ಬಾಲಬಡಕ. ಅವಗ ಈಗ ಸರ್ವೋದಯದಾಗ ನೌಕರಿ ಕೊಟ್ಟದ್ದಾರ. ಅವ ಏನು ಕಲಿತವನೇ, ಬಿಟ್ಟವನೇ ? ಅವನ ಮಾರಿ ನೋಡಿ ದರ ಯಾರೂ ಹತ್ತು ರೂಪಾಯಿ ಕೂಡಾ ಪಗಾರ ಕೊಡೂದಕ್ಕ ತಯಾರ ಆಗಾಕಿಲ್ಲ. ಇಂಥಾವಗ ಆರಿಪ್ಪತ್ತು ರೂಪಾಯಿ ಪಗಾರ ಅಂತ. ಎರಡು ವರ್ಷ ದಾಗ ಒಂದು ಹೊಲಾ ಖರೀದಿ ಮಾಡಿದ ಮಗ. ನಾವು ಮಾತ್ರ ಕೈಯಾಗಿ ದ್ದದ್ದೂ ಕಳಕೊಂಡು ಕುಂತಿವಿ. ಇದೆಂಥಾ ಅನ್ಯಾಯ ಬಂತಪಾ ಸದಾ ಶಿವಣ್ಣಾ ? "

ಸದಾಶಿವ ಆಗಲೂ ಮೌನವಾಗಿದ್ದ.

" ಹೂಂ. ಹೋಗುತೀನಿ ನಾ. ಹೊತ್ತಾತು. ಮತ್ತ ಬಂದು ಭೆಟ್ಟಿಯಾ ಗುತೀನಿ. ಆ ಪಕ್ಷ ಮಾಡೂದು ಮಾತ್ರ ಬಿಡಬ್ಯಾಡ ಸದಾಶಿವಣ್ಣಾ. ಈ ಟೊಪಿಗೀ ಮಂದಿಯನ್ನ ಹಿಂಗs ಬಿಡೂದು ಬ್ಯಾಡ. ಇಲೇಶನದಾಗ ಅವರನ್ನ ಮಣ್ಣು ತಿನ್ನಿಸಿ ಬಿಡಬೇಕು ನೋಡು. "

ಅಷ್ಟು ಹೇಳಿ ಕಾಡಪ್ಪ ಮೆಲ್ಲನೆದ್ದು, ಹೊಲದಲ್ಲಿ ಮೇಯುತ್ತಿದ್ದ ಎಮ್ಮೆ ಗಳನ್ನಟ್ಟಿಕೊಂಡು ಹೊರಟುಹೋದ.

ನಾಲ್ಕೈದು ನಿಮಿಷ ಮೌನ. ಗುಡ್ಡದಾಚೆಗೆ ನಿಧಾನವಾಗಿ ಇಳಿದು ಹೋಗುತ್ತಿದ್ದ ಸೂರ್ಯಬಿಂಬವನ್ನು ದಿಟ್ಟಿಸುತ್ತ ಕದಲದೆ ಕುಳಿತಿದ್ದ ಸದಾಶಿವ. ಅವನ ಮನಸ್ಸಿನಲ್ಲಿ ಅಲೆಯುತ್ತಿದ್ದ ವಿಚಾರಗಳ ಹಾಗೆ ಆಕಾಶದಲ್ಲಿ ಮೋಡಗಳು

ಅಲೆಯುತ್ತಿದ್ದುವು. ಪಡುವಲದ ಮಧ್ಯಭಾಗ ಚಿನ್ನದ ಕಾಂತಿ ತಳೆದು ರಂಜಿಸು ತ್ತಿತ್ತು. ಒಂದೆರಡು ನಿಮಿಷಗಳಲ್ಲಿಯೆ ಬಿಳಿಯ ಮೋಡಗಳು ಮನೋಹರವಾದ ಬೂದಿ ಬಣ್ಣ ತಳೆದುವು. ಸಂಗೀತದ ಅಲೆಗಳಂತೆ ತೀಡುತ್ತಿತ್ತು ಗಾಳಿ. ನವಿಲಿ ನಂತೆ ಗರಿಗೆದರಿ ನಿಂತ ಮುಗಿಲಿನ ಹಿನ್ನೆಲೆಯಲ್ಲಿ ಹುಣಿಸೆಯ ಮರಗಳು ಚಿತ್ರಸ್ಥವಾಗಿ ನಿಂತಿದ್ದುವು. ಬೆಳ್ಳಕ್ಕಿಗಳ ಸಾಲು ಗಾಳಿಪಟದಂತೆ ಸುಖ ವಾಗಿತೇಲುತ್ತ ನಡೆದಿತ್ತು.

ಮತ್ತೆ ಕೆಲವು ನಿಮಿಷ ಹಾಗೆ ಕಳೆದುವು. ಚಂಚಲ ಸ್ವಭಾವದ ಮೋಡ ಗಳು ಅತ್ತಿತ್ತ ಚದರಿ ಹೋದುವು. ಈಗ ಆಕಾಶದಲ್ಲಿ ಕಂದು ಬಣ್ಣ. ಅಲ್ಲಲ್ಲಿ ಕೆಂಪು ಛಾಯೆ. ಸಮಯವುರುಳಿದ ಹಾಗೆ ಕೆಂಪು ಹೆಚ್ಚಾಗುತ್ತಿತ್ತು. ಕೆಂಪು ಬಣ್ಣದ ಅರಳೆಯ ತುಣುಕುಗಳಂತೆ ಕಾಣುತ್ತಿದ್ದ ಮೋಡಗಳಿಗೆ ಬೆಂಕಿ ಹತ್ತಿದ ಹಾಗೆ ತೋರುತ್ತಿತ್ತು. ಸದಾಶಿವನ ಎದೆಯಲ್ಲೂ ಬೆಂಕಿಯುರಿದ ಹಾಗಾ ಗಿದ್ದಿತು.

" ನಾನು ಹೊರಡಲೇ ಸದಾಶಿವ ? " ಎಂದ ಈಶ್ವರ.

" ಹಂ ? ಹೊರಡುತ್ತೀರಾ ? ಎಲ್ಲಿಗೆ ? "

" ಎಲ್ಲಿಗಂದರೆ ? —ಊರಿಗೆ. "

" ಅಲ್ಲಾದರೂ ಏನಿದೆ ಅಂಥಾ ಕೆಲಸ ? ಇದೊಂದು ದಿನ ಇಲ್ಲೇ ಇದ್ದು ಬಿಡಿರಿ. "

" ನಿಮ್ಮ ಹಾಗೆ ನಾನೇನು ಬ್ರಹ್ಮಚಾರಿಯೆ ? ಹೆಂಡತಿಯಿದ್ದಾಳೆ. ಎರಡು ಮಕ್ಕಳೂ ಇವೆ. ಮನೆ ಬಿಟ್ಟು ಮೂರು ದಿವಸವಾಯಿತು. "

" ಪತ್ರಿಕೆಗಳಿಗೆ ಬರೆಯುವದರಿಂದ ಸಂಸಾರ ಸಾಗುತ್ತದೆಯಲ್ಲವೆ ? "

" ಹ್ಯಾಗೋ ಸಾಗಿಸಿದ್ದೇನೆ ಆಯಿತು. ಹಳ್ಳಿಯಾದ್ದರಿಂದ ಹೆಚ್ಚು ಖರ್ಚು ಬರುವದಿಲ್ಲ. ಒಂದು ಗೇಣು ಹೊಲ ಇದೆ. ಅದರಿಂದ ಸ್ವಲ್ಪ ಜೋಳ, ನವಣೆ ಬರುತ್ತದೆ. ಕಾಳು ಕಡ್ಡಿ ಕೊಳ್ಳಬೇಕಾಗಿಲ್ಲ. ಅಂತೇ ರಥ ಸಾಗಿದೆ. ಸರಿ. ನಾನೀಗ ಹೊರಡುತ್ತೇನೆ. ಇನ್ನು ಎರಡು ಮೈಲು ನಡೆಯಬೇಕಲ್ಲ ? ಮುಂದೇನು ಕಾರ್ಯಕ್ರಮ ನಿಮ್ಮದು ? "

" ರೈತರನ್ನು ಸಂಘಟನೆ ಮಾಡಲು ಯತ್ನಿಸಬೇಕು. ಕಾಡಪ್ಪನಂಥವ ರನ್ನು ಹುಡುಕಿ ಕೂಡಿಸುವದು. "

" ಅಂಥವರು ಎಷ್ಟು ಮಂದಿ ಸಿಕ್ಕಾರು ಸದಾಶಿವ ? ಕೆಲವು ಕಾರ್ಯಕರ್ತರ ಬೆಂಬಲ ದೊರಕಿಸಿದರೆ ಒಳ್ಳೆಯದು. "

ಕುಳಿತ ಸ್ಥಳದಿಂದೇಳುತ್ತ ಸದಾಶಿವನೆಂದ.

" ಕಾರ್ಯಕರ್ತರೆಂದರೆ ಪ್ರಭಣ್ಣನಂಥವರು...."

" ನಮ್ಮೂರ ಹತ್ತರದ ನವಲಾಪುರದಲ್ಲಿ ಚೆನ್ನಬಸಪ್ಪ ಅಂತ ಇದ್ದಾರಲ್ಲ, ನಿಮಗೆ ಗೊತ್ತೇನು ? "

" ಉಪಚುನಾವಣೆಯಲ್ಲಿ ಕಾಂಗ್ರೆಸ್ ವಿರುದ್ಧ ನಿಂತಿದ್ದ, ಅವನೇ ಅಲ್ಲ ವೇನು ? "

" ಹೌದು. ಬಹಳ ಹುರುಪಿನ ಮನುಷ್ಯ. ಒಂದೆರಡು ಸಾರೆ ಭೆಟ್ಟಿ ಯಾದಾಗ ಕಾಂಗ್ರೆಸ್ಸಿಗರನ್ನು ಬಾಯಿಗೆ ಬಂದ ಹಾಗೆ ಬಯ್ಯುತಿದ್ದ ನನ್ನ ಮುಂದೆ. ಅವನಿಂದ ನಿಮಗೆ ಸಹಾಯ ಸಿಗಬಹುದು ಅಂತನ್ನಿಸುತ್ತದೆ. ಆಮೇಲೆ ರಾಮಾಪುರದ ಸಾಹುಕಾರ್ ಶಿವಲಿಂಗಯ್ಯನವರು. ಅವರೂ ಸಹಾಯ ಮಾಡ ಬಹುದು. "

" ನಮ್ಮದು ಬಡವರ ಪಕ್ಷವಾಗಬೇಕು ಈಶ್ವರ. ನಾವೂ ಈ ಸಾಹು ಕಾರರನ್ನು ಕಟ್ಟಿಕೊಂಡರೆ ನಮ್ಮದೂ ಇನ್ನೊಂದು ಕಾಂಗ್ರೆಸ್ಸೇ ಆದೀತಲ್ಲ ! "

" ಹಾಗೇನೂ ಆಗಲಿಕ್ಕಿಲ್ಲ. ಶಿವಲಿಂಗಯ್ಯನವರು ಸಾಹುಕಾರರಾದರೂ ಬಡವರೆಂದರೆ ಬಹಳ ಪ್ರೀತಿಯಂತೆ. ಚೆನ್ನಬಸಪ್ಪ ಅವರನ್ನು ಬಹಳ ಹೊಗಳು ತ್ತಿದ್ದ ನನ್ನ ಮುಂದೆ. "

" ಅವರಿನ್ನೂ ಕಾಂಗ್ರೆಸ್ಸಿನಲ್ಲೇ ಇರಬೇಕಲ್ಲ ? "

" ಇದ್ದೂ ಇಲ್ಲದ ಹಾಗೇ ಅನ್ನಬೇಕು. ಚೆನ್ನಬಸಪ್ಪ ಕಾಂಗ್ರೆಸಿಗೆ ವಿರುದ್ಧವಾಗಿ ಚುನಾವಣೆಗೆ ನಿಂತಾಗ ಶಿವಲಿಂಗಯ್ಯನವರು ಬಹಳ ಸಹಾಯ ಮಾಡಿದರಂತೆ. ಅವನು ಆರಿಸಿ ಬರಲಿಲ್ಲ. ಆ ಮಾತು ಬೇರೆ. "

" ಶಿವಲಿಂಗಯ್ಯನವರೂ ನಮ್ಮ ಅಪ್ಪನ ಹಾಗೆ ಹಳೆಯ ತಲೆಯವರು ಈಶ್ವರ. ಅವರಿಗೂ ನಮಗೂ ಎಷ್ಟರಮಟ್ಟಿಗೆ ಹೊಂದುವದೋ. "

" ಹೊಂದಿಕೊಂಡು ಹೋಗಲಿಕ್ಕೆ ಪ್ರಯತ್ನಿಸಬೇಕು ಸದಾಶಿವ. ರಾಜ ಕೀಯ ಪಕ್ಷ ಅಂದರೆ ಒಬ್ಬಿಬ್ಬರಿಂದಾಗುವದಿಲ್ಲ. "

" ಹೌದು. ಅದೂ ನಿಜವೇ. ಚೆನ್ನಬಸಪ್ಪ, ಶಿವಲಿಂಗಯ್ಯ ಇಬ್ಬರನ್ನೂ ಕಂಡು ಮಾತಾಡೋಣ. ಎಂದು ಹೋಗೋಣ ಅವರ ಹತ್ತರ ? "

" ಮೊನ್ನೆ ಮೊನ್ನೆ ಜೇಲಿನಿಂದ ಬಂದಿದ್ದೀರಿ. ಒಂದೆರಡು ವಾರವಾದರೂ ವಿಶ್ರಾಂತಿ ತೆಗೆದುಕೊಳ್ಳಬೇಕು ನೀವು. "

" ಜೇಲಿನಲ್ಲಿ ವಿಶ್ರಾಂತಿ ತೆಗೆದುಕೊಂಡು ತಲೆ ಕೆಟ್ಟಿದೆ ಈಶ್ವರ. ಈಗ ಒಂದು ಕ್ಷಣವನ್ನೂ ವ್ಯರ್ಥಗೊಳಿಸದೆ ಕೆಲಸ ಸುರು ಮಾಡಬೇಕು. ನೀವೂ ಯಾವಾಗಲೂ ನನ್ನ ಸಂಗಡ ಬರುವಂತಾದರೆ ಬಹಳ ಉತ್ತಮ. "

" ಒಂದು ವಿರೋಧಿ ಪಕ್ಷವಾದರೆ ನನಗೂ ಸಂತೋಷವೇ. ನಿಮ್ಮಂಥವರು ಮುಂದೆ ಬಂದಿರುವಾಗ ನಾನು ಬರದಿರುತ್ತೇನೆಯೆ ? "

೯

ಮಲ್ಲಾಪುರ, ನವಲಾಪುರ, ಕಾಡಾಪುರ ಮತ್ತು ರಾಮಾಪುರಗಳು ಮೂರು ಮೈಲುಗಳ ಪರಿಧಿಯಲ್ಲಿರುವ ಗ್ರಾಮಗಳು. ಒಂದೊಂದು ಗ್ರಾಮದ ನಡುವಿನ ಅಂತರ ಬಹಳವಾದರೆ ಒಂದೂವರೆ ಮೈಲಿಯಷ್ಟಾಗಬಹುದು. ಈ ನಾಲ್ಕು ಗ್ರಾಮಗಳಿಗೂ ನವಲಾಪುರದ ಬಳಿಯಿರುವ ರೈಲ್ವೆ ನಿಲ್ದಾಣವೊಂದೇ ಪ್ರಯಾಣದ ಕೇಂದ್ರ ಸ್ಥಾನ. ಗುಡ್ಡಗಾಡು ಸೀಮೆಯಾದುದರಿಂದ ಈ ಭಾಗ ದಲ್ಲಿ ರಾಜ ಮಾರ್ಗಗಳ ವ್ಯವಸ್ಥೆಯಿಲ್ಲ. ಅಂತೆಯೆ ಬಸ್ಸುಗಳ ಓಡಾಟವೂ ಇಲ್ಲ. ಜಿಲ್ಲೆಯ ಮುಖ್ಯ ಸ್ಥಳವಾದ ಕಳ್ಳೇಕಾಯಿಗೂ ತಾಲೂಕಿನ ಸ್ಥಳವಾದ ಉಗ್ರಪುರಕ್ಕೂ ಹೋಗಬೇಕಾದರೆ ರೈಲೇ ಗತಿ. ನವಲಾಪುರ ನಿಲ್ದಾಣದಿಂದ ಕಳ್ಳೇಕಾಯಿಗೆ ಬಹಳ ದೂರವೇನೂ ಇಲ್ಲ, ಮೂವತ್ತು ಮೈಲಿ ಅಷ್ಟೆ. ಅಂತೆಯೆ ನಾಲ್ಕು ಹಳ್ಳಿಗಳ ಮತ್ತು ಸುತ್ತಲಿನ ಹತ್ತಿಪ್ಪತ್ತು ಗ್ರಾಮಗಳ ಜನರು ದಿನವೂ ಕಳ್ಳೇಕಾಯಿಗೆ ಹೋಗಿ ಬರುತ್ತಾರೆ. ನವಲಾಪುರ, ಕಾಡಾಪುರಗಳಿಗಿಂತ ದೊಡ್ಡ ಗ್ರಾಮಗಳು ಮಲ್ಲಾಪುರ ಮತ್ತು ರಾಮಾಪುರಗಳು. ಈ ಎರಡು ಗ್ರಾಮಗಳಲ್ಲಿ ತಕ್ಕಮಟ್ಟಿಗೆ ವ್ಯಾಪಾರವೂ ನಡೆಯುತ್ತದೆ. ರಾಮಾಪುರವಂತೂ ಉಗ್ರಪುರ ತಾಲೂಕಿನಲ್ಲಿ ವ್ಯಾಪಾರದ ಪಡಮೂಲೆಯೆಂದು ಪ್ರಖ್ಯಾತಿ ಪಡೆ ದಿದೆ. ತಂಬಾಕು, ನೆಲಗಡಲೆ, ಮೆಣಸಿನಕಾಯಿ, ಬೆಲ್ಲ, ಉಳ್ಳೇಗಡ್ಡಿ, ಅರಳಿ ಮೊದಲಾದ ಕಚ್ಚಾ ಮಾಲು ಖರೀದಿ ಮಾಡಿ ಮುಂಬಯಿಗೆ ಕಳಿಸುವ ಏಳೆಂಟು ಜನ ದೊಡ್ಡ ವ್ಯಾಪಾರಸ್ಥರೂ ರಾಮಾಪುರದಲ್ಲಿದ್ದಾರೆ. ನೆಲಗಡಲೆಯ ಕಾರಖಾನೆಗಳನ್ನೂ ಅವರು ನಡಸುತ್ತಾರೆ. ಪ್ರತಿ ವರ್ಷವೂ ಲಕ್ಷಾಂತರ ರೂಪಾ ಯಿಗಳ ವ್ಯವಹಾರ ನಡೆಯುತ್ತದೆ.

ಈ ನಾಲ್ಕು ಗ್ರಾಮಗಳಿಗೂ ಸುತ್ತಲಿನ ನೂರಾರು ಗ್ರಾಮಗಳಿಗೂ ನೀರು

ಣ್ಣಿಸುತ್ತ ಹರಿಯುವ ಹಳ್ಳವೊಂದು ಈ ಭಾಗದ ಜನರನ್ನೆಲ್ಲ ಒಂದುಗೂಡಿಸುವ ನೈಸರ್ಗಿಕ ಸಾಧನಗಳಲ್ಲೊಂದಾಗಿದೆ. ಹಳ್ಳದ ದಂಡೆಗುಂಟ ತೋಟಪಟ್ಟಿಗಳನ್ನು ಮಾಡಿಕೊಂಡು ರೈತರು ಕಬ್ಬು, ಕಾಯಿಪಲ್ಯ ಬೆಳೆಯುತ್ತಾರೆ; ಸಮೀಪದಲ್ಲೇ ಇರುವ ಕಳ್ಳೀಕಾಯಿಗೆ ಕಾಯಿಪಲ್ಯವನ್ನೊಯ್ದು ಮಾರುತ್ತಾರೆ. ಬೆಲ್ಲಕ್ಕೆ ಒಳ್ಳೆಯ ಧಾರಣೆ ಬಂದಂದಿನಿಂದ ಕಬ್ಬು ಬೆಳೆಯುವವರೆಲ್ಲ ಕೈಯಲ್ಲಿ ಹಣ ಮಾಡಿಕೊಂಡು 'ಸಾಹುಕಾರ' ರಾದುದುಂಟು

ನೂರು ನೂರೈವತ್ತು ವರ್ಷಗಳ ಕೆಳಗೆ ಈ ಭಾಗದ ಭೂಮಿಯೆಲ್ಲ ಯಾವ ಕಾರಣದಿಂದಲೋ ಇನಾಂದಾರರ ಕೈಸೇರಿತು. ನವಲಾಪುರ, ಮಲ್ಲಾಪುರಗಳ ಇನಾಂದಾರರೆಂದರೆ ಕಳ್ಳೀಕಾಯಿ ಜಿಲ್ಲೆಗೇ ಪ್ರಸಿದ್ಧರಾದವರು. ಸುತ್ತಮುತ್ತಲಿನ ಭೂಮಿಯಲ್ಲಿ ಹೆಚ್ಚಿನದು ಅವರ ಒಡೆತನಕ್ಕೊಳಪಟ್ಟದು. ಲಾವಣಿಗಾಗಲಿ, ಪಾಲಿನಿಂದಾಗಲಿ ಅದನ್ನು ತೆಗೆದುಕೊಂಡು ದುಡಿಯುವವರು ಒಕ್ಕಲಿಗರು. ಗ್ರಾಮಗಳ ಗೌಡರೇ ಮೊದಲಾದ ಕೆಲವರನ್ನು ಹೊರತುಪಡಿಸಿದರೆ ಬೇರೆ ಯಾರ ಕೈಯಲ್ಲೂ ಅವರ ಒಡೆತನದ್ದಾದ ಭೂಮಿ ವಿಶೇಷವಾಗಿರಲಿಲ್ಲ. ಹತ್ತು ಎಕರೆಗಳಷ್ಟು ಸ್ವಂತ ನೆಲವುಳ್ಳವನು ಆ ಭಾಗದಲ್ಲಿ ಭಾಗ್ಯವಂತ. ಒಬ್ಬೊಬ್ಬ ಇನಾಂದಾರನಿಗಾದರೋ ಎರಡರಿಂದ ಮೂರು ಸಾವಿರ ಎಕರೆಗಳಷ್ಟು ಭೂಮಿ. ವರ್ಷಕ್ಕೆ ಮೂವತ್ತರಿಂದ ನಲವತ್ತು ಸಾವಿರದವರೆಗೂ ಅವರ ಆದಾಯ. ನವಲಾಪುರ ಮತ್ತು ಮಲ್ಲಾಪುರಗಳಲ್ಲಿ ಅರಮನೆಗಳಂಥ 'ವಾಡೆ'ಗಳನ್ನು ನಿರ್ಮಿಸಿಕೊಂಡು ರಾಜಠೀವಿಯಲ್ಲಿ ಬದುಕುತ್ತ ಬಂದಿದ್ದ ಆ ಇನಾಂದಾರರು ಹತ್ತು ಹನ್ನೆರಡು ವರ್ಷಗಳ ಹಿಂದೆಯಷ್ಟೆ ಗ್ರಾಮಗಳನ್ನು ಬಿಟ್ಟು, ಕಳ್ಳೀಕಾಯಿ ನಗರದಲ್ಲಿ ದೊಡ್ಡ ದೊಡ್ಡ ಬಂಗಲೆಗಳನ್ನು ಕಟ್ಟಿಸಿಕೊಂಡು ಸುಖವಸ್ತುಗಳಾಗಿ ಜೀವಿಸುತ್ತಿದ್ದರು. ಅವರ ಒಡೆತನದ ಭೂಮಿಯನ್ನು ಲಾವಣಿಗೆ ಹಿಡಿದು ದುಡಿಯುವ ರೈತರಲ್ಲಿ ಹೆಚ್ಚು ಜನರಿಗೆ ಮಾತ್ರ ಸುಖವೆಂದರೇನೆಂಬುದೇ ಗೊತ್ತಿರಲಿಲ್ಲ. ಒಂದೊಂದು ಎಕರೆಗೆ ಎರಡುನೂರು ರೂಪಾಯಿಗಳವರೆಗೂ ಅವರು ಲಾವಣಿ ಕೊಡಬೇಕಾಗುತ್ತಿತ್ತು. ಬೆಳೆ ಬಂದರೂ ಸರಿಯೆ, ಬರದಿದ್ದರೂ ಸರಿಯೆ, ಇನಾಂದಾರರಿಗೆ ಲಾವಣಿ ಹಣ ಮುಟ್ಟಿಸುವುದನ್ನು ಮಾತ್ರ ತಪ್ಪಿಸುವಂತಿರಲಿಲ್ಲ. ಅನೇಕ ವರ್ಷಗಳಿಂದ ಅಂಥ ಬಿಕ್ಕಟ್ಟಿಗೊಳ

ಗಾಗಿದ್ದ ರೈತರು ಸಾಲದ ಹೊರೆಯನ್ನು ಹೊತ್ತು ತುಂಬಾ ಕಷ್ಟದಿಂದ ಕಾಲ ತಳ್ಳುತ್ತ ಬಂದಿದ್ದರು. ಲಾವಣಿಯ ಹಣ ಹೆಚ್ಚಾಯಿತೆಂದು ತಕರಾರು ಮಾಡು ವುದಕ್ಕೂ ಯಾರಿಗೂ ಧೈರ್ಯವಿರಲಿಲ್ಲ. ಹಾಗೆ ಧ್ವನಿಯೆತ್ತಿದವರ ಕೈಯಿಂದ ಭೂಮಿಯನ್ನು ಕಸಿದುಕೊಂಡು ಬೇರೆಯವರಿಗೆ ಅದನ್ನೊಪ್ಪಿಸುತ್ತಿದ್ದರು ಇನಾಂ ದಾರರು. ಭೂಮಿಯನ್ನು ಕಳೆದುಕೊಂಡವರಿಗೆ ಉಪಜೀವನಕ್ಕೆ ಬೇರಾವ ಮಾರ್ಗವೂ ಉಳಿಯುತ್ತಿರಲಿಲ್ಲ. ಹೆಂಡಿರು ಮಕ್ಕಳನ್ನು ಕಟ್ಟಿಕೊಂಡು ಅವರು ದೇಶಾಂತರ ಹೊರಡಬೇಕಾಗುತಿತ್ತು. ಅಂತೆಯೆ, ಇನಾಂದಾರರ ವಿರುದ್ಧ ಧ್ವನಿಯೆತ್ತುವ ಸಾಹಸಕ್ಕೆ ಸಾಮಾನ್ಯವಾಗಿ ಯಾರೂ ಹೋಗುತ್ತಿರಲಿಲ್ಲ.

ಅಂಥ ವಾತಾವರಣದಲ್ಲಿ, ನವಲಾಪುರದ ಇನಾಂದಾರರ ವಿರುದ್ಧ ಮೊತ್ತ ಮೊದಲನೆಯ ಬಾರಿ ಬಂಡಾಯದ ಬಾವುಟವೆತ್ತಿ ನಿಂತು ಹೆಸರುವಾಸಿಯಾದ ರೈತ ಚೆನ್ನಬಸಪ್ಪ. ಕಾಂಗ್ರೆಸ್ ಸರಕಾರ ಅಧಿಕಾರ ಸ್ವೀಕರಿಸಿದ ಬಳಿಕ ಲಾವಣಿ ಹಣದ ಬಗೆಗೆ ಕೆಲವು ನಿಯಮಗಳನ್ನು ಹಾಕಿ ಕೊಟ್ಟಿತ್ತು. ಜಮೀನ್ದಾರರು ತಮ್ಮ ಮನಸ್ಸಿನಂತೆ ರೈತರನ್ನು ಶೋಷಿಸುವುದನ್ನು ತಡೆಗಟ್ಟಲೆಂದೇ ಆ ನಿಯ ಮಗಳನ್ನು ವಿಧಿಸಲಾಗಿತ್ತು. ಭೂಮಿಯಲ್ಲಿ ರೈತನು ಬೆಳೆದುದರಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗವನ್ನು ಜಮೀನ್ದಾರರಿಗೆ ಕೊಡಬೇಕಾಗುತಿತ್ತು. ಆ ಅನ್ಯಾಯ ವನ್ನು ತಡೆಯಲೆಂಬ ಉದ್ದೇಶದಿಂದ, ಬೆಳೆದುದರಲ್ಲಿ ಮೂರರಲ್ಲೊಂದು ಪಾಲನ್ನು ಮಾತ್ರ ಹೊಲದೊಡೆಯನಿಗೆ ಕೊಡಬೇಕೆಂದು ಸರಕಾರ ವಿಧಿಸಿತು. ಆದರೆ, ಸರಕಾರದ ಆ ಕಟ್ಟಳೆ ಪ್ರತ್ಯಕ್ಷವಾಗಿ ಆಚರಣೆಗೆ ಬರುವುದು ಮಾತ್ರ ಅಷ್ಟು ಸುಲಭವಾಗಿರಲಿಲ್ಲ. ನೂರಾರು ವರ್ಷಗಳಿಂದ ಹೊಲದೊಡೆಯರ ದಾಸಾನು ದಾಸರಂತೆ ಬದುಕುತ್ತ, ಅವರು ಕೇಳಿದಷ್ಟು ಹಣವನ್ನು ಕೊಡುತ್ತ ಬಂದಿದ್ದ ರೈತರು ಈಗ ಒಮ್ಮಿಂದೊಮ್ಮೆಲೆ ಮೂರರಲ್ಲೊಂದು ಪಾಲನ್ನು ಮಾತ್ರ ಕೊಡುವೆ ವೆಂದು ಹೇಳುವುದಾದರೂ ಹೇಗೆ? ಹೇಗೋ ಧೈರ್ಯ ತಂದುಕೊಂಡು ಹೇಳಿದರೂ ಸಹ ಮುಂದೆ ಏನಾಗುವುದೊ ಯಾರು ಬಲ್ಲರು ? ಇನಾಂದಾರರು ತಮ್ಮ ಕೈಯ ಲ್ಲಿಯ ಭೂಮಿಯನ್ನು ಕಸಿದುಕೊಂಡು ಬೇರೆಯವರಿಗೆ ಕೊಡಬಹುದು. ಅವರು ಸಾಹುಕಾರರು. ಕೋರ್ಟು ಕಚೇರಿಗಳಿಗೆ ಹೋಗಿ ಹೊಡೆದಾಡುವ ಶಕ್ತಿಯುಳ್ಳ ವರು. ವಕೀಲರ ಫೀಜು ಕೊಡುವುದಕ್ಕೂ ತ್ರಾಣವಿಲ್ಲದ ತಮ್ಮಂಥ ಬಡವರು

ಇನಾಂದಾರರ ವಿರುದ್ಧ ತಂಟೆಗೆ ಸಿಲ್ಲುವುದು ತರವಲ್ಲ. ಆ ಪ್ರಕಾರ ಯೋಚಿಸಿಕೊಂಡು ಎಲ್ಲ ರೈತರೂ ಮೊದಲಿನಂತೆಯೆ ಲಾವಣಿ ಹಣ ಸಲ್ಲಿಸುತ್ತ ಬಂದಿದ್ದರು. ಸರಕಾರದ ಹೊಸ ಕಟ್ಟಳೆ ಕಾಗದದಲ್ಲುಳಿಯಿತೇ ವಿನಾ ಅದರ ಪ್ರಯೋಜನ ಪಡೆಯಲು ಯಾರೂ ಮುಂದೆ ಬರಲಿಲ್ಲ.

ಹಾಗೆ ಪ್ರಯೋಜನ ಪಡೆಯಲು ನಿರ್ಧರಿಸಿ ಧೈರ್ಯದಿಂದ ಮುಂದೆ ಬಂದ ಮೊದಲನೆಯ ರೈತ ಚೆನ್ನಬಸಪ್ಪ. ಆ ಭಾಗದಲ್ಲೆಲ್ಲ ತಕ್ಕಮಟ್ಟಿಗೆ ಶಿಕ್ಷಣ ಪಡೆದವನೂ ಕಾಯ್ದೆ ಕಾನೂನುಗಳನ್ನು ತಿಳಿದವನೂ ನಗರಗಳನ್ನು ಕಂಡವನೂ ಆದ ರೈತನೆಂದರೆ ಅವನೊಬ್ಬನೆ. ಹತ್ತು ಹದಿನೈದು ವರ್ಷಗಳಿಂದ ಕಾಂಗ್ರೆಸ್ ಸಂಸ್ಥೆಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತ ಬಂದು ಉಗ್ರಪುರ ತಾಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಸ್ಥಾನದ ವರೆಗೂ ಏರಿದ್ದ ಚೆನ್ನಬಸಪ್ಪ, ಕಾಂಗ್ರೆಸ್ ಮಂತ್ರಿಮಂಡಲ ಎರಡನೆಯ ಬಾರಿ ಅಧಿಕಾರ ಸ್ವೀಕರಿಸಿದ ತರುವಾಯ, ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿ ಕೃಷ್ಣಾಜಿಯೊಡನೆ ಮತಭೇದವುಂಟಾದ ಕಾರಣವಾಗಿ ತಾಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷತೆಗೆ ರಾಜೀನಾಮೆ ಸಲ್ಲಿಸಿದ್ದ, ಆ ಘಟನೆ ಜರುಗಿದ ವರ್ಷವೊಂದರ ತರುವಾಯ ಆ ಭಾಗದ ಶಾಸನಸಭಾ ಸದಸ್ಯ ಸ್ಥಾನವೊಂದು ತೆರವಾಗಿದ್ದುದರಿಂದ ನಡೆದ ಉಪ ಚುನಾವಣೆಯಲ್ಲಿ ಅಧಿಕೃತ ಕಾಂಗ್ರೆಸ್ ಹುರಿಯಾಳುವಿನ ವಿರುದ್ಧ ಹಟದಿಂದ ಹೋರಾಡಿ, ಸೋತರೂ ಛಲ ಬಿಡದೆ, ಅಂದಿನಿಂದಲೂ ಕಾಂಗ್ರೆಸಿನ ಬಗೆಗೆ ಕಿಡಿ ಕಾರುತ್ತ ಬಂದಿದ್ದ, ಆ ಆವೇಶದ ಭರದಲ್ಲಿಯೆ ಇನಾಂದಾರರಿಗೆದುರಾಗಿಯೂ ಕದನಕ್ಕೆ ನಿಂತುಕೊಂಡಿದ್ದ. ಅವನ ಮೇಲೆ ಇನಾಂದಾರರೂ ಇನಾಂದಾರರ ಮೇಲೆ ಅವನೂ ಹೂಡಿದ ಎಷ್ಟೋ ಮೊಕದ್ದಮೆಗಳು ಬೇರೆ ಬೇರೆ ನ್ಯಾಯಾಸ್ಥಾನಗಳಲ್ಲಿ ನಡೆಯುತ್ತಿದ್ದುವು. ಆ ಮೊಕದ್ದಮೆಗಳಿಗೆ ಉಪಸ್ಥಿತನಿರಲು ಅವನು ವಾರದಲ್ಲಿ ಮೂರು ನಾಲ್ಕು ಬಾರಿಯಾದರೂ ಉಗ್ರಪುರ ಮತ್ತು ಕಳ್ಳೀಕಾಯಿಗಳಿಗೆ ಹೋಗಬೇಕಾಗುತಿತ್ತು. ಚುನಾವಣೆಯಲ್ಲಿ ಸೋತು ಪಾಪರಾಗುವ ಸ್ಥಿತಿಗೆ ಮುಟ್ಟಿದ್ದ ಚೆನ್ನಬಸಪ್ಪ ಮೊಕದ್ದಮೆಗಳ ಖರ್ಚಿಗಾಗಿ ಹಣವನ್ನು ಎಲ್ಲಿಂದ ಒದಗಿಸುತ್ತಿರಬಹುದೋ ಎಂದು ಜನರಿಗೆ ಕೌತುಕ. ಅವನ ಹೋರಾಟವನ್ನು ಕಂಡು ಅಂತರಂಗದಲ್ಲಿ ಮೆಚ್ಚುವವರೂ ಇದ್ದರು. ಅಸೂಯೆ ಪಡುವ

ವರೂ ಇದ್ದರು. ತನ್ನ ಹಾಗೆ ಇತರ ರೈತರೂ ಇನಾಂದಾರರನ್ನು ದುರಿಸಿ ಹೋರಾಡಲು ನಿಲ್ಲಬೇಕೆಂದು ಅವನ ಅಪೇಕ್ಷೆ. ಆದರೆ ರೈತರಿಗೆ ಆ ಧೈರ್ಯವಿರಲಿಲ್ಲ ಸುತ್ತಲಿನ ಸೀಮೆಯಲ್ಲೆಲ್ಲ ಚೆನ್ನಬಸಪ್ಪನನ್ನು ಹೊರತುಪಡಿಸಿದರೆ ಜಮೀನ್ದಾರರನ್ನೆದುರಿಸಿ ನಿಂತವನು ಮಲ್ಲಾಪುರದ ಪ್ರಭಣ್ಣನೊಬ್ಬನೇ. ಆದರೆ, ಅವನಿಗೂ ಚೆನ್ನಬಸಪ್ಪನಿಗೂ ಹೊಂದಾಣಿಕೆಯಾಗುವಂತಿರಲಿಲ್ಲ. ಕಾಂಗ್ರೆಸ್ಸಿನ ಅಂಥ ಭಕ್ತನಾಗಿದ್ದ ಪ್ರಭಣ್ಣನಿಗೆ ಚೆನ್ನಬಸಪ್ಪನ ಕಾಂಗ್ರೆಸ್ ದ್ವೇಷ ಸಹನವಾಗುವಂತಿರಲಿಲ್ಲ. ಈ ವಿಚಾರವಾಗಿ ಅನೇಕ ಬಾರಿ ಇಬ್ಬರಿಗೂ ತೀಕ್ಷ್ಣ ವಾಗ್ವಾದ ನಡೆದು ಪರಸ್ಪರರು ಮಾತನಾಡುವುದನ್ನು ನಿಲ್ಲಿಸುವಷ್ಟು ಕಹಿ ಬೆಳೆದು ಬಂದಿತ್ತು. "ಚೆನ್ನಬಸಪ್ಪ ಅಂದರೆ ಒಬ್ಬ ಹುಂಬ" ಎಂದು ಪ್ರಭಣ್ಣ ಅನ್ನುತ್ತಿದ್ದರೆ "ಆ ಪ್ರಭ್ಯಾಗೆ ಸ್ವಲ್ಪ ಕೂಡಾ ತಲೆಯಿಲ್ಲ" ಎಂದು ಚೆನ್ನಬಸಪ್ಪ ಅನ್ನುತ್ತಿದ್ದ. ಅಂತೆಯೆ, ಅವರಿಬ್ಬರೂ ಕೂಡಿ ಕೆಲಸ ಮಾಡುವುದು ಅಶಕ್ಯವಾಗಿ ಪರಿಣಮಿಸಿತ್ತು. ಹೊಲದೊಡೆಯರು ಹಾಗೂ ಕಾಂಗ್ರೆಸ್ಸಿಗೆದುರಾಗಿ ರೈತರ ಸಂಘಟನೆಯೊಂದು ರೂಪುಗೊಂಡರೆ ಒಳ್ಳೆಯದೆಂಬ ಅರಿವು ಚೆನ್ನಬಸಪ್ಪನಿಗಿದ್ದಿತಾದರೂ ತಾನೊಬ್ಬನೆ ಏನನ್ನೂ ಮಾಡಲಾರದೆ ಅವನು ಸುಮ್ಮನಿರಬೇಕಾಗಿದ್ದಿತು. ಈಶ್ವರ ಕಾಡಾಪುರದಲ್ಲಿ ಬಂದು ನೆಲಸಿದ ತರುವಾಯ ಅವನೊಡನೆ ಈ ವಿಚಾರವಾಗಿ ಒಂದೆರಡು ಬಾರಿ ಚರ್ಚಿಸಿದ್ದ ಚೆನ್ನಬಸಪ್ಪ. ದುರ್ಬಲ ಪ್ರಕೃತಿಯವನಾಗಿದ್ದ ಈಶ್ವರನಿಗೂ ರಾಜಕೀಯದಲ್ಲಿ ಭಾಗವಹಿಸುವ ಅಪೇಕ್ಷೆಯಿರಲಿಲ್ಲ. ಅಂತೆಯೆ, ಸದಾಶಿವ ಬಿಡುಗಡೆ ಹೊಂದಿ ಬರುವ ವರೆಗೂ ಆ ಭಾಗದಲ್ಲಿ ಯಾವ ಚಟುವಟಿಕೆಯೂ ಇರಲಿಲ್ಲ.

ಸದಾಶಿವ ಮತ್ತು ಈಶ್ವರರಿಗಿಂತ ವಯಸ್ಸಿನಲ್ಲಿ ದೊಡ್ಡವನು ಚೆನ್ನಬಸಪ್ಪ ಆ ಭಾಗದ ರೈತರೆಲ್ಲರ ಪರಿಚಯ ಅವನಿಗಿದ್ದಿತಾದರೂ, ವಿಶೇಷವಾಗಿ ನಗರಗಳಲ್ಲೇ ಕಾಲ ಕಳೆದಿದ್ದ ಸದಾಶಿವ ಮತ್ತು ಈಶ್ವರರೊಡನೆ ಮಾತ್ರ ಅವನಿಗೆ ಅಷ್ಟು ಪರಿಚಯವಿರಲಿಲ್ಲ. ನಲವತ್ತೆರಡರ ಚಳುವಳಿಯಲ್ಲಿ ಅವನೂ ಭಾಗವಹಿಸಿದ್ದನಾದರೂ ಸದಾಶಿವನ ಗುಂಪಿನೊಂದಿಗೆ ಅವನಿಗೇನೂ ಸಂಬಂಧ ಬಂದಿರಲಿಲ್ಲ. ಸದಾಶಿವ, ಸ್ವಾಮಿಯ ಗುಂಪಿಗೆ ಸೇರಿದವನಾದರೆ ಚೆನ್ನಬಸಪ್ಪ ಕಡುಗಲಿ ಸಿದ್ಧರಾಮಪ್ಪನ ಗುಂಪಿಗೆ ಸೇರಿದವನು. ಕಡುಗಲಿಯ ಗುಂಪು ಕಳ್ಳೇ

ಕಾಯಿ ಮತ್ತು ಓರೆಕೋರೆ ಜಿಲ್ಲೆಗಳಲ್ಲಿ ಕೆಲಸ ಮಾಡುತ್ತಿದ್ದರೆ ಸ್ವಾಮಿಯ ಗುಂಪು ಸಂಸ್ಥಾನೀ ಭಾಗದಲ್ಲಿಯೆ ಚಟುವಟಿಕೆ ನಡಸಿತ್ತು. ಅಂತೆಯೆ ಅವೆರಡು ಗುಂಪುಗಳಿಗೂ ಸಂಪರ್ಕವುಂಟಾಗಿರಲಿಲ್ಲ. ಆದರೂ, ಅವರ ಬಗೆಗೆ ಇವರಿಗೂ ಇವರ ಬಗೆಗೆ ಅವರಿಗೂ ತುಂಬಾ ಅಭಿಮಾನವಿತ್ತು. ಸದಾಶಿವನನ್ನು ಅಂಥ ಅಕೃತ್ರಿಮ ಅಭಿಮಾನದಿಂದ ಕಾಣುತ್ತ ಬಂದಿದ್ದ ಚೆನ್ನಬಸಪ್ಪ. ಅವನು ಬಿಡುಗಡೆ ಹೊಂದಿ ಬಂದುದನ್ನು ತಿಳಿದಾಗ ಚೆನ್ನಬಸಪ್ಪನಿಗೆ ಪರಮ ಸಂತೋಷವಾಗಿತ್ತು. ಸದಾಶಿವನೂ ತಾನೂ ಕೂಡಿಕೊಂಡು ಏನನ್ನಾದರೂ ಸಾಧಿಸಬಹುದೆಂದು ಆತ ಎಣಿಕೆ ಹಾಕುತ್ತಿದ್ದ.

ಒಂದೆರಡು ವಾರ ಸದಾಶಿವ ವಿರಮಿಸಿಕೊಂಡ ಬಳಿಕ ಮಲ್ಲಾಪುರಕ್ಕೆ ಹೋಗಿ ಅವನೊಡನೆ ಮಾತನಾಡುವುದೆಂದು ಚೆನ್ನಬಸಪ್ಪ ಯೋಚಿಸುತ್ತಿದ್ದಾಗಲೆ ಈಶ್ವರ ನವಲಾಪುರಕ್ಕೆ ಬಂದು ಸಂಘಟನೆಯ ವಿಚಾರವಾಗಿಯೆ ಮಾತಿಗಾರಂಭಿಸಿದ. ಚೆನ್ನಬಸಪ್ಪನಿಗೆ ಸಹಜವಾಗಿಯೆ ಬಹಳ ಸಂತೋಷವಾಯಿತು.

" ಏನಾದರೂ ಮಾಡಬೇಕೆಂತ ನಾನೂ ಬಹಳ ದಿನದಿಂದ ಲೆಕ್ಕ ಹಾಕುತ್ತಿದ್ದೆ. ಇಲ್ಲಿ ಚೆನ್ನಯ್ಯಶಾಸ್ತ್ರಿಯೂ ಬಹಳ ಹುರುಪಿನಿಂದಿದ್ದಾನ. ಅಲ್ಲಿ ಮೂರುಸಾವಿರಪ್ಪನೂ ಕೆಲಸ ಸುರುಮಾಡಿದ್ದಾನ. ಇಲ್ಲಿ ನಾವು ಮಾಡೋಣ ಅಣ್ಣಾಗೋಳೂ ಬಂದಾರು ನಮ್ಮ ಸಂಗಡ."

" ಅಣ್ಣಾಗೋಳು ? "

" ಅಂದರೆ ಶಿವಲಿಂಗಯ್ಯನವರು. ನಾವೆಲ್ಲಾ ಅವರನ್ನು ಅಣ್ಣಾಗೋಳು ಅಂತಲೇ ಕರೀತೇವೆ. ಅವರ ಅಂಗಡಿಯೊಳಗೆ ಕೆಲ ದಿನ ನಾನು ಕೆಲಸಕ್ಕೂ ಇದ್ದೆ."

ಈಶ್ವರನಿಗೆ ಆ ವಿಷಯ ಅಪರಿಚಿತವಾದುದಾಗಿತ್ತು.

" ಅಂಗಡಿಯಲ್ಲೂ ಕೆಲಸಮಾಡಿದ್ದೀರಾ ನೀವು? "

" ಹೌದು. ನಾನಿನ್ನೂ ಇಪ್ಪತ್ತು ವರ್ಷದವನಿದ್ದಾಗಲೇ ಶಿವಲಿಂಗಯ್ಯನವರ ಅಂಗಡಿಗೆ ಕೆಲಸಕ್ಕೆ ಸೇರಿದ್ದೆ, ಕಾರಕೂನನಾಗಿ. ಅವರಲ್ಲಿಯ ಅನುಭವದ ಆಧಾರದಿಂದಲೇ ಮುಂದೆ ಉಗ್ರಪುರದೊಳಗೆ ನಾನೇ ಸ್ವಂತ ದಲಾಲಿ ಅಂಗಡಿ ತೆಗೆದಿದ್ದೆ. ಲಕ್ಷಾಂತರ ರೂಪಾಯಿಗಳ ವ್ಯವಹಾರವೂ ನಡೆದಿತ್ತು.

ಈ ಭಾಗದ ರೈತರೆಲ್ಲಾ ನಮ್ಮ ಅಂಗಡಿಗೇ ಮಾಲು ತಂದು ಹಾಕುತಿದ್ದರು. ಮೊನ್ನೆ ಚುನಾವಣೆಗೆ ನಿಂತಾಗ ಇಪ್ಪತ್ತು ಸಾವಿರ ಹಾಳಾಯಿತು. ಅಂಗಡಿಯ ಕಡೆ ಲಕ್ಷ್ಯಕೊಡಲು ನನಗೆ ಪುರಸತ್ತಿರಲಿಲ್ಲ. ಕಾರಕೂನರು ಮೋಸ ಮಾಡಿ ಹಣ ತಿಂದು ಹಾಕಿ ಅಂಗಡಿಯನ್ನು ಮುಳುಗಿಸಿಬಿಟ್ಟರು. ಇನ್ನೇನು ಮಾಡುವದು ಹೇಳಿರಿ. ಹೋದದ್ದು ಹೋಯಿತಂತ ಮತ್ತೆ ಇಲ್ಲಿಗೇ ಬಂದು ಕೈಯೊಳಗೆ ಕುರುಪಿ ಹಿಡಿದು ಒಕ್ಕಲತನಕ್ಕೇ ನಿಂತೆ."

"ನೀವು ತಾಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದಿರಂತಲ್ಲ, ಅದನ್ನು ಬಿಡಲು ಕಾರಣವೇನಾಯಿತು ?"

"ಅದು ಹೀಗಾಯಿತು. ಮುಖ್ಯ ಮಂತ್ರಿಗಳು ನಮ್ಮ ಜಿಲ್ಲೆಯ ಸಂಚಾರಕ್ಕೆ ಬರುವವರಿದ್ದರು. ನಮ್ಮ ತಾಲೂಕಿನಲ್ಲೂ ಅವರ ಕಾರ್ಯಕ್ರಮ ಇಡುವದಿತ್ತು. ಕಾಂಗ್ರೆಸ್ ಮಂತ್ರಿಗಳು ಯಾರೇ ಬಂದರೂ ತಾಲೂಕು ಕಾಂಗ್ರೆಸ್ ಅಧ್ಯಕ್ಷನನ್ನು ಮೊದಲೇ ಕೇಳಿಕೊಂಡು ಅವರ ಕಾರ್ಯಕ್ರಮ ಗೊತ್ತು ಮಾಡಬೇಕಾಗುತ್ತದೆ. ಜಿಲ್ಲಾ ಕಾಂಗ್ರೆಸ್ ಸಮಿತಿಯ ಕಾರ್ಯದರ್ಶಿ ಕೃಷ್ಣಾಜಿ ಸರ್ವಾಧಿಕಾರಿ ಸ್ವಭಾವದ ಮನುಷ್ಯ. ನನ್ನನ್ನು ಕೇಳದೆ ಅವನೇ ಕಾರ್ಯಕ್ರಮ ಗೊತ್ತುಮಾಡಿ ಪ್ರಕಟಿಸಿಬಿಟ್ಟ. ಮುಖ್ಯಮಂತ್ರಿಗೆ ಇದೆಲ್ಲ ಹ್ಯಾಗೆ ಗೊತ್ತಾಗಬೇಕು ? ಅದಕ್ಕೇ ನಾನು ಒಂದು ತಾರು ಕೊಟ್ಟು, ನನ್ನನ್ನು ಕೇಳದೆ ಕಾರ್ಯಕ್ರಮ ಗೊತ್ತು ಮಾಡಿರುವರಾದ್ದರಿಂದ ತಾಲೂಕು ಕಾಂಗ್ರೆಸ್ ಸಮಿತಿಯ ವತಿಯಿಂದ ಸಭೆಯ ವ್ಯವಸ್ಥೆ ಮಾಡುಪದಕ್ಕಾಗುವದಿಲ್ಲವೆಂತಲೂ ಮಂತ್ರಿಗಳು ಉಗ್ರಪುರಕ್ಕೆ ಬರಬಾರದೆಂತಲೂ ತಿಳಿಸಿದೆ ಆದರೂ ಮಂತ್ರಿ ಬಂದೇಬಿಟ್ಟರು. ಕೃಷ್ಣಾಜಿ ಸಭೆಯನ್ನು ನಡಸಿದ. ನಾನು ಸಭೆಯಲ್ಲಿ ನಿಂತು ಅವನ ನಿಯಮಗೆಟ್ಟ ರೀತಿಯನ್ನು ಮಂತ್ರಿಗಳಿಗೆ ತಿಳಿಸಿದೆ. ಅವರೂ ಸಹನೆಯಿಂದ ಕೇಳಲಿಲ್ಲ. ಸರಿ. ನಮಗೆ ಕಿಮ್ಮತ್ತು ಇಲ್ಲದಂಥ ಕಡೆ ಇರುವದಾದರೂ ಯಾಕೆ ಅಂತ ಅಂದೇ ರಾಜೀನಾಮೆ ಕೊಟ್ಟುಬಿಟ್ಟೆ."

"ಕಾಂಗ್ರೆಸ್ ಸದಸ್ಯತ್ವಕ್ಕೂ ಸಹ ಅಂದೇ ರಾಜೀನಾಮೆ ಕೊಟ್ಟಿರಾ ?"

"ಇಲ್ಲ. ತಾಲೂಕ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಮಾತ್ರ ರಾಜೀನಾಮೆ ಕೊಟ್ಟು ಸಾಧಾರಣ ಕಾಂಗ್ರೆಸ್ ಸದಸ್ಯನಾಗೇ ಇದ್ದೆ. ಮುಂದೆ ದಿನ ಕಳೆದ

ಹಾಗೆ ಕೃಷ್ಣಾಜಿ ಎಲ್ಲಾ ಅಧಿಕಾರ ಹಿಡಿದುಕೊಂಡು ಬ್ರಾಹ್ಮಣರನ್ನು ಮಾತ್ರ ಮೇಲೇರಿಸಿ ಲಿಂಗಾಯತರನ್ನ ತುಳಿಯಲಿಕ್ಕೆ ಸುರು ಮಾಡಿದ. ಒಂದು ಜಾಗ ತೆರವಾದಾಗ ಉಪಚುನಾವಣೆ ನಡೆಯುವದಿತ್ತಲ್ಲಾ—ಆಗಲಾದರೂ ಲಿಂಗಾಯತರೊಬ್ಬರಿಗೆ ಕಾಂಗ್ರೆಸ್ ಸೀಟು ಕೊಟ್ಟಿದ್ದರೆ ಜಗಳ ಬರುತ್ತಿರಲಿಲ್ಲ. ಸೋಮಶೇಖರಪ್ಪನವರನ್ನ ನಿಲ್ಲಿಸಿರೆಂದು ನಾವು ಕೇಳಿದೆವು. ಕೃಷ್ಣಾಜಿ ತನ್ನ ಮುಂಗೈ ಜೋರಿನಿಂದ ತನ್ನ ಹಿಂಬಾಲಕ ಬೆನಕೋಜಿಯನ್ನ ನಿಲ್ಲಿಸಿದ. ಅವನು ಹ್ಯಾಗೆ ಆರಿಸಿ ಬರ್ತಾನೆ ನೋಡೋಣಾಂತ ನಮ್ಮ ಜನರೂ ಹಟ ಹಿಡಿದರು. ವ್ಯಾಪಾರಿ ಸಂಘದ ಪರವಾಗಿ ಒಬ್ಬನ್ನ ನಿಲ್ಲಿಸಬೇಕಂತ ಠರಾವಾಯಿತು. ಕಾಂಗ್ರೆಸ್ ವಿರುದ್ಧ ನಿಲ್ಲುವದಕ್ಕೆ ಯಾರೂ ಮುಂದೆ ಬರಲಿಲ್ಲ. ಯಾರೂ ನಿಲ್ಲದಿದ್ದರೆ ನಾನೇ ನಿಲ್ಲುತ್ತೇನೆ ಅಂತ ನಿಂತುಬಿಟ್ಟೆ. ಚುನಾವಣೆಯ ಕಾಲಕ್ಕೆ ಬ್ಯಾಲಟ್‌ಪೇಪರು ಬರಲಿಲ್ಲ ಅಂತ ಚುನಾವಣೆ ಮುಂದೆ ಹಾಕಿದರು ಕಾಂಗ್ರೆಸ್ಸಿನವರು. ನಾ ಮಾಡಿಕೊಂಡಿದ್ದ ತಯಾರಿಯೆಲ್ಲಾ ವ್ಯರ್ಥ ಆಯ್ತು. ಮುಂದೆ ಮತ್ತೆ ಮತದಾನ ನಡೆದಾಗ ಏನೇನೋ ಮೋಸ ಮಾಡಿ ಅವರೇ ಗೆದ್ದರು. ಕಾಂಗ್ರೆಸ್ ಹುರಿಯಾಳಿನ ವಿರುದ್ಧ ನಿಂತದ್ದಕ್ಕಾಗಿ ಅರ್ಥಾತ್ ನನ್ನನ್ನು ಕಾಂಗ್ರೆಸ್ಸಿನಿಂದ ಹೊರಗೆ ಹಾಕಿದರು. ಗೊತ್ತಾಯಿತೇ ಕಥೆ? " ಎಂದು ಮುಗಿಸಿದ ಚೆನ್ನಬಸಪ್ಪ.

" ನೀವು ಕಾಂಗ್ರೆಸ್ಸನ್ನು ಬಿಡಲು ವೈಯಕ್ತಿಕ ಮತ್ತು ಜಾತೀಯ ಕಾರಣ ಬಂದಂತಾಯಿತಲ್ಲ? "

" ಕೃಷ್ಣಾಜಿ ಮುಂಗೈ ಜೋರಿನಿಂದ ದರಬಾರು ನಡಸಲಿಕ್ಕೆ ಹೊರಟರೆ ನಾವು ಸುಮ್ಮನಿರಬೇಕೇನ್ರಿ? ಕಾಂಗ್ರೆಸ್ಸಿಗಾಗಿ ಹಗಲೂ ರಾತ್ರಿ ದುಡಿಯುವವರು ಲಿಂಗಾಯತರು, ಅಧಿಕಾರ ನಡಸುವವರು ಬ್ರಾಹ್ಮಣರು, ಗಂಟು ತಿನ್ನುವವರು ಬ್ರಾಹ್ಮಣರು, ಇದನ್ನೆಲ್ಲಾ ಸಹಿಸುವುದು ಹ್ಯಾಗೆ? "

" ಕರ್ನಾಟಕದ ವತಿಯಿಂದ ಮಂತ್ರಿಮಂಡಲದಲ್ಲಿರುವವರೇನೂ ಬ್ರಾಹಣರಲ್ಲವಲ್ಲಾ? "

" ಅದಕ್ಕೇನು ಬಿಡಿರಿ. ಸ್ವಲ್ಪಾದರೂ ಗಂಡಸುತನವ್ರೋ? ಮೊದಲು ನರಹರಿರಾಯರ ಬಾಲಾ ಹಿಡಿದುಕೊಂಡಿದ್ದರು. ಆಗ ಕೃಷ್ಣಾಜಿಯ ಬೆನ್ನು

ಕಟ್ಟಿದ್ದಾರ. ಅವರನ್ನು ಮುಂಬಯಿಯೊಳಗಿಟ್ಟು ಇಲ್ಲಿ ಎಲ್ಲಾ ಅಧಿಕಾರ ಇವರೇ ಹಿಡುಕೊಂಡು ಚಕ್ಕಂದ ಹೋಡೀತಾರ. ಸರ್ವೋದಯ ಯೋಜನಾದ್ದು ನಿಮಗೆ ಗೊತ್ತೈತ್ಯೋ ಇಲ್ಲ್ವೋ? ಅದರ ಸಂಚಾಲಕ ಆಗಿ ದಾನಲ್ಲ ಅವಗ ತಿಂಗಳಿಗೆ ಇನ್ನೂರೈವತ್ತು ಪಗಾರ. ಅವನ ಮೊಸಡೀ ನೋಡಿ ಯಾರಾದರೂ ಅವಗ ಇಪ್ಪತ್ತೈದು ರೂಪಾಯಿ ಆದರೂ ಕೊಟ್ಟಾರೇನು ಪಗಾರ? ಅವ ಬ್ರಾಹ್ಮಣ ಅಂತ ನಡದೈತಿ ಎಲ್ಲಾ. ಯಾವ ಕಮಿಟಿಯೊಳಗ ನೋಡಿದರೂ ಅವರೇ, ಅವರ ಬಾಲಾ ಬಡಿಯುವವರೇ."

ಹಾಗೆ, ಬ್ರಾಹ್ಮಣರ ಬಗೆಗೆ ತನ್ನಲ್ಲಿದ್ದ ಅಸಹನೆಯನ್ನೂ ದ್ವೇಷವನ್ನೂ ಸ್ಪಷ್ಟವಾದ ಶಬ್ದಗಳಲ್ಲಿ ವ್ಯಕ್ತಗೊಳಿಸಿದ ಚೆನ್ನಬಸಪ್ಪ. ಈಶ್ವರನೂ ವೀರ ಶೈವಮತಸ್ಥನಾದುದರಿಂದ ಅವನಿಗೂ ತನ್ನಂತೆಯೇ ಬ್ರಾಹ್ಮಣದ್ವೇಷವಿರಬ ಹುದೆಂದು ಚೆನ್ನಬಸಪ್ಪ ಭಾವಿಸಿಕೊಂಡಿದ್ದ. ಈಶ್ವರನಿಗೆ ಮಾತ್ರ ಜಾತಿಮತ ಗಳ ಬಗೆಗೆ ಸ್ವಲ್ಪವೂ ಅಭಿಮಾನವಿರಲಿಲ್ಲ. ಅವನಿನ್ನೂ ಹೈಸ್ಕೂಲಿನಲ್ಲಿದ್ದಾ ಗಲೇ ಲಿಂಗ ಕಟ್ಟುವುದನ್ನು ನಿಲ್ಲಿಸಿ ಕರಡಿಗೆಯನ್ನು ಬಾವಿಗೆಸೆದುಬಿಟ್ಟಿದ್ದ. ಮಾರ್ಕ್ಸ್ ವಾದವನ್ನು ಅಭ್ಯಾಸಿಸಿದ ತರುವಾಯವಂತೂ ಜಾತಿಮತಗಳ ಬಗೆಗೆ ಅವನಲ್ಲಿ ಘೋರ ತಿರಸ್ಕಾರ ಮನೆಮಾಡಿಕೊಂಡಿತ್ತು. ಸಾಮಾಜಿಕ ರಾಜಕೀಯ ಸಮಸ್ಯೆಗಳನ್ನು ಜಾತೀಯ ದೃಷ್ಟಿಯಿಂದ ನೋಡುವ ಅಭ್ಯಾಸವೇ ಅವನಿಗಿರ ಲಿಲ್ಲ. ಆ ವಿಷಯದಲ್ಲಿ ಸದಾಶಿವನಿಗೂ ಅವನಿಗೂ ಸಾಮ್ಯವಿದ್ದಿತೆಂದು ಹೇಳ ಬೇಕು. ಕಾಂಗ್ರೆಸ್ಸಿನ ಅಧಿಕಾರ ಬ್ರಾಹ್ಮಣನಾದ ಕೃಷ್ಣಾಜಿಯ ಕೈಗೆ ಹೋಯಿ ತಲ್ಲಾ ಎಂದು ಚೆನ್ನಬಸಪ್ಪ ಹಳಹಳಿಸುತ್ತಿದ್ದರೆ ಆ ಸಂಸ್ಥೆ ಪ್ರತಿಗಾಮಿಯಾಯಿ ತೆಂದುಅದನ್ನು ವಿರೋಧಿಸುತ್ತಿದ್ದ ಸದಾಶಿವ. ಈಶ್ವರನೂ ಹಾಗೆಯೆ. ಕೃಷ್ಣಾಜಿಯ ಬಗೆಗೆ ವೈಯಕ್ತಿಕವಾಗಿ ಅವನಲ್ಲಿ ಯಾವುದೇ ತರದ ದುರಭಿಪ್ರಾಯವಿರಲಿಲ್ಲ.

"ನಿಮ್ಮ ಈ ಬ್ರಾಹ್ಮಣದ್ವೇಷ ನನಗೆ ಸರಿ ಬರುವುದಿಲ್ಲ ಚೆನ್ನಬಸಪ್ಪ. ಇಂಥ ಭಾವನೆಗಳಿಂದ ನಮ್ಮ ದೇಶ ಪ್ರಗತಿ ಹೊಂದುವದಿಲ್ಲ." ಎಂದು ಅನು ಮಾನಿಸುತ್ತ ನುಡಿದ ಈಶ್ವರ.

ಬುದ್ಧಿವಾದವನ್ನು ಸಹನೆಯಿಂದ ಕೇಳಿಕೊಳ್ಳುವುದು ಚೆನ್ನಬಸಪ್ಪನ ಸ್ವಭಾವವಾಗಿರಲಿಲ್ಲ. ಅವನು ಕೆರಳಿ ಕರ್ಕಶಸ್ವರದಲ್ಲಿ ಹೇಳಿದ :

" ಓಹೋ. ಹೀಂಗೇನು ? ನೀವೂ ಜಾತ್ಯಾತೀತರೋ ಏನು ? ನಿಮ್ಮಂಥ ವರನ್ನ ಬಗಲಿಗೆ ಹಾಕಿಕೊಂಡೇ ಆ ಬ್ರಾಹ್ಮಣರು ದರಬಾರ ನಡಸಿದ್ದಾರ."

" ಒಂದು ದೃಷ್ಟಿಯಿಂದ ಪ್ರಭಣ್ಣನೂ ಇವನೂ ಒಂದೇ ರೀತಿಯವರೆಂತ ಕಾಣುತ್ತದೆ," ಎಂದು ಮನಸಿನಲ್ಲಿಯೆ ಹೇಳಿಕೊಂಡು ಈಶ್ವರ ಒಳಗೊಳಗೇ ನಗುತ್ತ ಮೌನವಾಗಿ ಕುಳಿತುಕೊಂಡ. ಐದಾರು ನಿಮಿಷ ಯಾರೂ ಮಾತಾಡಲಿಲ್ಲ. ಅಷ್ಟರಲ್ಲಿ ಒಳಗಡೆಯಿಂದ ಚಹ ಬಂದಿತು.

ಬಿಸಿ ಬಿಸಿ ಚಹ ಗಂಟಲಲ್ಲಿಳಿಯುತ್ತಲೂ ಚೆನ್ನಬಸಪ್ಪನ ಕೋಪ ಕೊಂಚ ಕರಗಿತು. ಅಣಕದ ನಗು ಬೀರುತ್ತಾ ಅವನೆಂದ :

" ಸದಾಶಿವನೂ ನಿಮ್ಮ ಹಂಗ ಜಾತ್ಯಾತೀತನೋ ಏನು ? "

" ಹೌದು. ಅವರೂ ಸಾಧಾರಣ ನನ್ನ ಹಾಗೇ ಅನ್ನಬಹುದು. ನೀವೂ ಇಂದಿಲ್ಲ ನಾಳೆ ನಮ್ಮ ಹಾಗೇ ಆಗಬಹುದು. "

" ಎಂದೆಂದೂ ಇಲ್ಲ. ಈ ಹಾರವನ ಮೇಲೆ ಗುಂಪಾದಾಗಲೇ ನನಗೆ ಸಮಾಧಾನ."

" ಅದಕ್ಕಾಗೇ ರೈತ ಸಂಘಟನೆ ಮಾಡಬೇಕು ಅನ್ನುವಿರೇನು ನೀವು ? "

ಆ ಪ್ರಶ್ನೆಗೆ ಚೆನ್ನಬಸಪ್ಪನಿಂದ ಉತ್ತರ ದೊರೆಯಲಿಲ್ಲ. ಈಶ್ವರನೂ ಅಂದು ಅಷ್ಟಕ್ಕೇ ಮಾತು ನಿಲ್ಲಿಸಿದ.

ಎರಡು ದಿನಗಳ ತರುವಾಯ ಸದಾಶಿವನನ್ನು ಕಂಡಾಗ ಚೆನ್ನಬಸಪ್ಪನ ವೈಶಿಷ್ಟ್ಯಗಳನ್ನು ವಿವರಿಸಿ ಹೇಳಿ ಈಶ್ವರನೆಂದ :

" ನಾವು ಸ್ವಲ್ಪ ಪ್ರಯತ್ನ ಪಟ್ಟರೆ ಚೆನ್ನಬಸಪ್ಪನ ದೃಷ್ಟಿಕೋನವನ್ನು ಬದಲಿಸಲು ಸಾಧ್ಯವಾಗಬಹುದೋ ಏನೊ ಸಮಸ್ಯೆಯ ಆರ್ಥಿಕ ಭಾಗ ಅವನಿಗರ್ಥವಾಗುವಂತೆ ಮಾಡಬೇಕು. ಪಾಪ. ಅವನು ರಾಜಕೀಯವನ್ನು ಅಭ್ಯಾಸಮಾಡಿದವನಲ್ಲ. ನಮ್ಮ ಹಾಗೆ ಮಾರ್ಕ್ಸವಾದವನ್ನೂ ಓದಿಕೊಂಡವನಲ್ಲ. ಮೊದಲು ಅವನು ಓದುವ ಹಾಗೆ ಮಾಡಬೇಕು."

" ಅದೇ ಕಷ್ಟದ ಕೆಲಸ. ಈ ಕಾರ್ಯಕರ್ತರಿಗೆಲ್ಲಾ ಓದುವದೆಂದರಾಗದು. ನಲವತ್ತೊಂರರ ಕಾಲಕ್ಕೆ ನಮ್ಮ ಸಂಗಡ ಜೇಲಿನಲ್ಲಿದ್ದರಲ್ಲ—ಕೆಲವರು ಕಾಂಗ್ರೆಸ್ಸಿಗರು. ಜೇಲಿನಲ್ಲೇ ಇಸ್ಪೀಟು ಆಡುತ್ತಿದ್ದರೇ ಹೊರತು ಪುಸ್ತಕ ಓದಿರೆಂದರೆ

ಓದುತ್ತಿರಲಿಲ್ಲ. ಪುಸ್ತಕ ಇರಲಿ, ಪತ್ರಿಕೆಗಳನ್ನೂ ಸಹ ನೋಡುತ್ತಿರಲಿಲ್ಲ ಅವರು. ನಮಗೆ ಗೊತ್ತಿಲ್ಲದ್ದು ಏನಿರುತ್ತದೆ ಪುಸ್ತಕಗಳಲ್ಲಿ! ಅಂದುಬಿಡುತ್ತಿದ್ದರು. ಏನೋ ಸ್ವಲ್ಪ ಮಟ್ಟಿಗಾದರೂ ರಾಜಕೀಯ ಓದಿಕೊಂಡವನೆಂದರೆ ಒಬ್ಬ ವೀರಣ್ಣ. ಉಳಿದವರಿಗೆಲ್ಲಾ ಜೈ ಅಂದು ಜೇಲಿಗೆ ಹೋಗುವುದೊಂದು ಗೊತ್ತು. ಇಲ್ಲ, ಸ್ಟೇಶನ್ ಸುಡುವದಷ್ಟು ಗೊತ್ತು. ಅವರು ತಿಳಿದುಕೊಂಡಿರುವ ರಾಜಕೀಯ ಅಂದರೆ ಅಷ್ಟೆ," ಎಂದ ಸದಾಶಿವ.

" ಇಂಥ ಕಾರ್ಯಕರ್ತರನ್ನು ಕೂಡಿಕೊಂಡು ಕೆಲಸ ಮಾಡುವದು ಬಹಳ ಕಷ್ಟ ಅಲ್ಲವೇ ಸದಾಶಿವ ? "

"ಅಲ್ಲದೆ? ಎಷ್ಟೋ ಸಲ ನನಗೂ ಬಹಳ ಬೇಸರವಾಗಿ ನನ್ನಷ್ಟಕ್ಕೆ ನಾನು ಇದ್ದುಬಿಡಬೇಕು ಅನ್ನಿಸುತ್ತದೆ. ನಮ್ಮ ಗುಂಪಿನ ಮುಖಂಡ ಸ್ವಾಮಿ ಇದ್ದಾನಲ್ಲಾ, ಅವನೂ ಇಂಥವನೆ. ಏನೂ ಓದುವದು ಬೇಡ. ಸಮಾಜವಾದ ಸಮತಾವಾದ ಓದಿಕೊಳ್ಳಬೇಕಪ್ಪ ಅಂತ ನಾನು ಎಷ್ಟೋ ಸಲ ಹೇಳಿದೆ ಅವನಿಗೆ. " ಕಮ್ಯುನಿಸ್ಟರಿಗಿಂತ ಹೆಚ್ಚಿನ ಕಮ್ಯುನಿಸ್ಟ ನಾನು " ಅಂತ ಹೇಳಿ ನನ್ನನ್ನು ಸುಮ್ಮನಾಗಿಸಿದ. ಒಂದು ತತ್ವಕ್ಕಾಗಿ ವಿಚಾರಪ್ರಣಾಲಿಗಾಗಿ ಕೆಲಸ ಮಾಡಬೇಕೆಂಬ ವಿಚಾರ ಅವನಿಗೂ ಇಲ್ಲ. ಬೇರೆ ಯಾರ ಮಾತನ್ನೂ ಕೇಳುವ ಸ್ವಭಾವವಲ್ಲ ಅವನದು. ಅವನು ಹೇಳಿದಂತೆ ಎಲ್ಲಾ ಆಗಬೇಕು. ಅದು ತಪ್ಪಿರಲಿ, ಸರಿಯಿರಲಿ. ಗುಂಪಿನವರೆಲ್ಲಾ ಅವನ ಅಪ್ಪಣೆಯಂತೆ ನಡೆಯಬೇಕು. ಪೂರ್ವಕಾಲದ ಪಾಳೆಯಗಾರರ ಹಾಗೆ ಇವರ ನಡತೆ. ಈ ಕಾಲದಲ್ಲಿ ಅದು ಯಶಸ್ವಿಯಾಗಲಾರದೆನ್ನುವದನ್ನು ಇವರು ತಿಳಿದುಕೊಳ್ಳುವದಿಲ್ಲ. ಅದಕ್ಕೇ ಇವರು ಮಾಡಿದ್ದೆಲ್ಲಾ ವ್ಯರ್ಥವಾಗಿ ಹೋಗುತ್ತದೆ."

ಒಂದೆರಡು ದಿನ ಕಳೆದ ಬಳಿಕ ಚೆನಬಸಪ್ಪನ ಮನೆಯಲ್ಲಿ ಮೂವರೂ ಸೇರಿ ಮಾತನಾಡಿದರು. ಅಂದೇ ಸಂಜೆ ರಾಮಾಪುರಕ್ಕೆ ಹೋಗಿ ಶಿವಲಿಂಗಯ್ಯನವರನ್ನೂ ಕಂಡರು.

ಅರುವತ್ತು ಅರುವತ್ತೈದರ ವಯಸ್ಸಿನ ಬೆಳ್ಳಿಗೂದಲಿನ ಮುದುಕರಾಗಿದ್ದರೂ ಶಿವಲಿಂಗಯ್ಯನವರು ಮೂವತ್ತೈದರ ಪ್ರಾಯದ ಈಶ್ವರನಿಗಿಂತಲೂ ಹೆಚ್ಚು ಉತ್ಸಾಹಿಯಾಗಿದ್ದರು. ಸತತ ಮೂವತ್ತು ವರ್ಷಗಳ ಕಾಲ ಕಾಂಗ್ರೆ

ಸ್ಸಿಗಾಗಿ ದುಡಿಯುತ್ತ ಬಂದ ಕೆಲವೇ ಜನರಲ್ಲಿ ಅವರೊಬ್ಬರು. ಹಲವು ಚಳುವಳಿಗಳಲ್ಲಿ ಭಾಗವಹಿಸಿ, ಹಲವು ಸಲ ಸೆರೆಮನೆವಾಸವನ್ನನುಭವಿಸಿ, ಹಲವು ಸಲ ಲಾಠಿ ಏಟು ತಿಂದು, ಹಲವು ಸಹಸ್ರ ಹಣವನ್ನು ಕಳೆದುಕೊಂಡು, ಹಲವು ಜನ ಕಾರ್ಯಕರ್ತರನ್ನು ಸಿದ್ಧಗೊಳಿಸಿ, ಕಳ್ಳೇಕಾಯಿ ಜಿಲ್ಲೆಯ ಜನರ ಗೌರವಾದರ ಗಳಿಸಿಕೊಂಡಿದ್ದ ಶಿವಲಿಂಗಯ್ಯನವರು, ರಾಮಾಪುರದಲ್ಲಿ ಕಡಲೆಕಾಯಿ ಕಾರಖಾನೆ ನಡಸುತ್ತ, ಹತ್ತಿ, ಬೆಲ್ಲಗಳಲ್ಲೂ ವ್ಯವಹಾರ ಮಾಡುತ್ತ ವಾಣಿಜ್ಯ ಕ್ಷೇತ್ರದಲ್ಲೂ ಸ್ಥಾನ ಪಡೆದಿದ್ದರು. ಅನೇಕ ಸಂಘ, ಸಂಸ್ಥೆ, ಬ್ಯಾಂಕುಗಳ ಅಧಿಕಾರಸ್ಥಾನಗಳೂ ಅವರಿಗೆ ಲಭಿಸಿದ್ದುವು. ಶಿವಲಿಂಗಯ್ಯನವರಿಲ್ಲದಿದ್ದರೆ ಆ ಭಾಗದಲ್ಲಿ ಯಾವ ಸಾರ್ವಜನಿಕ ಕಾರ್ಯವೂ ನಡೆಯುವಂತಿರಲಿಲ್ಲ. ಅಂತೆಯೇ, ಪಕ್ಷಸ್ಥಾಪನೆಯ ವಿಷಯದಲ್ಲಿ ಎಲ್ಲರಿಗಿಂತ ಮೊದಲು ಶಿವಲಿಂಗಯನವರ ಬೆಂಬಲ ಪಡೆಯಲು ಚೆನ್ನಬಸಪ್ಪ ಹಾತೊರೆಯುತ್ತಿದ್ದುದು.

ಬಂದವರನ್ನು ಚಹಾ ಮತ್ತು ತಿಂಡಿ ಇತ್ತು ಸತ್ಕರಿಸಿದ ಬಳಿಕ ಬೀಡಿಯೊಂದನ್ನು ಹೊತ್ತಿಸಿ ಹೊಗೆಯುಗುಳುತ್ತ ಶಿವಲಿಂಗಯ್ಯನವರು ಚೆನ್ನಬಸಪ್ಪನ ಕಡೆಗೆ ದೃಷ್ಟಿ ತಿರುಗಿಸಿ ಕೇಳಿದರು.

"ಮತ್ತೇನಪಾ ಹೊಸಾ ಸುದ್ದಿ?"

ಹೊಸ ಸಂಘಟನೆಯೊಂದನ್ನು ನಿರ್ಮಿಸುವ ಆಲೋಚನೆಯನ್ನು ಚೆನ್ನಬಸಪ್ಪ ವಿವರಿಸುತ್ತಲೂ ಶಿವಲಿಂಗಯ್ಯನವರು ಎರಡು ಮೂರು ನಿಮಿಷಗಳ ಕಾಲ ಕಣ್ಣು ಮುಚ್ಚಿಕೊಂಡು ಯೋಚಿಸುತ್ತಿದ್ದು ಅನಂತರ ಹೇಳಿದರು:

"ಹೊಸ ಸಂಘಟನಾ ಮಾಡೂದಂದರೆ ಸುಲಭದ ಕೆಲಸವಲ್ಲ. ಎಲ್ಲಾ ಹೊಸದಾಗಿ ಕಟ್ಟಬೇಕಾಗುತ್ತೈತಿ. ನೂರಾರು ಜನರು ಬೇಕು, ಲಕ್ಷಾಂತರ ಹಣ ಬೇಕು. ನೀವು ಮೂವರೇ ಕೂಡಿದರೆ ಆಗುವ ಕೆಲಸ ಏನು ಇದು?"

"ನಿಮ್ಮಂಥಾ ಹಿರಿಯರು ಎದ್ದರೆ ಮಂದಿ ತಾನಾಗೇ ಕೂಡುತ್ತಾರೆ," ಎಂದ ಚೆನ್ನಬಸಪ್ಪ.

"ಹಿರಿಯರು ಎದ್ದರೆ ಮದುವೀ ಮಾಡಬಹುದು. ಸಂಘಟನಾ ಮಾಡೂದು ಮದುವಿಯಷ್ಟು ಸುಲಭ ಅಲ್ಲಪಾ."

"ಕಾಂಗ್ರೆಸ್ಸಿನ ವಿರುದ್ಧ ಏನಾದರೂ ಒಂದು ಶಕ್ತಿ ಬೇಕಲ್ಲ ಅಣ್ಣಾವರೆ?"

“ ಬೇಕು ಅನ್ನೂದೇನೋ ಖರೆ. ಈಗಲೂ ಒಂದೆರಡು ಕಾಂಗ್ರೆಸ್ಸೇತರ ಪಕ್ಷ ಅದಾವಲ್ಲ. ಸಮಾಜವಾದಿ ಪಕ್ಷ ಐತಿ, ಪುರೋಗಾಮಿ ಪಕ್ಷ ಐತಿ....”

“ ಪುರೋಗಾಮಿ ಪಕ್ಷದೊಳಗೇ ಸೇರಿಕೊಂಡರ ಹೆಂಗಾದೀತು ? ರಾಮಣ್ಣನೂ ಬಹಳ ದಿನದಿಂದ ನಮ್ಮನ್ನ ಕರೀತಾ ಇದಾನ,” ಎಂದ ಚೆನ್ನಬಸಪ್ಪ.

“ ಅವ ಕರೆದ, ನೀವು ಹೋದಿರಿ. ಮಂದಿ ನಿಮ್ಮ ಕಡೆ ಬರಬೇಕೋ ಬ್ಯಾಡೋ ? ” ಸ್ವಲ್ಪ ತಡೆದು, ಶಿವಲಿಂಗಯ್ಯನವರು ನಿಧಾನವಾಗಿ ಹೇಳಿದರು. “ ಇವತ್ತು ಕರ್ನಾಟಕದಾಗ ಎಂಥಾ ಪರಿಸ್ಥಿತಿ ಐತಿ ಅನ್ನೂದು ನಿಮಗ ಗೊತ್ತಿಲ್ಲೇನು ? ಬ್ರಾಹ್ಮಣರನ್ನ ನಮ್ಮ ಮಂದಿ ನಂಬುವದಿಲ್ಲ. ರಾಮಣ್ಣ ಎಷ್ಟು ಲಾಗಾ ಹಾಕಿದರೂ ಪುರೋಗಾಮಿ ಪಕ್ಷಕ್ಕ ಲಿಂಗಾಯತರ ಬೆಂಬಲ ಸಿಗೂದಿಲ್ಲ.”

ಸದಾಶಿವ ಈಶ್ವರ ಇಬ್ಬರಿಗೂ ಅವರ ಮಾತು ಒಪ್ಪಿಗೆಯಾಗಲಿಲ್ಲ. ಶಿವಲಿಂಗಯ್ಯನವರ ಬಗೆಗೆ ಸದಾಶಿವನಿಗೆ ವಿಶೇಷವಾದ ಆಸಕ್ತಿಯಿರಲಿಲ್ಲವಾದರೂ ಚೆನ್ನಬಸಪ್ಪನ ಬಲವಂತಕ್ಕೋಸ್ಕರವಾಗಿ ಅವನು ಅವರನ್ನು ಭೇಟಿಯಾಗಲು ಬಂದಿದ್ದನಷ್ಟೆ. ತಾನು ನಿರ್ಮಿಸ ಬಯಸುವ ಸಂಘಟನೆಗೆ ಅವರಿಂದ ಸರಿಯಾದ ರೀತಿಯಲ್ಲಿ ಸಹಾಯದೊರೆಯಲಾರದೆಂದೇ ಅವನು ನಂಬಿಕೊಂಡಿದ್ದ. ತಾನು ಕಟ್ಟಲೆಳಸುವುದು ಬಡವರ ಪಕ್ಷ; ಶಿವಲಿಂಗಯ್ಯನವರಂಥ ಬೂರ್ಜ್ವಾ ಮನೋವೃತ್ತಿಯ ಲಕ್ಷಾಧೀಶರ ಕೈಯಲ್ಲಿ ಇಂಥ ಪಕ್ಷದ ನೇತೃತ್ವ ಒಪ್ಪಿಸುವುದು ಮೂರ್ಖತನವೆಂದು ಅವನ ಭಾವನೆ. ವರ್ಗಪ್ರಜ್ಞೆಯಿಲ್ಲದ ಚೆನ್ನಬಸಪ್ಪನಿಗೆ ಮಾತ್ರ ಅಂಥ ವಿಚಾರ ಹೊಳೆಯುವಂತಿರಲಿಲ್ಲ. ಶಿವಲಿಂಗಯ್ಯನವರಂಥ ಪ್ರಭಾವಶಾಲಿ ಶ್ರೀಮಂತರನ್ನು ಮುಖಂಡರನ್ನಾಗಿ ಮಾಡಿದರೆ ಹೊಸ ಪಕ್ಷ ಕಟ್ಟುವುದು ಸುಲಭವಾಗುವುದೆಂದು ಅವನ ತಿಳಿವಳಿಕೆ. ಈಶ್ವರನಿಗೆ ಅಂಥ ಭ್ರಾಂತಿಯಿರಲಿಲ್ಲವಾದರೂ ಸಂಘಟನೆಯನ್ನು ರೂಪಿಸಲು ಶಿವಲಿಂಗಯ್ಯನವರಿಂದ ಸಿಗುವಷ್ಟು ಸಹಾಯವನ್ನು ಪಡೆದರಾಯಿತೆಂದು ಅವನ ವಿಚಾರ. ಪುರೋಗಾಮಿ ಪಕ್ಷದ ವಿಚಾರವಾಗಿ ಶಿವಲಿಂಗಯ್ಯನವರು ವ್ಯಕ್ತಗೊಳಿಸಿದ ಅಭಿಪ್ರಾಯದ ಬಗೆಗೆ ಅಸಮ್ಮತಿಯನ್ನು ಸೂಚಿಸುತ್ತ ಅವನೆಂದ :

“ ನೀವು ಹೇಳುವದನ್ನು ಒಪ್ಪಲು ಸಾಧ್ಯವಾಗುವದಿಲ್ಲ. ಲಿಂಗಾಯತ

ಬ್ರಾಹ್ಮಣ ಎಂಬ ಭಾವನೆ ಸಾಮಾನ್ಯ ಜನರಲ್ಲಿಲ್ಲ, ತಮ್ಮ ಸ್ವಾರ್ಥಕ್ಕಾಗಿ ಮುಖಂಡರೇ ಅದನ್ನು ಹುಟ್ಟಿಸುತ್ತಾರೆ."

ತಮ್ಮ ವಿಚಾರಕ್ಕೆ ವಿರುದ್ಧವಾದ ಅಭಿಪ್ರಾಯವನ್ನು ತಾಳ್ಮೆಯಿಂದ ಕೇಳಿ ಕೊಳ್ಳುವ ಅಭ್ಯಾಸ ಶಿವಲಿಂಗಯ್ಯನವರದಾಗಿರಲಿಲ್ಲ. ಅವರು ವಯಸ್ಸಿನಲ್ಲಿ ಹಿರಿಯರೂ ಲಕ್ಷಾಧೀಶರೂ ಆಗಿದ್ದುದರಿಂದ ಅವರ ಹತ್ತಿರ ಬರುವವರೆಲ್ಲ ಸಾಮಾನ್ಯವಾಗಿ ಅವರ ಅಭಿಪ್ರಾಯಗಳನ್ನು ವಿರೋಧಿಸುವ ಗೊಡವೆಗೆ ಹೋಗದೆ ತಕ್ಷಣ ಒಪ್ಪಿಕೊಂಡುಬಿಡುತ್ತಿದ್ದರು ಅಂತೆಯೆ, ಅವರ ಅಂಗಡಿ ಯೆಂದರೆ ಹೌದಪ್ಪನ ಚಾವಡಿಯಂತಾಗಿತ್ತು. ಅವರು 'ಹೌದು' ಎಂದಾಗ ಎಲ್ಲರೂ 'ಹೌದು' ಎನ್ನುತ್ತಿದ್ದರು, 'ಅಲ್ಲ' ಎಂದಾಗ 'ಅಲ್ಲ' ಎನ್ನುತ್ತಿದ್ದರು. ಅನೇಕ ವರ್ಷಗಳ ಕಾಲ ಹಾಗೆಯೇ ನಡೆದಿದ್ದುದರಿಂದ ತಾವು ಹೇಳುವುದೆಲ್ಲ ಪರಮಸತ್ಯ, ವೇದ ವಾಕ್ಯವೆನ್ನುವ ತಪ್ಪು ಕಲ್ಪನೆ ಶಿವಲಿಂಗಯ್ಯನವರಲ್ಲಿ ಸಹಜ ವಾಗಿಯೆ ಬೇರೂರಿಕೊಂಡಿತ್ತು ತಮ್ಮ ಅಭಿಪ್ರಾಯವನ್ನು ಯಾರಾದ ರೊಬ್ಬರು ಒಪ್ಪದಿದ್ದಾಗ ಅವರಿಗೆ ಸ್ವಾಭಾವಿಕವಾಗಿ ಕೋಪ ಬರುತ್ತಿತ್ತು. ಈಶ್ವರನ ಮಾತಿನಿಂದಾಗಿ ಈಗಲೂ ಅವರಿಗೆ ವಿಪರೀತ ಕೋಪವೇರಿತು. ಅದು ವರೆಗೆ ಶಾಂತವಾಗಿ ಮಾತನಾಡುತ್ತಿದ್ದ ಶಿವಲಿಂಗಯ್ಯನವರು ಆಗ ಧ್ವನಿಯ ನ್ನೇರಿಸಿ, ಈಶ್ವರನನ್ನು ತೀಕ್ಷ್ಣದೃಷ್ಟಿಯಿಂದ ನಿಟ್ಟಿಸುತ್ತ,

"ಅಂದರೆ? ನಾವೇ ಜಾತಿಯಭಾವನಾ ಹುಟ್ಟಿಸುತೀವಿ ಅಂತ ನೀವನ್ನು ತೀರೇನು?" ಎಂದರು.

ಅವರ ಕೋಪವನ್ನೂ ಉದ್ರೇಕವನ್ನೂ ಕಂಡು ಕೊಂಚವೂ ಅಪ್ರತಿಭ ನಾಗದೆ ಈಶ್ವರ ಚೇಷ್ಟೆಯ ಸ್ವರದಲ್ಲಿ ನುಡಿದ:

"ನೀವು ಅಂತ ಎಲ್ಲಿ ಹೇಳಿದೆ ನಾನು? ಮುಖಂಡರು ಅಂತ ಅಂದೆನಲ್ಲ! ಈಗ ನೋಡಿರಿ. ಜಿಲ್ಲಾ ಕಾಂಗ್ರೆಸ್ಸಿನ ಅಧಿಕಾರ ಕೃಷ್ಣಾಜಿಯ ಕೈಯಲ್ಲಿದ್ದರೂ ಲಿಂಗಾಯತರ ಬೆಂಬಲ ತಪ್ಪಿಲ್ಲವಲ್ಲ ಕಾಂಗ್ರೆಸ್ಸಿಗೆ?"

ಕೋಪವನ್ನು ನುಂಗಿಕೊಂಡು ಶಿವಲಿಂಗಯ್ಯನವರು ಶಾಂತರಾದರು. ಈಶ್ವರನ ವಾದವನ್ನು ಖಂಡಿಸಲು ಅವರಲ್ಲಿ ಆಧಾರವೇ ಇರಲಿಲ್ಲ. ಮತ್ತೊಂದು ಬೀಡಿಯನ್ನು ಹೊತ್ತಿಸಿ, ದಿಂಬಿಗೊರಗಿಅವರು ಮೌನವಾಗಿ ಕುಳಿತುಕೊಂಡರು.

ಶಿವಲಿಂಗಯ್ಯನವರನ್ನು ರೇಗಿಸುವಂತೆ ಈಶ್ವರ ಮಾತನಾಡಿದುದು ಚೆನ್ನ ಬಸಪ್ಪನಿಗೂ ಹಿಡಿಸಲಿಲ್ಲ. ಹಾದಿ ಬಿಟ್ಟು ಮಾತನಾಡಿ ಈಶ್ವರ ಕೆಲಸ ಕೆಡಿಸಿದನಲ್ಲಾ ಎಂದು ಅವನಿಗೂ ಸಿಟ್ಟುಬಂದಿತು.

"ಅಣ್ಣಾವರು ಅನ್ನುವದೇ ಖರೆ. ಹಿರಿಯರು ಅನುಭವದಿಂದ ಹೇಳುತ್ತಾರೆ. ಅವರಿಗಿಂತ ಹೆಚ್ಚು ತಿಳೀತೈತೇನು ನಿಮಗೆ?" ಎಂದ ಚೆನ್ನಬಸಪ್ಪ.

ಆ ಮಾತಿಗೆ ಉತ್ತರವೀಯುವ ಗೊಡವೆಗೆ ಬೀಳದೆ ಈಶ್ವರನೂ ಸುಮ್ಮನೆ ಕುಳಿತ. ಸದಾಶಿವನಿಗಂತೂ ಅವೆಲ್ಲವೂ ವ್ಯರ್ಥ ಚರ್ಚೆಯೆನ್ನಿಸಿತ್ತು. ಅವನು ಬಿಗಿದ ತುಟಿ ಬಿಚ್ಚಿರಲಿಲ್ಲ.

ಐದಾರು ನಿಮಿಷ ಹಾಗೆ ಕಳೆದ ಬಳಿಕ ಮತ್ತೆ ಚೆನ್ನಬಸಪ್ಪನೇ ಕೇಳಿದ:

"ಹಂಗಾದರ ಏನು ಮಾಡೂಣಂತೀರಿ ಅಣ್ಣಾವರೆ?"

"ಏನಾದರೂ ತಿಳಿದದ್ದು ಮಾಡಿಕೊಳ್ಳಿರಿ. ಇವರಿಬ್ಬರೂ ಬುದ್ಧಿವಂತರಿರುವಾಗ ನನ್ನೇನು ಕೇಳುತೀಯಪ್ಪ?" ಎಂದರು ಶಿವಲಿಂಗಯ್ಯ.

"ನಾವು ಹೊರಡುತ್ತೇವೆ, ಹಾಗಾದರೆ," ಎಂದು ಮೇಲಕ್ಕೆದ್ದ ಸದಾಶಿವ.

"ಹೋಗಿ ಬರ್ರಿ" ಎಂದು ಶಿವಲಿಂಗಯ್ಯನವರೂ ಎದ್ದುಬಿಟ್ಟರು.

ಚೆನ್ನಬಸಪ್ಪ ಕೈ ಹಿಸುಕಿಕೊಳ್ಳುತ್ತ ಎದ್ದು ಹೊರಡಬೇಕಾಯಿತು.

ರಾಮಾಪುರದಿಂದ ನಡೆದು ಬರುತ್ತಾ ಹಾದಿಯಲ್ಲಿ ಅವನು ಹೇಳಿದ:

"ನಿಮಗ ಏನೇನೂ ತಿಳಿಯೂದಿಲ್ಲ ಈಶ್ವರ. ಅಣ್ಣಾವರಿಗೆ ಹಾಂಗೆಲ್ಲಾ ಮಾತಾಡಿದರ ಹೆಂಗ?"

"ಅವರು ಹೇಳಿದ್ದಕ್ಕೆಲ್ಲ ಸೈ ಎನ್ನುವದು ನನ್ನಿಂದಾಗದು," ಎಂದ ಈಶ್ವರ.

"ಈಶ್ವರ ಸತ್ಯವನ್ನೇ ಹೇಳಿದರಲ್ಲ ಚೆನ್ನಬಸಪ್ಪ. ನಿಮ್ಮ ಅಣ್ಣಾವರಿಗೆ ಸಿಟ್ಟೇಕೆ ಬರಬೇಕು? ನಿಮಗೂ ಬಹಳ ಬೇಗ ಸಿಟ್ಟು ಬರುತ್ತದೆಂತ ಕಾಣುತ್ತದೆ. ಹೀಗೆ ಮಾತು ಮಾತಿಗೆ ಸಿಟ್ಟು ಮಾಡಿಕೊಳ್ಳುವವರಿಂದ ಯಾವ ಕೆಲಸವೂ ಆಗುವದಿಲ್ಲ," ಎಂದ ಸದಾಶಿವ.

೧೦

ದೊಡ್ಡ ಮಲ್ಲಾಪುರದ ಕಿರಾಣಿ ಅಂಗಡಿಗಳಲ್ಲೆಲ್ಲ ದೊಡ್ಡದಾದುದೆಂದರೆ ಧರ್ಮಣ್ಣನ ಅಂಗಡಿ. ದೊಡ್ಡ ನಗರದಲ್ಲಿ ಸಿಗುವ ಸಾಮಾನುಗಳೆಲ್ಲ ಸಾಮಾನ್ಯ ವಾಗಿ ಧರ್ಮಣ್ಣನ ಅಂಗಡಿಯಲ್ಲೂ ದೊರೆಯುತ್ತವೆ. ಹಳ್ಳಿಗಳ ಅಂಗಡಿಗಳಲ್ಲಿ ಅಪರೂಪವಾಗಿ ಕಾಣಿಸುವ ಗಾಜಿನ ಬೇರುಗಳನ್ನೂ ಅವನು ಇರಿಸಿದ್ದಾನೆ. ಚುರಮರಿ ಪುಠಾಣಿಗಳನ್ನು ಮೊದಲು ಮಾಡಿಕೊಂಡು ಬಿಸ್ಕತ್ತು, ಪೆಪ್ಪರ್ ಮೆಂಟುಗಳ ವರೆಗೆ ಎಲ್ಲ ಪ್ರಕಾರದ ತಿಂಡಿಗಳೂ ಅವನಲ್ಲಿ ದೊರೆಯುತ್ತವೆ. ಹಳ್ಳಿಯಲ್ಲಿ ಸೀಮೆಯೆಣ್ಣೆ ಸಿಕ್ಕುವುದೂ ಅವನ ಅಂಗಡಿಯಲ್ಲಿಯೆ. ಕೃಷ್ಣಾಜಿ ಯನ್ನು ಕಾಡಿ ಬೇಡಿ ಅವನು ಎಣ್ಣೆಯ ಲೈಸೆನ್ಸ್ ಪಡೆದುಕೊಂಡದ್ದು ಒಂದು ಕತೆಯೆ. ಅಂದಿನಿಂದ ಧರ್ಮಣ್ಣ ಕೃಷ್ಣಾಜಿಯ ಪರಮ ಭಕ್ತನಾಗಿಬಿಟ್ಟಿದ್ದಾನೆ. ೧೯೪೫ರ ವರೆಗೂ ಕಾಂಗ್ರೆಸ್ಸಿನ ಕಡುವೈರಿಯಾಗಿದ್ದ ಆತ ಸೀಮೆಯೆಣ್ಣೆ ಲೈಸೆನ್ಸ್ ಸಿಗುತ್ತಲೂ ಖಾದಿ ಧರಿಸಿ, ತಲೆಗೆ ಗಾಂಧಿ ಟೋಪಿ ಇಟ್ಟುಕೊಂಡು ಕಾಂಗ್ರೆಸ್ಸಿನ ಕಡು ಅಭಿಮಾನಿಯಂತೆ ನಟಿಸತೊಡಗಿದ್ದಾನೆ. ಸೀಮೆಯೆಣ್ಣೆ ಯನ್ನು ಕಳ್ಳತನದಿಂದ ವಿಕ್ರಯಿಸಿ ಅವನು ಪಡೆದ ಲಾಭಕ್ಕೆ ಲೆಕ್ಕವಿಲ್ಲ. ಆ ಹಣದಿಂದಲೆ ಅವನು ನರಹರಿರಾಯರ ಭೂಮಿಯನ್ನು ಖರೀದಿ ಮಾಡಿದನೆಂದು ಜನರ ಹೇಳಿಕೆ. ಧರ್ಮಣ್ಣ 'ಕಾಂಗ್ರೆಸ್ಸಿಗ' ನಾದಂದಿನಿಂದ ಮಲ್ಲಾಪುರದ ಕಾಂಗ್ರೆಸ್ ಕಾರ್ಯಕರ್ತರಿಗೆಲ್ಲ ಆಶ್ರಯದಾತನಾಗಿದ್ದಾನೆ. ಅವನ ಅಂಗಡಿಯ ಒಳಭಾಗದಲ್ಲಿರುವ ಖಾಲಿ ಜಾಗದಲ್ಲಿ ಕುಳಿತು ಮಲ್ಲಪ್ಪ, ಚಿಮಣಾಜಿ, ಚಿಕ್ಕ ವೀರಪ್ಪ ಮೊದಲಾದವರು ಇಸ್ಪೀಟು ಆಡುವುದುಂಟು. ವ್ಯಾಪಾರಕ್ಕೆ ಮಗನನ್ನು ಕೂಡಿಸಿ ಧರ್ಮಣ್ಣನೂ ಆಟದಲ್ಲಿ ಭಾಗವಹಿಸುವುದುಂಟು.

ಮಲ್ಲಪ್ಪ, ಚಿಮಣಾಜಿ, ಚಿಕ್ಕವೀರಪ್ಪ ಮೂವರೂ ನಿರುದ್ಯೋಗಿಗಳೆಂದೇ

ಹೇಳಬೇಕು. ಮಲ್ಲಪ್ಪ ಮತ್ತು ಚಿಕ್ಕವೀರಪ್ಪನಿಗೆ ಭೂಮಿಯಲ್ಲಿ ಬೆವರಿಳಿಸಿ ದುಡಿಯುವುದೆಂದರಾಗದು. ಕಾಂಗ್ರೆಸ್ ಮುಖಂಡರಾದ ತಾವು ಇತರ ರೈತರ ಹಾಗೆ ಕುರುಪಿ ಹಿಡಿದು ಕಸ ಕೆತ್ತುವುದು ತಮ್ಮ ವ್ಯಕ್ತಿತ್ವಕ್ಕೆ ಕುಂದು ಎಂದೂ ಅವರ ತಿಳಿವಳಿಕೆ. ಸ್ವಾವಲಂಬನಕ್ಕೆ ಗಾಂಧೀಜಿಯಿತ್ತ ಮಹತ್ವವನ್ನು ಅವ ರೆಂದೂ ಗಮನಿಸಿದವರಲ್ಲ. ಹೊಲದ ಕೆಲಸಕ್ಕೆ ಸಂಬಳದ ಆಳುಗಳನ್ನಿಟ್ಟು, ತಾವು ಮಾತ್ರ ಸುಖವಾಗಿ ಕಾಲ ಕಳೆಯುತ್ತಿದ್ದರು. ಯಾವನೊಬ್ಬ ರೈತನಿಗೆ ನಗರದಲ್ಲಿ ಯಾವುದೊಂದು ಕೆಲಸವಾಗಬೇಕಿದ್ದಲ್ಲಿ ಅವನು ಮಲ್ಲಪ್ಪನನ್ನು ಹುಡುಕಿಕೊಂಡು ಧರ್ಮಣ್ಣನ ಅಂಗಡಿಗೆ ಬರುತ್ತಿದ್ದ. ಆಟವನ್ನು ನಿಲ್ಲಿಸಿ ಮಲ್ಲಪ್ಪ ಆ ರೈತನನ್ನು ಕರೆದುಕೊಂಡು ಕಛೇರಿಗೆ ಹೋಗಿ, ಸಂಬಂಧಪಟ್ಟ ಅಧಿಕಾರಿಗೆ ಹತ್ತಿಪ್ಪತ್ತು ಲಂಚ ಕೊಡಿಸಿ, ಅದರಲ್ಲಿ ಅರ್ಧವನ್ನು ತನ್ನ ಕಿಸೆಗೆ ಸೇರಿಸಿ, ಅದೊಂದು ರಾತ್ರಿ ನಗರದಲ್ಲಿಯೆ ವಸತಿ ಮಾಡಿ ಊಟ, ತಿಂಡಿ, ಚಹ, ಬೀಡಿ ಮೊದಲಾದುವುಗಳ ಖರ್ಚೆಲ್ಲವನ್ನೂ ಆ ರೈತನಿಂದ ಕಿತ್ತುಕೊಂಡು ಊರಿಗೆ ಬರುತ್ತಿದ್ದ. ಸರಕಾರದ ಎಲ್ಲ ಶಾಖೆಗಳ ಅಧಿಕಾರಿಗಳೂ ಅವನಿಗೆ ಪರಿ ಚಿತರಾಗಿದ್ದರು. ಪುಕ್ಕಟೆಯಾಗಿ ನಡೆಯಬೇಕಾದ ಕೆಲಸಕ್ಕೆ ಲಂಚ ಕೊಡಿಸುವ ಇಂಥ ಹಸ್ತಕರು ತಾವಾಗಿಯೆ ಮುಂದೆ ಬಂದರೆ ಯಾರು ತಾನೆ ಬೇಡವೆಂ ದಾರು? ಲಂಚ ಕೊಡುವವರನ್ನೂ ತೆಗೆದುಕೊಳ್ಳುವವರನ್ನೂ ಹಿಡಿಯಲು ವಿಶೇಷ ಪೋಲೀಸ್ ಪಡೆಯೊಂದರ ವ್ಯವಸ್ಥೆಯಿದ್ದಿತಾದರೂ ಆದರ ಅಧಿಕಾರಿ ಗಳೂ ಲಂಚಕ್ಕೆ ಕೈಯೊಡ್ಡುವವರೇ ಆಗಿದ್ದರು. ಅಲ್ಲದೆ, ಲಂಚ ಕೊಡಿಸುವ ಈ ದಲ್ಲಾಳಿಗಳು ಆಳುವ ಪಕ್ಷಕ್ಕೇ ಸೇರಿದವರು, ಖಾದಿಧಾರಿಗಳು. ಅವರ ವಿರುದ್ಧ ಕ್ರಮ ತೆಗೆದುಕೊಳ್ಳಲು ಅಧಿಕಾರಿಗಳಿಗೂ ಸಹಜ ಭೀತಿ. ಅಂತೆಯೆ, ಮಲ್ಲಪ್ಪನಂಥವರ ದಲ್ಲಾಳಿ ಕೆಲಸ ನಿರ್ವಿಘ್ನವಾಗಿ ನಡೆದಿತ್ತು. ನ್ಯಾಯಾಸ್ಥಾನ ದಲ್ಲಿ ಒಂದು ಅರ್ಜಿ ವಿಚಾರಣೆಗೆ ಬರಬೇಕಾದಾಗ ಕೂಡ ಮಲ್ಲಪ್ಪ ಮಧ್ಯಸ್ಥಿಕೆ ಮಾಡಬೇಕಾಗುತಿತ್ತು. ಕೋರ್ಟಿನ ಕಾರಕೂನನ ಕೈಬೆಚ್ಚಗೆ ಮಾಡಿದಾಗಲೆ ಅವನು ಅರ್ಜಿಯನ್ನು ಫೈಲಿನಿಂದ ಈಚೆಗೆ ತೆಗೆಯುತ್ತಿದ್ದ. ಅವನು ಮನಸ್ಸು ಮಾಡದಿದ್ದಲ್ಲಿ ಅರ್ಜಿಗಳು ವರ್ಷಗಳ ವರೆಗೆ ಹಾಗೆಯೆ ಫೈಲಿನಲ್ಲಿ ಕೊಳೆಯುತ್ತ ಬೀಳುತ್ತಿದ್ದುವು. ಅಂತೆಯೆ, ರೈತರೆಲ್ಲರೂ ಮಲ್ಲಪ್ಪನ ಬಳಿಗೆ ಧಾವಿಸುತ್ತಿದ್ದುದು.

ಕೊಲೆ ಮಾಡಿದ ಆಸಾಮಿಗಳನ್ನೂ ಸಹ ಉಳಿಸಬಲ್ಲ ಸಾಮರ್ಥ್ಯ ಮಲ್ಲಪ್ಪನಲ್ಲಿ ದೆಯೆಂದು ಜನರು ಆಡಿಕೊಳ್ಳುತ್ತಿದ್ದರು. ಅದು ಅತಿಶಯೋಕ್ತಿಯೂ ಆಗಿರಲಿಲ್ಲ. ನಾಲ್ಕೈದು ಸಾವಿರ ರೂಪಾಯಿಗಳನ್ನುಳ್ಳವನು ಕೊಲೆ ಮಾಡಿಯೂ ಶಿಕ್ಷೆಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುತಿತ್ತು. ಸಾಕ್ಷಿ ಪುರಾವೆ ಸಿಗದಂತೆ ಮಾಡಿ, ಪೋಲೀಸರಿಗೂ ಜ್ಯೂರಿಗಳಿಗೂ ವಕೀಲರಿಗೂ ಲಂಚ ಕೊಟ್ಟು, ಆಪಾದಿತನನ್ನು 'ನಿರ್ದೋಷಿ' ಯನ್ನಾಗಿ ಮಾಡಿಸುತ್ತಿದ್ದ ಮಲ್ಲಪ್ಪ. 'ಲಂಚಬಡಕ ಮಲ್ಲ' ಎಂಬುದಾಗಿ ಸುತ್ತಲಿನ ಸೀಮೆಯಲ್ಲೆಲ್ಲ ಅವನ ಹೆಸರು ಪ್ರಖ್ಯಾತಿ ಪಡೆದಿತ್ತು.

ಚಿಕ್ಕವೀರಪ್ಪ ಮಲ್ಲಪ್ಪನಷ್ಟು ಪ್ರಸಿದ್ಧ ವ್ಯಕ್ತಿಯೇನೂ ಆಗಿರಲಿಲ್ಲವಾದರೂ ಅವನಿಗಿಂತ ಬುದ್ಧಿವಂತನಾಗಿದ್ದ. ಆ ಹಳ್ಳಿಯ ವಿವಿಧೋದ್ದೇಶ ಸಹಕಾರಿ ಸಂಘದ ಕಾರ್ಯದರ್ಶಿಯಾಗಿದ್ದ ಅವನು ಐದಾರು ವರ್ಷಗಳ ಅವಧಿಯಲ್ಲಿ ಎರಡು ಮನೆಗಳನ್ನು ಕಟ್ಟಿಸಿದ್ದನಲ್ಲದೆ ಹತ್ತಿಪ್ಪತ್ತು ಸಾವಿರದಷ್ಟು ಹಣವನ್ನು ಬ್ಯಾಂಕಿನಲ್ಲೂ ತೊಡಗಿಸಿದ್ದ. ಜಿಲ್ಲೆಯ ಪೂರೈಕೆ ಸಮಿತಿಗೆ ಕೃಷ್ಣಾಜಿಯೆ ಕಾರ್ಯದರ್ಶಿಯಾಗಿದ್ದುದರಿಂದ ಅವನ ಕೃಪಾಪಾತ್ರ ಜನರ ಕೈಯಲ್ಲಿದ್ದ ಈ ಸಹಕಾರಿ ಸಂಘಕ್ಕೆ ಕಾಳು, ಸಕ್ಕರೆ, ಬಟ್ಟೆಗಳನ್ನು ವಿಕ್ರಯಿಸುವ ಗುತ್ತಿಗೆ ಲಭಿಸಿತ್ತು. ನಿಯಂತ್ರಣಗಳ ಕಾಲ. ಚಿಕ್ಕವೀರಪ್ಪನ ಸಹಕಾರಿ ಅಂಗಡಿಗೆ ಬಂದ ಸಾಮಾನುಗಳಲ್ಲಿ ಹೆಚ್ಚಿನ ಭಾಗ ಕಳ್ಳಪೇಟೆಯಲ್ಲಿ ಮಾರಾಟವಾಗುತ್ತಿತ್ತು. ಲೆಕ್ಕಪತ್ರಗಳಲ್ಲಿ ಕುತಂತ್ರ ನಡಸಿ, ಸಂಘಕ್ಕೆ ಕಾಸಿನ ಲಾಭವನ್ನು ತೋರಿಸದೆ ಕಾರ್ಯದರ್ಶಿ ಚಿಕ್ಕವೀರಪ್ಪ ಐವತ್ತು ಸಾವಿರದ ಧನಿಕನಾಗಿದ್ದ. ಹಳ್ಳಿಯಲ್ಲಿನ ಹತ್ತಿಪ್ಪತ್ತು ಗರಡಿಯಾಳುಗಳಿಗೆ ಆಗಾಗ ಅಕ್ಕಿಯನ್ನೋ ಸಕ್ಕರೆಯನ್ನೋ ಉಚಿತವಾಗಿ ಕೊಡುತ್ತ ಅವರನ್ನು ತನ್ನ ಬೆಂಬಲಕ್ಕಿಟ್ಟುಕೊಳ್ಳುವ ಚಾಣಾಕ್ಷತನವೂ ಅವನಲ್ಲಿತ್ತು. ಅವನ ವಿರುದ್ಧವಾಗಿ ಮೂಕರ್ಜಿ ಬರೆಯುವ ಧೈರ್ಯ ಆ ಹಳ್ಳಿಯವರಾರಲ್ಲೂ ಇರಲಿಲ್ಲ. ಕಾಂಗ್ರೆಸ್ಸಿಗನಾದ ಚಿಕ್ಕವೀರಪ್ಪನಿಗೆ ಧರ್ಮಣ್ಣ, ಮಲ್ಲಪ್ಪ, ನರಹರಿರಾಯರು ಮೊದಲಾದವರ ಬೆಂಬಲವೂ ಇದ್ದಿತಾದುದರಿಂದ ಅವನನ್ನು ಕೆಣಕಲು ಯಾರೂ ಮುಂದೆ ಬರುತ್ತಿರಲಿಲ್ಲ. ಸಾಕಷ್ಟು ಹಣ ಕೈಗೆ ಬಂದಂದಿನಿಂದ ಚಿಕ್ಕವೀರಪ್ಪ ವಿಲಾಸಪ್ರಿಯನಾಗಿ ಅಂಗಡಿಯ ವ್ಯವಹಾರವನ್ನು ಮಗನಿ

ಗೊಪ್ಪಿಸಿ ತಾನು ಧರ್ಮಣ್ಣನ ಅಂಗಡಿಯಲ್ಲಿ ಇಸ್ಪೀಟು ಆಡುತ್ತ ಕಾಲ ಕಳೆಯುತ್ತಿದ್ದ.

ಚಿಮಣಾಜಿ ಮಲ್ಲಪ್ಪನಂತೆ ಲಂಚದ ವ್ಯವಹಾರವನ್ನು ಮಾಡುತ್ತಿರಲಿಲ್ಲ, ಚಿಕ್ಕವೀರಪ್ಪನಂತೆ ಕಳ್ಳ ವ್ಯಾಪಾರವನ್ನೂ ಮಾಡುತ್ತಿರಲಿಲ್ಲ. ಇವರಿಬ್ಬರಿಗಿಂತ ಅವನು ಹೆಚ್ಚು ಬುದ್ಧಿವಂತನಾದರೂ ಆ ಬುದ್ಧಿವಂತಿಕೆಯನ್ನು ಸ್ವಾರ್ಥಕ್ಕಾಗಿ ಉಪಯೋಗಿಸಿಕೊಳ್ಳುವ ಕೌಶಲ ಮಾತ್ರ ಅವನಲ್ಲಿರಲಿಲ್ಲ. ಅಂತೆಯೆ, ಇಪ್ಪತ್ತು ವರ್ಷಗಳ ವರೆಗೆ ಅವನು ಕಾಂಗ್ರೆಸ್ಸಿಗಾಗಿ ದುಡಿದಿದ್ದರೂ ಯಾವ ಅಧಿಕಾರ ಸ್ಥಾನವನ್ನೂ ಹಿಡಿದುಕೊಳ್ಳದೆ ಮೊದಲಿನಂತೆಯೆ ಸಾಮಾನ್ಯ ಕಾರ್ಯಕರ್ತನಾಗಿ ಉಳಿದಿದ್ದ. ನರಹರಿರಾಯರ ಆಶ್ರಯದಲ್ಲಿದ್ದುಕೊಂಡು ರಾಷ್ಟ್ರೀಯ ಕಾರ್ಯ ಮಾಡಲು ಮಲ್ಲಾಪುರಕ್ಕೆ ಬಂದಿದ್ದ ಚಿಮಣಾಜಿ ಈಗಲೂ ಅವರ ಆಶ್ರಯದಲ್ಲೇ ಜೀವಿಸುತ್ತಿದ್ದ. ನರಹರಿರಾಯರ ಕಾರಭಾರಿಯಾಗಿದ್ದ ಚಿಂತೋಪಂತನಲ್ಲಿ ಅವನಿಗೆ ಊಟ ತಿಂಡಿ, ಬೆಳಿಗ್ಗೆ ಮತ್ತು ಸಾಯಂಕಾಲ ಎರಡೂ ಹೊತ್ತು ಎರಡು ತಂಬಿಗೆಗಳಷ್ಟು ಹಾಲು ದೊರೆಯುವ ವ್ಯವಸ್ಥೆಯಿತ್ತು. ಅವನ ಬಟ್ಟೆಬರೆಗಳಿಗಾಗಿ ಪ್ರವಾಸಕ್ಕಾಗಿ ಇನ್ನಿತರ ಬಾಬುಗಳಿಗಾಗಿ ಅವಶ್ಯವಿದ್ದ ಹಣವೂ ನರಹರಿರಾಯರಿಂದಲೇ ಸಿಕ್ಕುತ್ತಿತ್ತು. ಕಳ್ಳೀಕಾಯಿಗೆ ಹೋದಾಗಲಂತೂ ಅವನು ಅವರ ಬಂಗಲೆಯಲ್ಲಿಯೆ ಉಳಿದುಕೊಳ್ಳುತ್ತಿದ್ದ. ಮಲ್ಲಾಪುರದಲ್ಲಿದ್ದಾಗ ಇರುಳನ್ನು ಸುಂದರಾಬಾಯಿಯ ಮನೆಯಲ್ಲೂ ಹಗಲನ್ನು ಧರ್ಮಣ್ಣನ ಅಂಗಡಿಯಲ್ಲೂ ಕಳೆಯುತ್ತಿದ್ದ. ಚಿಮಣಾಜಿ ಬಲು ಸೊಗಸುಗಾರ. ಪಂಡಿತ ನೆಹರು ಅವರಂತೆ ಖಾದಿಯ ಶೆರ್‌ವಾನಿಯನ್ನೂ ಜೋಧಪುರಿ ಪಾಯಿಜಾಮವನ್ನೂ ಧರಿಸಿ, ಕಾಲಗಳಲ್ಲಿ ಪಂಪ್ ಷೂ ಹಾಕಿಕೊಂಡು, ತಲೆಯ ಮೇಲೆ ಓರೆಯಾಗಿ ಗಾಂಧಿ ಟೋಪಿ ಇಟ್ಟುಕೊಂಡು ಗಂಭೀರವಾಗಿ ಹೆಜ್ಜೆಯಿಡುತ್ತ ಹೋಗುವ ಚಿಮಣಾಜಿ ಆ ಭಾಗದ ರೈತರೆಲ್ಲರ ಹಾಸ್ಯದ ವಸ್ತುವಾಗಿ ಪರಿಣಮಿಸಿದ್ದ. "ಒಳ್ಳೇ ಚಿಮಣಾ*ನ ಹಂಗs ಇದಾನಪಾ ಇವ" ಎಂದು ನಗುವವರಿಗೇನೂ ಕೊರತೆಯಿರಲಿಲ್ಲ. ಮಹಾರಾಷ್ಟ್ರೀಯನಾಗಿದ್ದ ಚಿಮಣಾಜಿಯ ಹರಕುಮುರಕು

---

* ಬಯಲಾಟಗಳಲ್ಲಿ ಸ್ತ್ರೀ ಪಾತ್ರ ವಹಿಸುವವರನ್ನು ಉತ್ತರ ಕರ್ಣಾಟಕದಲ್ಲಿ 'ಚಿಮಣಾ' ಎಂದು ಕರೆಯುತ್ತಾರೆ.

ಕನ್ನಡವೂ ಹಳ್ಳಿಗರಿಗೊಂದು ಚೇಷ್ಟೆಯ ವಿಷಯವಾಗಿತ್ತು. ಅನೇಕ ವರ್ಷಗಳ ವರೆಗೆ 'ಬ್ರಹ್ಮಚಾರಿ' ಯಾಗಿದ್ದ ಅವನು ಸುಂದರಾಬಾಯಿಯ ಮೋಹದ ಬಲೆಗೆ ಬಿದ್ದಂದಿನಿಂದಲಂತೂ ಹಳ್ಳಿಗರು ಅವನನ್ನು ಕಂಡೊಡನೆ ಅವನೆದುರಿಗೇ ನಗುವುದಕ್ಕಾರಂಭವಾಗಿತ್ತು. ಚಿಮಣಾಜಿ ಬಲು ತಾಳ್ಮೆಯ ವ್ಯಕ್ತಿ. ರೈತರು ತನ್ನನ್ನುದ್ದೇಶಿಸಿ ನಗುವುದನ್ನು ಕಂಡಾಗ ಅವನು ಕೋಪವನ್ನು ಪ್ರದರ್ಶಿಸದೆ ಅವರೊಡನೆ ತಾನೂ ನಕ್ಕು ತನ್ನ ಹಾದಿ ಹಿಡಿದುಹೋಗುತ್ತಿದ್ದ. "ಸುಂದರಾನ್ನ ಮದುವೆ ಮಾಡಿಕೊಂಡು ಬಿಡೋ ಚಿಮಣಾಜಿ. ಸುಮ್ಮನೆ ಯಾಕೆ ನಿಂದೆಗೆ ಗುರಿಯಾಗುತ್ತೀ ?" ಎಂದು ಧರ್ಮಣ್ಣ ಒಂದೆರಡು ಬಾರಿ ಹೇಳಿದಾಗ ಚಿಮಣಾಜಿ ಮುಗುಳ್ನಕ್ಕು "ಮುದುಕನಾಗುತ ಬಂದಿದ್ದೀನು. ಈಗ ಲಗ್ನ ಮಾಡಿಕೊಂಡೆನು ಅಂದರೆ ಲೋಕ ಪಡೂನ ಪಡೂನ* ನಕ್ಕೀತು" ಎನ್ನುತ್ತ ಬಂದಿದ್ದ.

"ನಗುವವರಿಗೇನು ಬಿಡೋ ಚಿಮಣಾಜಿ. ಮುಂದಿಯೇನು ಹೆಂಗಿದ್ದರೂ ನಗುವವರೇ. ಈಗ ನಗುವದಿಲ್ಲವೇನು ನಿನಗೆ ?"

"ಈಗ ನಗುವದು ಬೇರೆ. ಆಮೇಲೆ ನಗುವದು ಬೇರೆ. ಏನೂ ಬೇಡಾ ಬಿಡಪ್ಪ. ಹೀಗೇ ಇರುತೇನೆ" ಎನ್ನುತ್ತಿದ್ದ ಚಿಮಣಾಜಿ. ಐವತ್ತು ವರ್ಷಗಳಿಂದ ತಾನು ಕಟ್ಟುನಿಟ್ಟಾಗಿ ಕಾಪಾಡಿಕೊಂಡು ಬಂದಿದ್ದ ಬ್ರಹ್ಮಚರ್ಯ ಸುಂದರಾಬಾಯಿಯ ಮೋಹಕ್ಕೆ ಬಲಿಯಾಗಿ ಹಾಳಾಗಿ ಹೋಯಿತಲ್ಲಾ ಎಂದು ಆಗಾಗ ಅವನಿಗೆ ವ್ಯಸನವಾಗದಿರುತ್ತಿರಲಿಲ್ಲ. ಅಂಥ ಸಂದರ್ಭಗಳಲ್ಲಿ ತನ್ನ ಅಧಃಪತನವನ್ನು ನೆನೆದುಕೊಂಡು ಅವನು ಕಂಬನಿಗರೆದುದೂ ಇತ್ತು. ಆಗಲೂ ಧರ್ಮಣ್ಣ ಅವನ ನೆರವಿಗೆ ಬರುತ್ತಿದ್ದ. "ಬಿಡೋ ಹುಚ್ಚಾ. ಇಷ್ಟಕ್ಕೆಲ್ಲಾ ಅಳುತ್ತಾರೇನು ಯಾರಾದರೂ ! ಯಾರೂ ಮಾಡದಂಥಾದ್ದನ್ನು ನೀನೇನು ಮಾಡಿಲ್ಲವಲ್ಲ !" ಎನ್ನುತ್ತಿದ್ದ.

"ಬಾಪೂಜಿಯವರ ಪಾದ ಮುಟ್ಟಿ ಬ್ರಹ್ಮಚರ್ಯದ ಪ್ರತಿಜ್ಞಾ ತಗೊಂಡಿದ್ದೆನಪ್ಪಾ ಧರ್ಮಣ್ಣಾ. ನಾನು ಪಾಪಿಯಾದೆ, ಪಾಪಿಯಾದೆ" ಎಂದು ಗೋಳಾಡುತಿದ್ದ ಚಿಮಣಾಜಿ.

---

* ಬಿದ್ದು ಬಿದ್ದು

" ಗಾಂಧೀ ಶಿಷ್ಯರೆಷ್ಟು ಮಂದಿ ಮಜಾ ಮಾಡುತಾ ಇಲ್ಲ ಚಿಮಣಾಜಿ ? "

" ಹೌದು, ಹೌದು. ಅದೂ ಖರೆ " ಎನ್ನುತ್ತ ಆ ಕ್ಷಣಕ್ಕೆ ಸಮಾಧಾನ ತಂದುಕೊಳ್ಳುತ್ತಿದ್ದ ಚಿಮಣಾಜಿ. ತನ್ನ ದೌರ್ಬಲ್ಯವನ್ನು ಸಮರ್ಥಿಸಿಕೊಳ್ಳಲು ಅವನು ಇತರರ ದೌರ್ಬಲ್ಯದ ನಿದರ್ಶನಗಳನ್ನು ಉಪಯೋಗಿಸಿಕೊಳ್ಳಬೇಕಾಗುತಿತ್ತು. " ಬ್ರಹ್ಮಚರ್ಯಪಾಲನೆ ಅಂದರೇನೇ ಅಸ್ವೈಸರ್ಗಿಕವೆಂದು ಕಾಣುತ್ತದೆ " ಎಂದೂ ಅವನು ತನ್ನಲ್ಲಿ ತಾನೆ ಹೇಳಿಕೊಳ್ಳುತಿದ್ದ.

" ಗಾಂಧಿಯವರಿಗೇನು ಮದುವೆಯಾಗಿರಲಿಲ್ಲೇನು, ಮಕ್ಕಳಾಗಿರಲಿಲ್ಲೇನು ? ಎಂಟು ಹತ್ತು ಮಕ್ಕಳು ಹಡೆದ ಮೇಲೆ ಬ್ರಹ್ಮಚರ್ಯ ಪಾಲನೆ ಮಾಡೂದೇನು ಬಹಳ ಸುಲಭ " ಎನ್ನುತ್ತಿದ್ದ ಧರ್ಮಣ್ಣ.

" ಬರಾಬ್ಬರಿ, ಬರಾಬ್ಬರಿ " ಎನ್ನುತ್ತಿದ್ದ ಚಿಮಣಾಜಿ. ಆದರೂ ಮತ್ತೆ ಮತ್ತೆ, ಆತ್ಮ ಸಂದೇಹದ ಸುಳಿಗಳಲ್ಲಿ ಸಿಲುಕಿ ತೊಳಲುವುದು ತಪ್ಪಿರಲಿಲ್ಲ.

ನರಹರಿರಾಯರ ಭಂಟನಾಗಿ ತಾನು ಬದುಕುತ್ತಿದ್ದುದರ ಬಗೆಗೂ ಚಿಮಣಾಜಿಗೆ ಅಸಮಾಧಾನವಿರಲಿಲ್ಲವೆಂದೇನೂ ಇಲ್ಲ. ಬಡರೈತರ ದುಃಸ್ಥಿತಿಯನ್ನು ಕಂಡು ಅವನ ಹೃದಯ ಕರಗುವುದಾದರೂ ಅವರ ಪಕ್ಷ ವಹಿಸಿ ಹೋರಾಡಲು ಅವಶ್ಯವಿದ್ದ ಉತ್ಸಾಹ ಮಾತ್ರ ಅವನಲ್ಲಿರಲಿಲ್ಲ. ರೈತರ ಬಗೆಗೆ ಅವನಿಗೆ ಕನಿಕರವೆನ್ನಿಸುತ್ತಿದ್ದಿತಾದರೂ ಅವರೂ ತನ್ನವರೆ, ತನ್ನ ಬಂಧುಗಳೆ ಎಂಬ ಆತ್ಮೀಯ ಭಾವನೆ ಮಾತ್ರ ಅವನಲ್ಲಿ ಉದಯಿಸದಾಗಿದ್ದಿತು. ದಾರಿದ್ರ್ಯ, ಅಜ್ಞಾನ, ಕುಸಂಸ್ಕೃತಿ, ಅನಾರೋಗ್ಯಕರ ವಾತಾವರಣಗಳನ್ನು ಕಂಡರಾಗುತ್ತಿರಲಿಲ್ಲ ಚಿಮಣಾಜಿಗೆ. ಬೆವರಿನ ದುರ್ನಾತ ಪಸರಿಸುವ ರೈತರ ಹತ್ತಿರ ಕೂತು ಮಾತನಾಡುವುದಕ್ಕೂ ಸಹ ಅವನ ಮನಸ್ಸು ಹೇಸಿಕೊಳ್ಳುತ್ತಿತ್ತು. ಆ ಹಳ್ಳಿಯಲ್ಲಿ ನೀರಿಗೆ ಅಭಾವವೇನೂ ಇರಲಿಲ್ಲ. ಹತ್ತಿರದಲ್ಲಿಯೆ ಹಳ್ಳ ಹರಿದು ಹೋಗುತ್ತಿತ್ತು. ಹಳ್ಳಿಯಲ್ಲಿ ಮೂರು ನಾಲ್ಕು ಭಾವಿಗಳೂ ಇದ್ದುವು. ದಿನವೂ ತಪ್ಪದೆ ಸ್ನಾನ ಮಾಡಿ ಸ್ವಚ್ಛವಾಗಿರಬೇಕೆಂದು ಅವನು ಇಪ್ಪತ್ತು ವರ್ಷಗಳಿಂದ ಹಳ್ಳಿಗರಿಗೆ ಉಪದೇಶ ಮಾಡುತ್ತ ಬಂದಿದ್ದನಾದರೂ ಅದರಿಂದ ಕೊಂಚವೂ ಪರಿಣಾಮವುಂಟಾಗಿರಲಿಲ್ಲ. " ಈ ಹಾರವಸಿಗೆ ಬ್ಯಾರೆ ಏನು ಕೆಲಸ ? ದಿನಾಲು ಜಳಕ ಮಾಡೂದಕ್ಕ ನಮಗ ಪುರಸತ್ತಾದರೂ ಎಲ್ಲೈತಿ ? " ಎಂದು

ಹೇಳಿ ನಗುತ್ತ ವಾರಕ್ಕೊಂದು ಸಲವೊ ತಿಂಗಳಿಗೊಂದು ಸಲವೊ ಹಳ್ಳದಲ್ಲಿ ಮುಳುಗಿ ಎದ್ದು ಬರುವ ತಮ್ಮ ಪರಿಪಾಠವನ್ನು ಬದಲಾಯಿಸದೆ ಸಾಗಿಸಿ ಕೊಂಡು ಬಂದಿದ್ದರು ಆ ಹಳ್ಳಿಯವರು.

" ಚಹಾ ಕುಡೀಬಾರದು. ಅದರಿಂದ ಪ್ರಕೃತಿ ಕೆಡುತ್ತದೆ. ಚಹಾದಂಗ ಡಿಗಳನ್ನೆಲ್ಲ ಬಂದ್ ಮಾಡಿರಿ " ಎಂದು ಚಿಮಣಾಜಿ ಬೋಧಿಸಿದ್ದ.

" ಇವಗ ರಾಯರ ಮನಿಯಾಗ ಫುಕಟದ ಹಾಲು ಸಿಗುತೈತಿ. ನಮಗೆ ಲ್ಲಿಂದ ಬರಬೇಕು ಹಾಲು ? ಚಾ ಕೂಡಾ ಕುಡೀಬ್ಯಾಡ್ರಿ ಅಂತಾನ ಮಗ! " ಎಂದು ಹೇಳಿ ಹಳ್ಳಿಗರು ಮತ್ತೆ ನಕ್ಕು ಚಹದ ಚಟವನ್ನು ಮುಂದುವರೆಸಿ ಕೊಂಡು ಬಂದಿದ್ದರು. ಹಳ್ಳಿಯಲ್ಲಿ ವರ್ಷಕ್ಕೊಂದು ಹೊಸ ಚಹದಂಗಡಿ ಹುಟ್ಟಿ ಕೊಳ್ಳುತ್ತಿತ್ತು.

" ಖಾಲಿ ಇದ್ದಾಗೆಲ್ಲ ನೂಲುತಾ ಇರ್ರಿ. ನಾಲ್ಕೆಂಟು ಆಣೆ ಸಿಗುತ್ತದೆ " ಎಂದು ಸಾವಿರ ಬಾರಿಯಾದರೂ ಉಪದೇಶಿಸಿದ್ದ ಚಿಮಣಾಜಿ. ಅವನೆದುರಿಗೆ ' ಹೂಂ ' ಎಂದು ತಲೆ ಕೊಡಹಿ, ಮನೆಗೆ ಹೋದ ಬಳಿಕ ತಂಬಾಕು ಸೇದುತ್ತಾ, ಗೊಡ್ಡು ಹರಟೆಯಲ್ಲಿ ವೇಳೆಗಳೆಯುತ್ತಿದ್ದರು ಹಳ್ಳಿಗರು. ಅವರನ್ನು ಸುಧಾರಿ ಸಲು ಸತತ ಇಪ್ಪತ್ತು ವರ್ಷಗಳ ಕಾಲ ಚಿಮಣಾಜಿ ಶ್ರಮಿಸಿದ್ದರೂ ಅದೆಲ್ಲವೂ ವಿಫಲವಾಗಿತ್ತು. ಜನರು ಸುಳ್ಳು ಹೇಳುವುದನ್ನು ನಿಲ್ಲಿಸಿರಲಿಲ್ಲ, ಹಿಂಸೆ ಮಾಡು ವುದನ್ನು ಬಿಟ್ಟಿರಲಿಲ್ಲ, ಚಿಕ್ಕ ಪುಟ್ಟ ವ್ಯಾಜ್ಯಗಳಿಗಾಗಿ ಹೊಡೆದಾಡಿ ಕೋರ್ಟಿಗೆ ಹೋಗಿ ಹಣ ಹಾಳು ಮಾಡಿಕೊಳ್ಳುವುದನ್ನು ನಿಲ್ಲಿಸಿರಲಿಲ್ಲ. ತನ್ನ ಇಪ್ಪತ್ತು ವರ್ಷಗಳ ಶ್ರಮವೆಲ್ಲ ವ್ಯರ್ಥವಾಯಿತೆಂದು ಅನ್ನಿಸಿದ ಹಾಗೆಲ್ಲ ಚಿಮಣಾಜಿಗೆ ಅತೀವ ನಿರಾಸೆಯಾಗುತ್ತ ಬಂದಿತ್ತು. ಜನಸೇವೆಯ ಹುಚ್ಚಿಗೆ ಬಿದ್ದು ತಾನು ತನ್ನ ಆಯುಷ್ಯವನ್ನೆ ಹಾಳು ಮಾಡಿಕೊಂಡಂತಾಯಿತೆಂದೂ ಅವನಿಗೆನ್ನಿಸಿತ್ತು. ಅವನು ಸುಂದರಾಬಾಯಿಯ ಸಹವಾಸಕ್ಕೆ ಮೊರೆ ಹೋಗಲು ಆ ಉದ್ವಿಗ್ನ ತೆಯೂ ಕಾರಣವಾಗಿರಲು ಸಾಕು. ತನಗೆ ತಿಳಿಯದಂತೆಯೆ ಅವನು ಆ ಹಳ್ಳಿ ಯನ್ನೂ ಅಲ್ಲಿನ ಜನವನ್ನೂ ದ್ವೇಷಿಸತೊಡಗಿದ್ದ. ಹೊಲ ಸಾಗುವಳಿ ಕಾನೂನು ಜಾರಿಗೆ ಬಂದು ನರಹರಿರಾಯರಿಗೂ ರೈತರಿಗೂ ತಿಕ್ಕಾಟವೇಳುವ ಲಕ್ಷಣ ಕಾಣಿಸಿದಾಗ, ಚಿಮಣಾಜಿಯ ಹತಾಶ ಜೀವಕ್ಕೆ ಹೊಸ ಚಟುವಟಿಕೆಯೊಂದು

ಲಭಿಸಿದಂತಾಗಿ ಅವನು ಕೊಂಚ ಚೇತರಿಸಿಕೊಂಡು ಹಲವಾರು ಉಪಾಯಗಳನ್ನು ಯೋಚಿಸಿ ರೈತರನ್ನು ಗೋಳಿಗೀಡು ಮಾಡಲು ಯತ್ನಿಸಿದ್ದ. ಅವರನ್ನು ಹೆದರಿಸಿ ಬೆದರಿಸಿ ಹೊಲಗಳಿಗೆ ಒತ್ತಾಯದಿಂದ ಅವರ ರಾಜೀನಾಮೆ ಪಡೆದುಕೊಂಡಾಗ ಅವನ ನೊಂದ ಮನಸ್ಸಿಗೆ ವಿಚಿತ್ರವಾದೊಂದು ಸಮಾಧಾನ ಲಭಿಸಿದಂತಾಗಿತ್ತು, ದಲಿತರ ಬಗೆಗೆ ಮೊದಲು ಅವನಲ್ಲಿದ್ದ ಸಹಾನುಭೂತಿಗೆ ಪ್ರತಿಯಾಗಿ ತಿರಸ್ಕಾರದ ಭಾವನೆ ಒಡಮೂಡತೊಡಗಿತ್ತು.

"ದಲಿತರಾಗೇ ಇರಲು ಯೋಗ್ಯರಾದ ಮಂದಿಯಿದು. ನಾಯಿಗಳನ್ನು ಸಿಂಹಾಸನಕ್ಕೇರಿಸುವದು ಮೂರ್ಖತನ" ಎಂದು ತನ್ನಲ್ಲಿಯೆ ಹೇಳಿಕೊಳ್ಳುತ್ತಿದ್ದ ಚಿಮಣಾಜಿ.

ಆ ಭಾವನೆ ಬಂದಂದಿನಿಂದಲೂ ಅವನು ಹಳ್ಳಿಗರ ಸೇವೆ ಮಾಡುವ ಹುಚ್ಚನ್ನು ಪೂರ್ಣವಾಗಿ ತೊಡೆದು ಹಾಕಿ, ಇಳಿವಯಸ್ಸಿನಲ್ಲಾದರೂ ಸಿಕ್ಕಿದಷ್ಟು ಸುಖ ಪಡೆಯುವುದೆಂಬ ಒಂದೇ ಒಂದು ವಿಚಾರದಿಂದ ನರಹರಿರಾಯರ ಹಸ್ತಕನಾಗಿದ್ದುಕೊಂಡು, ಸುಂದರಾಬಾಯಿಯ ಸಹವಾಸದ ಮಾದಕತೆಯಲ್ಲಿ ತನ್ನ ವ್ಯಕ್ತಿತ್ವವನ್ನು ಮುಳುಗಿಸಿದ್ದ. ಚಿಮಣಾಜಿಯಂಥ ಸ್ವಜಾತೀಯ ಸುಸಂಸ್ಕೃತ ವ್ಯಕ್ತಿ ಪ್ರಿಯಕರನಾಗಿ ಲಭಿಸಿದುದರಿಂದ ಸುಂದರಾಬಾಯಿಗೂ ತೃಪ್ತಿಯುಂಟಾಗಿತ್ತು. ತನ್ನ ಶೇಷಾಯುಷ್ಯವನ್ನು ಅವನ ಜತೆಗೂಡಿ ಕಳೆಯಬೇಕೆಂದು ಅವಳೂ ನಿರ್ಧರಿಸಿಕೊಂಡಿದ್ದಳು.

ಅವಳ ಸಹವಾಸದಲ್ಲಿ ಅವನಿಗೆ ಸಾಕಷ್ಟು ಸಮಾಧಾನ ಲಭಿಸುತ್ತಿದ್ದಿತಾದರೂ ಆಗಾಗ ಅತೃಪ್ತಿಯ ಅಲೆಗಳೆದ್ದು ಅವನ ಹೃದಯವನ್ನು ಕೊರೆಯದಿರುತ್ತಿರಲಿಲ್ಲ. ತಾನು ಹಿಡಿದ ಹಾದಿ ಸರಿಯಾದುದೇ? ನರಹರಿರಾಯರ ಹಸ್ತಕನಾಗಿ ಬಡರೈತರನ್ನು ಪೀಡಿಸುವುದು ಉಚಿತವಾದುದೇ? ಇದರಿಂದ ತಾನು ಸಾಧಿಸುವುದಾದರೂ ಏನನ್ನು? ಎಂಬಿವೇ ಮೊದಲಾದ ಪ್ರಶ್ನೆಗಳುದಯಿಸಿ ಅವನನ್ನು ಗೊಂದಲಕ್ಕೀಡು ಮಾಡುತ್ತಿದ್ದುದು ಅನೇಕ ಬಾರಿ.

ಅವನ ಮನಸ್ಸನ್ನು ಸ್ಥಿರಗೊಳಿಸಲು ಯತ್ನಿಸುತ್ತ ನರಹರಿರಾಯರೆನ್ನುತ್ತಿದ್ದರು: "ದಯಾ ಮಾಯಾ ಕಸಿಕರ ಅಂತ ನಾವು ವಿಚಾರ ಮಾಡುತಾ ಹೋದರೆ ಈ ಸರಕಾರ ನಮ್ಮ ಹೊಲಗಳನ್ನೆಲ್ಲಾ ರೈತರ ಕೈಗೇ ಕೊಟ್ಟುಬಿಡುವ

ದನ್ನು ನೋಡಿ ಕೈಕಟ್ಟಿಕೊಂಡು ಕೂಡಬೇಕಾದೀತು ಚಿಮಣಾಜಿ. ಇಲೆಕ್ಶನ್ನಿನಲ್ಲಿ ರೈತರ ವೋಟು ಸಿಗಬೇಕೆಂಬ ಆಸೆಯಿಂದ ಮುಖಂಡರು ಟೆನನ್ಸಿ ಕಾಯ್ದೆ ಮಾಡಿದ್ದಾರೆ. ಈ ಕಡೆ ವೋಟೂ ಸಿಗಬೇಕು, ಅದರಿಂದ ನಮಗೆ ಏಟೂ ಬೀಳಬಾರದು. ಹೌದೋ ಅಲ್ಲವೋ ? ಅದಕ್ಕೇ ನಮ್ಮ ತಯಾರಿಯಲ್ಲಿ ನಾವು ಇರಬೇಕು. "

" ಹೌದು, ಹೌದು " ಎನ್ನುತ್ತಿದ್ದ ಚಿಮಣಾಜಿ.

ಸದಾಶಿವ ಬಿಡುಗಡೆ ಹೊಂದಿದ ವಾರ್ತೆ ತಿಳಿದೊಡನೆ ಚಿಮಣಾಜಿಯನ್ನು ಕಳ್ಳೀಕಾಯಿಗೆ ಬರಮಾಡಿಕೊಂಡು ನರಹರಿರಾಯರು ಹೇಳಿದ್ದರು :

" ಇನ್ನು ಮುಂದೆ ನಾವು ಬಹಳ ಎಚ್ಚರದಿಂದಿರಬೇಕು ಚಿಮಣಾಜಿ. ಆ ಹುಡುಗ ಸದಾಶಿವ ಮೊದಲಿಂದಲೂ ಬಂಡುಗಾರ ಸ್ವಭಾವದವ. ಆ ದರೋಡೆಖೋರ ಸ್ವಾಮಿಯ ಸಹವಾಸದಿಂದ ಇವನು ಇನ್ನಿಷ್ಟು ಕೆಟ್ಟುಹೋಗಿರಬೇಕು. ಕಮ್ಯುನಿಸ್ಟರಿಗೂ ಅವನಿಗೂ ಸಂಬಂಧವಿದೆಯಂತೆ. ಜಮೀನ್ದಾರ—ರೈತರ ಜಗಳವಿದ್ದಲ್ಲೆಲ್ಲಾ ಕಮ್ಯುನಿಸ್ಟರು ಗದ್ದಲ ಎಬ್ಬಿಸಲು ಯತ್ನಿಸುತ್ತಾರೆ. ಸದಾಶಿವ ಮಲ್ಲಾಪುರದಲ್ಲೂ ಏನಾದರೂ ಮಾಡಬಹುದು. ಅದಕ್ಕೆ ಅವಕಾಶವೇ ಸಿಗದ ಹಾಗೆ ನಾವು ಮೊದಲೇ ತಯಾರಿ ಮಾಡಬೇಕು. "

" ರೈತರು ಅವನ ಕಡೆ ಹೊರಳಬಹುದು ಅಂತೀರಾ ? "

" ಪ್ರಭ್ಯಾನಂಥ ತಲೆತಿರುಕರಿದ್ದಾರಲ್ಲಾ ಒಬ್ಬಿಬ್ಬರು ನನ್ನಂಥವನ ವಿರುದ್ಧ ಬಡಿದಾಡುವಷ್ಟು ಸೊಕ್ಕು ಅವನಿಗೆ. ಸದಾಶಿವನ ಸಂಗಡ ಅವನು ಸುಲಭವಾಗಿ ಕೂಡಿಕೊಳ್ಳಬಹುದು. ಹೊಲಗಳಿಗೆ ರಾಜೀನಾಮೆ ಕೊಟ್ಟವರನ್ನೂ ಒಡೆದುಕೊಳ್ಳಲು ಅವರು ಯತ್ನಿಸಬಹುದು. "

" ಅದನ್ನು ತಡೆಯುವದು ಹ್ಯಾಗೆ ? "

" ನಮ್ಮ ವಿರುದ್ಧ ಕುಂಯ್ ಅಂದವರು ಉಳಿಯುವದೇ ಇಲ್ಲ ಅನ್ನುವ ಹಾಗೆ ವಾತಾವರಣ ಉಂಟು ಮಾಡಬೇಕು ಚಿಮಣಾಜಿ. ಹ್ಯಾಗೂ ಅವರು ಹೊಲಗಳ ರಾಜೀನಾಮೆ ಬರಕೊಟ್ಟಿದ್ದಾರೆ. ಸದಾಶಿವನ ಸಂಗಡ ಸೇರಿಕೊಂಡವರ ಕೈಯಲ್ಲಿರುವ ಭೂಮಿ ಕಿತ್ತುಕೊಂಡು ಬಿಡುತ್ತೇವೆ ಅಂತ ಸುದ್ದಿ ಎಬ್ಬಿಸಿಬಿಡು. ಅವರೂ ಅವರ ಹೆಂಡರು ಮಕ್ಕಳೂ ಬದುಕಿರಬೇಕಾದರೆ ಸುಮ್ಮನಿರು

ತ್ತಾರೆ. ಇಲ್ಲದಿದ್ದರೆ ಹಾಳಾಗಿ ಹೋಗುತ್ತಾರೆ. ಸದಾಶಿವನ ಕಡೆಗೆ ಮಾತ್ರ ಯಾರೂ ಸೇರದ ಹಾಗೆ ಮಾಡಬೇಕು ಹಂ ! "

ಸದಾಶಿವ ಮಲ್ಲಾಪುರಕ್ಕೆ ಬಂದುದಕ್ಕೊಂದು ವಾರ ಕಳೆದ ಬಳಿಕ ನರ ಹರಿರಾಯರು ಚಿಮಣಾಜಿಯನ್ನು ಕರೆಸಿಕೊಂಡು ಕೇಳಿದರು :

" ಏನೇನು ಚಟುವಟಿಕೆ ನಡೆದಿದೆ ಚಿಮಣಾಜಿ ? "

" ಇನ್ನೂ ಏನೂ ನಡೆದಿಲ್ಲ. "

" ಸದಾಶಿವನಲ್ಲಿಗೆ ಯಾರು ಯಾರು ಬಂದು ಹೋಗುತ್ತಾರೆ ? "

" ಈಶ್ವರ ಅಂತ ಒಬ್ಬ ಲೇಖಕನಿದ್ದಾನಲ್ಲ, ಕಾಡಾಪುರದೊಳಗೆ, ಅವನು ಬರುತ್ತಿರುತ್ತಾನೆ ಆಗಾಗ. ಮೊನ್ನೆ ಚೆನ್ನಬಸಪ್ಪನೂ ಇವರೂ ಕೂಡಿ ರಾಮಾ ಪುರಕ್ಕೂ ಹೋಗಿದ್ದರಂತೆ ಶಿವಲಿಂಗಯ್ಯನವರ ಹತ್ತರ. "

ವಿರಾಮ ಕುರ್ಚಿಯಲ್ಲೊರಗಿಕೊಂಡಿದ್ದ ನರಹರಿರಾಯರು ಒಂದು ನಿಮಿಷ ಮೌನವಾಗಿ ಯೋಚಿಸುತ್ತಿದ್ದು ಅನಂತರ ಹೇಳಿದರು :

" ಈ ನಾಲ್ಕು ಜನರು ಕೂಡಿ ಏನೋ ಮಸಲತ್ತು ಮಾಡುವ ಹಾಗೆ ಕಾಣುತ್ತದೆ ಚಿಮಣಾಜಿ. ಚೆನ್ನಬಸಪ್ಪನಂತೂ ಹೇಳಿ ಕೇಳಿ ಪುಂಡ. ಅವನೂ ಸದಾಶಿವನೂ ಕೂಡಿದರೆ ಗಾಳಿ ಬೆಂಕಿ ಕೂಡಿದ ಹಾಗಾದೀತು. ಅಲ್ಲ, ಈ ಈಶ್ವರ ಅಂದರೆ ಎಂಥ ಮನುಷ್ಯ ? "

" ನನಗೂ ನೆಟ್ಟಗೆ ಗೊತ್ತಿಲ್ಲ. ಒಂದೆರಡು ಸಾರಿ ನೋಡಿದ್ದೇನಷ್ಟೆ. ಅವನ ಮೈಯಲ್ಲಿ ನೆಟ್ಟಗಿಲ್ಲವಂತೆ. ಕ್ಷಯರೋಗವೆಂತ ಹೇಳುತ್ತಾರೆ. ಅದಕ್ಕೇ ಅವನು ಓರೆಕೋರೆ ನಗರ ಬಿಟ್ಟು ಬಂದು ಹಳ್ಳಿಯಲ್ಲಿದ್ದಾನಂತೆ. "

" ಅದರಲ್ಲಿ ಎಷ್ಟರಮಟ್ಟಿಗೆ ನಿಜವಿದೆಯೊ ಪರಮಾತ್ಮನಿಗೇ ಗೊತ್ತು. ಅವನೂ ಒಬ್ಬ ಕಮ್ಯುನಿಸ್ಟನಿದ್ದರೂ ಇದ್ದಾನು. ನಮ್ಮ ವಿರುದ್ಧ ರೈತರನ್ನೆತ್ತಿ ಕಟ್ಟುವದಕ್ಕೆಂದು ಜಡ್ಡಾದ ಸೋಗು ಹಾಕಿದ್ದಾನು. ಶಿವಲಿಂಗಯ್ಯನವರು ಈ ತ್ರಿಮೂರ್ತಿಗಳಿಗೆ ಸಹಾಯ ಮಾಡಬಹುದೇನು ? "

" ಮಾಡಬಹುದೋ ಏನೊ. ಕಾಂಗ್ರೆಸಿನಲ್ಲಂತೂ ಈಗ ಅವರಿಗೆ ಏನೂ ಮರ್ಯಾದೆಯುಳಿದಿಲ್ಲ ಅದಕ್ಕೆ ಸದಾಶಿವನಂಥವರ ಬೆನ್ನು ಚಪ್ಪರಿಸಿ ಮುಖಂಡ ರಾಗಿ ಮೆರೆಯಬೇಕೆಂಬ ಹವ್ಯಾಸಕ್ಕೂ ಅವರು ಬೀಳಬಹುದೊ ಏನೊ. "

“ ಸದಾಶಿವನ ಅಪ್ಪನಂತೂ ಅವನಿಗೆ ಸಹಾಯ ಮಾಡುವದಿಲ್ಲ, ಹೌದಲ್ಲೋ ? ”

“ ಮಹಾದೇವಪ್ಪನ ಬಗ್ಗೆ ನಾವೇನು ಚಿಂತಿಸಬೇಕಾಗಿಲ್ಲ ರಾಯರೆ. ಅವನು ಪಕ್ಕಾ ಗಾಂಧಿವಾದಿ. ”

“ ಮುದುಕನ ಸ್ವಭಾವವನ್ನು ನಾನೂ ಬಲ್ಲೆ. ಅವನಿಂದ ನಮಗೇನು ಹಾನಿಯಿಲ್ಲ. ಸದಾಶಿವನ ಚಟುವಟಿಕೆಗಳನ್ನು ಮಾತ್ರ ಕಣ್ಣಲ್ಲಿ ಎಣ್ಣೆ ಹಾಕಿ ಕೊಂಡು ಕಾಯುತ್ತಿರು ಚಿಮಣಾಜಿ. ”

“ ಅದೇ ಸ್ವಲ್ಪ ಕಷ್ಟ ರಾಯರೆ. ಅವನು ಹೋದಲ್ಲೆಲ್ಲ ನಾನೂ ಹೋಗು ವದು ಹ್ಯಾಗೆ? ಅವನಿಗೆ ಸಂಶಯು ಬರದಿರುವದೇ ? ”

“ ಸಂಶಯು ಬರದ ಹಾಗೆ ಅವನ ಮೇಲೆ ಕಣ್ಣಿಡಲು ಏನಾದರೂ ಯುಕ್ತಿ ಮಾಡಬೇಕು. ಒಬ್ಬ ಸಿ. ಐ. ಡಿ. ಯನ್ನೇ ಯಾಕೆ ಛೂ ಬಿಡಬಾರದು ಅವನ ಹಿಂದೆ ? ”

“ ಅಂದರೆ ? ”

“ ಯಾವನಾದರೊಬ್ಬ ನಿರುದ್ಯೋಗಿ ರೈತನನ್ನು ಹಿಡಿದು ಸದಾಶಿವನ ನಂಬಿಕೆ ಪಡಕೊಂಡು ಯಾವಾಗಲೂ ಅವನ ಬಾಡಿಗಾರ್ಡನಂತೆ ಜತೆಗೇ ತಿರುಗುವ ಹಾಗೆ ಮಾಡಿಕೊಳ್ಳಬೇಕು. ತಿಂಗಳಿಗೆ ಹತ್ತಿಪ್ಪತ್ತು ರೂಪಾಯಿ ಕೊಟ್ಟರೂ ಚಿಂತೆಯಿಲ್ಲ ಅವನಿಗೆ. ”

ಮಲ್ಲಾಪುರಕ್ಕೆ ಬಂದವನೇ ಅಂಥವನೊಬ್ಬನನ್ನು ಹುಡುಕತೊಡಗಿದ ಚಿಮಣಾಜಿ. ಪರಸಣ್ಣವರ ಹಣಮಣ್ಣ ಆ ಕೆಲಸಕ್ಕೆ ತಕ್ಕವನೆಂದು ತೋರಿತು. ಕನ್ನಡ ಶಾಲೆಯಲ್ಲಿ ನಾಲ್ಕು ಪುಸ್ತಕ ಓದಿ ತಾನೂ ಒಬ್ಬ ಸುಶಿಕ್ಷಿತನೆಂದು ಭಾವಿಸಿ ಹೊಲದಲ್ಲಿ ಕೆಲಸ ಮಾಡದೆ ಚಹದಂಗಡಿಗಳನ್ನು ಸುತುತ್ತ ಪೋಲಿ ಅಲೆ ಯುತ್ತಿದ್ದ ಮೂವತ್ತರ ಯುವಕ ಹಣಮಣ್ಣ. ನಲವತ್ತೆರಡರ ಚಳುವಳಿಯ ಕಾಲಕ್ಕೆ ಅವನೂ ‘ ಗಾಂಧೀಕೀ ಜೈ ’ ಎಂದು ಕೂಗಿ, ನವಲಾಪುರ ನಿಲ್ದಾಣ ವನ್ನು ಸುಡುವ ‘ ಕ್ರಾಂತಿ ಕಾರ್ಯದಲ್ಲಿ ’ ಭಾಗವಹಿಸಿದ್ದ. ತಾನೂ ಒಬ್ಬ ದೇಶ ಸೇವಕನೆಂದು ಜಂಬ ಕೊಚ್ಚಿಕೊಳ್ಳಲು ಅದೊಂದೇ ಒಂದು ಬಂಡವಲು ಅವ ನಿಗೆ ಸಾಕಾಗಿತ್ತು. ಅವನಿಗಿಂತ ಕಿರಿಯರಾದ ತಮ್ಮಂದಿರು ಹೊಲಗಳಲ್ಲಿ ದುಡಿ

ಯುತ್ತಿದ್ದರೆ ಮನೆಗೆ ಹಿರಿಯನಾಗಿದ್ದ ಹಣಮಣ್ಣ ಬಿಳಿಯರಿವೆ ಹಾಕಿಕೊಂಡು ದೊಡ್ಡ ಮನುಷ್ಯನಂತೆ ಅಲ್ಲಿ ಇಲ್ಲಿ ಅಲೆದುಕೊಂಡು ಕಾಲಹರಣ ಮಾಡುತ್ತಿದ್ದ. ಹೇಗೂ ಮೂರು ಹೊತ್ತು ಊಟ ಸಿಗುತ್ತಿತ್ತು ಮನೆಯಲ್ಲಿ. ಚಹ, ಬೀಡಿ, ಸಿಗರೇಟು ಮತ್ತಿತರ ವ್ಯಸನಗಳಿಗೆ ಮಾತ್ರ ಕಾಸು ಸಿಕ್ಕದೆ ಅವನು ಸಂಕಟ ಪಡುತ್ತಿದ್ದ. ಅವನ ಇತಿಹಾಸ, ಸ್ವಭಾವ, ದುರ್ವ್ಯಸನಗಳ ವಿಚಾರವನ್ನೆಲ್ಲ ಪೂರ್ತಿಯಾಗಿ ಅರಿತಿದ್ದ ಚಿಮಣಾಜಿ, ಗೂಢಚಾರನ ಕೆಲಸಕ್ಕಾಗಿ ಅವನನ್ನೆ ಆಯ್ದು ಕೊಂಡ.

ತಿಂಗಳಿಗೆ ಹತ್ತು ರೂಪಾಯಿ ಸಿಕ್ಕುವುದೆಂದು ಗೊತ್ತಾಗುತ್ತಲೂ ಹಣಮಣ್ಣನಿಗೆ ಆನಂದವಾಯಿತಾದರೂ ಕೆಲಸದ ಸ್ವರೂಪ ತಿಳಿದಾಗ ಅವನಿಗೆ ದಿಗಿಲಾಗದಿರಲಿಲ್ಲ. ಹಣಮಣ್ಣ ಸ್ವಭಾವತಃ ಧೈರ್ಯಶಾಲಿಯೂ ಅಲ್ಲ, ಶೂರನೂ ಅಲ್ಲ. ಸದಾಶಿವನ ಬಗ್ಗೆ ಭಯಮಿಶ್ರಿತ ಆದರ ಭಾವವಿತ್ತು ಹಣಮಣ್ಣನಲ್ಲಿ. ಸ್ವಾಮಿಯ ಗುಂಪಿನ ಬಗ್ಗೆ ಅವನೂ ಸಾಕಷ್ಟು ಕೇಳಿ ತಿಳಿದವನಾಗಿದ್ದ. ಬಂದೂಕ ಪಿಸ್ತೂಲು ಹಿಡಿದೂ ಪೋಲೀಸರ ಮೇಲೆ ಗುಂಡು ಹಾರಿಸಿದ, ಅನೇಕ ಶ್ರೀಮಂತರ ಕೈಕಾಲು ಕಡಿದು ಹಿಂಸಿಸಿದ ಪುಂಡರ ಗುಂಪು ಅದು, ಎಂದು ಅವನು ಭಾವಿಸಿದ್ದ. ಸದಾಶಿವನ ಹತ್ತಿರ ಈಗಲೂ ಪಿಸ್ತೂಲು ಇರಬಹುದು. ಅಂಥವನ ಸಹವಾಸವೆಂದರೆ ಹಾವಿನ ಸಹಸವಾಸವೇ ಸರಿ. ತನ್ನ ಬಗ್ಗೆ ಅವನಿಗೆ ಸಂದೇಹ ಬಂದರೆ ಮುಗಿದೇ ಹೋಯಿತು. ತನ್ನ ಎಲುಬು ಕೂಡ ಉಳಿಯದಂತೆ ತೀರಿಸಿಬಿಟ್ಟಾನು ಆತ.

ಮೊದಲು ಮೊದಲು ಹಣಮಣ್ಣನಿಗೆ ಆ ಕೆಲಸವನ್ನೊಪ್ಪಿಕೊಳ್ಳಲು ಧೈರ್ಯವಾಗಲಿಲ್ಲ. ಚಿಮಣಾಜಿ ಪರಿಪರಿಯಾಗಿ ತಿಳಿಸಿ ಹೇಳಿದ. " ಯುಕ್ತಿಯಿಂದ ಕೆಲಸ ಮಾಡಿದರೆ ಸಂಶಯವೇ ಬರುವದಿಲ್ಲ ಹಣಮಣ್ಣಾ. ನೀನ್ಯಾಕೆ ಇಷ್ಟು ಗಾಬರಿಯಾಗುತ್ತೀ ? "

" ಸುದ್ದಿ ತಿಳಿಸೂದಕ್ಕಾದರೂ ನಾ ನಿಮ್ಮ ಹತ್ತರ ಬರಬೇಕಾಗುತೆತಲ್ಲ ? ಅದು ಸದಾಶಿವಗ ಗೊತ್ತಾಗದಿರುತ್ತೈತೇನ್ರೀ ? "

" ಅದಕ್ಯಾತಕ್ಕೆ ಚಿಂತೆ ಮಾಡುತೀಯೋ ಹುಚ್ಚಾ ? ನಮ್ಮ ಸುದ್ದಿ ತಿಳಕೊಳ್ಳುವದಕ್ಕಾಗಿ ನಮ್ಮ ಹತ್ತರ ಹೋಗುತಿರುತೀನಿ ಅಂತ ಹೇಳಿದರಾತು. "

" ಏನೋ ಬಿಡ್ರಿ. ಅಂತೂ ನನಗ ಇದೇನೂ ಸರಿಬರುವದಿಲ್ಲ. "

ಚಿಮಣಾಜಿ ಮತ್ತೆ ಮಾತನಾಡಲಿಲ್ಲ. ಐದು ರೂಪಾಯಿನದೊಂದು ನೋಟನ್ನು ಹಣಮಣ್ಣನ ಕೈಗೆ ಹಾಕಿ, " ಮಜಾ ಮಾಡು ಹೋಗು " ಎಂದು ಹೇಳಿದ. ಆ ಐದು ರೂಪಾಯಿ ಖರ್ಚಾಗುತ್ತಲೂ ಹಣಮಣ್ಣ ಮತ್ತೆ ತನ್ನ ಬಳಿ ಬರುವನೆಂದು ಅವನಿಗೆ ನಂಬಿಕೆಯಿತ್ತು. ಆದುದೂ ಹಾಗೆಯೆ.

" ಏನೋ, ಏನು ವಿಚಾರ ಮಾಡಿದೆ ? " ಎಂದು ಪ್ರಶ್ನಿಸಿದ ಚಿಮಣಾಜಿ.

" ನಿಮ್ಮಂಥವರು ಇಷ್ಟು ಹೇಳುತೀರಂದ ಮ್ಯಾಲ ಇಲ್ಲ ಅನ್ನೂದು ಹ್ಯಾಂಗರಿ ? ಹತ್ತು ರೂಪಾಯಿ ನನಗ ಸಾಕಾಗುವದಿಲ್ಲ ಇಪ್ಪತ್ತು ರೂಪಾಯಿ ಯಾದರೂ ಕೊಟ್ಟರ... "

" ರೂಪಾಯಿಯ ಚಿಂತೆಯನ್ನೇ ಬಿಟ್ಟುಬಿಡೋ ಹಣಮಣ್ಣಾ. ನರಹರಿ ರಾಯರು ನಿನ್ನ ಮೇಲೆ ಖುಷಿಯಾದರೆಂದರೆ ಸಾವಿರ ರೂಪಾಯಿ ಭಕ್ಷೀಸು ಕೊಟ್ಟಾರು; ಅದ್ಯಾಕೆ, ಎಂಟು ಹತ್ತು ಎಕರೆ ಹೊಲವನ್ನೇ ಬರೆದು ಕೊಟ್ಟಾರು.."

ಎಂಟು ಹತ್ತು ಎಕರೆ ಹೊಲ !....ಮೀನು ಗಾಳಕ್ಕೆ ಬಿತ್ತು.

ಸದಾಶಿವನ ವಿಶ್ವಾಸವನ್ನು ಯಾವ ರೀತಿ ದೊರಕಿಸುವುದೆಂಬುದರ ಬಗ್ಗೆ ಹಣಮಣ್ಣನಿಗೆ ವಿವರವಾಗಿ ಸೂಚನೆಗಳು ದೊರೆತುವು ಚಿಮಣಾಜಿಯಿಂದ.




ಸಂಘಟನೆಗಾಗಿ ಕಾರ್ಯಕರ್ತರನ್ನು ಶೇಖರಿಸಬಯಸುತ್ತಿದ್ದ ಸದಾಶಿವ ಹಣಮಣ್ಣನನ್ನು ತೆರೆದ ಹೃದಯದಿಂದಲೇ ಬರಮಾಡಿಕೊಂಡ. ಹಣಮಣ್ಣನ ಉದ್ದೇಶದ ಬಗ್ಗೆ ಅವನಿಗೆ ಕೊಂಚವೂ ಸಂದೇಹ ಬರಲಿಲ್ಲ.

“ ಜಮೀನ್ದಾರರ ಹಾವಳಿ ಬಹಳಾಯ್ತು ಸದಾಶಿವಣ್ಣಾ. ಅವರನ್ನ ಮುರಿಯೂದಕ್ಕ ಪಕ್ಷವೊಂದು ಬೇಕೇ ಬೇಕು. ಆದಷ್ಟು ಬೇಗ ಈ ಕೆಲಸ ಆಗಬೇಕು. ನೀವು ಹೇಳಿದ ಕೆಲಸ ಮಾಡಲಿಕ್ಕೆ ನಾ ತಯಾರಿದ್ದೀನಿ ” ಎಂದ ಹಣಮಣ್ಣ.

“ ಮೊದಲು ನಾವು ರೈತರನ್ನು ಎಚ್ಚರಿಸಬೇಕು. ಆಮೇಲೆ ಮುಂದಿನ ಕೆಲಸ ” ಎಂದ ಸದಾಶಿವ.

ಚೆನ್ನಬಸಪ್ಪನಿಗೆ ಮಾತ್ರ ಆ ಮಾತು ಒಪ್ಪಿಗೆಯಾಗದಾಗಿತ್ತು. ಕಾಂಗ್ರೆಸ್ಸಿನಲ್ಲಿರುವ ವೀರಶೈವ ಮುಖಂಡರನ್ನೆಲ್ಲ ಹೊರಗೆ ತಂದು ಪಕ್ಷ ಕಟ್ಟಿದರೆ ಜನರ ಬೆಂಬಲ ಸುಲಭವಾಗಿ ಸಿಕ್ಕುವುದೆಂದು ಅವನು ವಾದಿಸುತ್ತಿದ್ದ. ಮುಖಂಡರ ಹುಚ್ಚಿಗೆ ಬೀಳದೆ ಜನತೆಯನ್ನೇ ನೆಚ್ಚಿಕೊಂಡು ಕಾರ್ಯ ಸಾಗಿಸಬೇಕೆಂದು ಸದಾಶಿವನ ವಿಚಾರ.

“ ನಮ್ಮಂಥವರ ಮಾತು ಯಾರು ಕೇಳುತಾರ? ವಿಶಾಲಪ್ಪನವರು, ಸೋಮಶೇಖರಪ್ಪನವರು, ಕಡುಗಲಿ, ವೀರಣ್ಣ ಎಲ್ಲರೂ ಕಾಂಗ್ರೆಸ್ ಬಿಟ್ಟರೆ ಒಂದು ದಿವಸದಲ್ಲಿ ಪಕ್ಷವಾಗುತೈತಿ ” ಎನ್ನುತ್ತಿದ್ದ ಚನ್ನಬಸಪ್ಪ. ಅವನ ಒತ್ತಾಯಕ್ಕೊಳಗಾಗಿ ಅವನ ಜತೆಗೆ ಎರಡು ಮೂರು ಬಾರಿ ಕಳ್ಳೇಕಾಯಿಗೆ ಹೋಗಿ ವಿಶಾಲಪ್ಪ, ಕಡುಗಲಿ ಮೊದಲಾದವರನ್ನು ಕಂಡು ಮಾತನಾಡಿ ಬಂದಿದ್ದ ಸದಾಶಿವ.

" ಕಾಂಗ್ರೆಸನ್ನು ಬಿಡುವದೇ ? ಛೆ ! ಯಾಕ ಬಿಡಬೇಕು ನಾವದನ್ನ ? " ಎಂದಿದ್ದ ಕಡುಗಲಿ ಸಿದ್ಧರಾಮಪ್ಪ. ಚೆನ್ನಬಸಪ್ಪನ ವಾದದಿಂದ ಅವನ ಮನಸ್ಸಿನ ಮೇಲೆ ಕೊಂಚವೂ ಪರಿಣಾಮವುಂಟಾಗಿರಲಿಲ್ಲ. ಕಾಂಗ್ರೆಸ್ಸಿನ ಬಗೆಗೆ ಸಿದ್ಧರಾಮಪ್ಪನಲ್ಲಿ ಅಸಮಾಧಾನವೇನೋ ಇತ್ತು. ಆದರೆ ಆ ಅಸಮಾಧಾನಕ್ಕೆ ಯೋಗ್ಯ ಕಾರಣಗಳಿರಲಿಲ್ಲ. ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧಿಕಾರ ತನ್ನ ಕೈಗೆ ಸಿಗದೆ ಕೃಷ್ಣಾಜಿಯ ಕೈಗೆ ಹೋಯಿತಲ್ಲ ಎಂಬುದೇ ಅವನ ಅಸಮಾಧಾನದ ಮೂಲ ಕಾರಣವಾಗಿತ್ತು.

" ನಮಗ ಮೋಸ ಮಾಡಿ ಎಲ್ಲಾ ಅಧಿಕಾರ ತಾವೇ ಹಿಡಕೊಂಡು ಬಿಟ್ಟಾರವರು. ಎಲ್ಲಾ ಕಮಿಟಿಯೊಳಗೂ ಅವರ ಗುಂಪಿನವರೇ. ನಮ್ಮ ಗುಂಪಿನವರಿಗೂ ಸಮಾನ ಅಧಿಕಾರ ಕೊಡಬೇಕು ಅಂತ ಬಡಿದಾಡುತಾ ಇದೀವಿ ನಾವು. ಇಂದಿಲ್ಲ ನಾಳೆ ನಮಗೂ ಅವರು ಕೊಡಬೇಕಾಗುತೈತಿ " ಎಂದು ಹೇಳಿದ್ದ ಸಿದ್ಧರಾಮಪ್ಪ. ಆ ಮಾತು ಕೇಳಿದಾಗ ಸದಾಶಿವನಿಗೆ ಜುಗುಪ್ಸೆಯುಂಟಾಗಿತ್ತು.

" ಕಾಂಗ್ರೆಸಿನ ದುರಾಡಳಿತದಿಂದ ಬಡವರಿಗಾಗುತ್ತಿರುವ ಕಷ್ಟದ ಕಲ್ಪನೆಯೂ ಇವನಿಗಿಲ್ಲವಲ್ಲ ಚೆನ್ನಬಸಪ್ಪ ? ಕೃಷ್ಣಾಜಿಗೆ ಅಧಿಕಾರ ಸಿಕ್ಕಿತಲ್ಲಾ ಎಂದಿಷ್ಟೆ ಇವನ ಹೊಟ್ಟೆಕಿಚ್ಚು. ಕೃಷ್ಣಾಜಿಯ ಬದಲು ಇವನ ಕೈಯಲ್ಲೇ ಅಧಿಕಾರವಿದ್ದಿದ್ದರೂ ಪರಿಸ್ಥಿತಿ ಬದಲಾಗುತ್ತಿರಲಿಲ್ಲ, ಅಲ್ಲವೆ ? "

ಆ ಮಾತನ್ನು ಚೆನ್ನಬಸಪ್ಪ ಅಲ್ಲಗಳೆಯುವಂತಿರಲಿಲ್ಲ.

ವಿಶಾಲಪ್ಪನವರಂತೂ ಇವರೊಡನೆ ಸರಿಯಾಗಿ ಮಾತನ್ನೂ ಆಡಲಿಲ್ಲ. ಕಾಂಗ್ರೆಸ್ ವಿರೋಧಿಗಳನ್ನು ಮನೆಯಲ್ಲಿ ಸೇರಿಸುವುದಕ್ಕೂ ಅವರಿಗೆ ಭಯವಾಗುತ್ತಿದ್ದ ಹಾಗಿತ್ತು. ಚೆನ್ನಬಸಪ್ಪ, ಸದಾಶಿವ, ಈಶ್ವರ ಮತ್ತು ಹಣಮಣ್ಣರನ್ನು ಮನೆಯೊಳಗಡೆ ಕರೆಯುವ ಗೊಡವೆಗೆ ಹೋಗದೆ ಉದ್ಯಾನದಲ್ಲೇ ನಿಂತು ಅವರೊಡನೆ ಔಪಚಾರಿಕವಾಗಿ ನಾಲ್ಕು ಮಾತುಗಳನ್ನಾಡಿದ್ದರು ವಿಶಾಲಪ್ಪ.

" ಚುನಾವಣೆ ಹತ್ತರ ಬಂದಿತಲ್ಲರಿ. ನಿಮ್ಮ ವಿಚಾರ ಏನು ? "

ಎಂದು ಚೆನ್ನಬಸಪ್ಪ ಕೇಳಿದಾಗ ವಿಶಾಲಪ್ಪ ನಿರ್ಲಕ್ಷ್ಯದ ಧ್ವನಿಯಲ್ಲಿ ನುಡಿದಿದ್ದರು :

" ವಿಚಾರ ? ಯಾತರ ವಿಚಾರ ? "

" ನೀವು ಕಾಂಗ್ರೆಸಿನಲ್ಲೇ ಇರುವವರೋ ಇಲ್ಲಾ ಅದನ್ನು ಬಿಡುವವರೋ ? "

ಶಾಸನಸಭೆಯಲ್ಲಿ ಕಾಂಗ್ರೆಸ್ ಸದಸ್ಯರಾಗಿ ಸಂಬಳ ಪಡೆಯುತ್ತಿದ್ದವರು ವಿಶಾಲಪ್ಪ. ಮನೆಯಲ್ಲಿ ಎಂಟು ಹತ್ತು ಜನರ ಪರಿವಾರ. ಅವರ ಉಪಜೀವನಕ್ಕೆ ಆಧಾರವಾಗಿದ್ದುದು ವಿಶಾಲಪ್ಪನವರ ಸಂಬಳವೊಂದೇ. ಅಂತೆಯೆ, ಅದನ್ನು ಕಳೆದುಕೊಳ್ಳುವ ಯೋಚನೆಯನ್ನು ಅವರು ಸೈರಿಸುವಂತಿರಲಿಲ್ಲ. ಚುನಾವಣೆಯ ಕಾಲಕ್ಕೆ ಸ್ಥಾನವನ್ನುಳಿಸಿಕೊಂಡು ಮತ್ತೆ ಶಾಸನಸಭಾ ಸದಸ್ಯನಾದರೆ ಮಾತ್ರ ಅವರ ಸಂಸಾರ ರಥ ಸಾಗಬೇಕು. ಕಡುಗಲಿ ಸಿದ್ಧರಾಮಪ್ಪನ ಗುಂಪಿನ ಬಗ್ಗೆ ಅವರು ಸಹಾನುಭೂತಿ ವ್ಯಕ್ತಗೊಳಿಸುತ್ತ ಬಂದಿದ್ದರಾದುದರಿಂದ ಕೃಷ್ಣಾಜಿಯ ಗುಂಪಿಗೆ ಅವರ ವಿಚಾರವಾಗ ಅಸಮಾಧಾನವೇ ಇತ್ತು. ವಿಶಾಲಪ್ಪ ಕಾಂಗ್ರೆಸಿನ ವತಿಯಿಂದ ಶಾಸನಸಭಾ ಸದಸ್ಯರಾಗಿದ್ದರಾದರೂ ಕಾಂಗ್ರೆಸ್ಸಿಗಾಗಿ ಕೊಂಚವೂ ಕೆಲಸ ಮಾಡುತ್ತಿರಲಿಲ್ಲ ತಮ್ಮ ಮತದಾರ ಕ್ಷೇತ್ರದ ಜನರ ತೊಂದರೆಗಳನ್ನು ವಿಚಾರಿಸಿ ಅವುಗಳನ್ನು ನಿವಾರಿಸಲು ಯತ್ನಿಸುವುದು ಅವರ ಕರ್ತವ್ಯವಾಗಿದ್ದಿತಾದರೂ ಒಂದು ಸಲವೂ ಅವರು ಅತ್ತ ಗಮನವಿತ್ತಿರಲಿಲ್ಲ. ಅದರಿಂದಾಗಿ ಜನತೆಗೂ ಬೇಸರವುಂಟಾಗಿತ್ತು. ಬರುವ ಚುನಾವಣೆಯಲ್ಲಿ ಅವರನ್ನು ಹುರಿಯಾಳನ್ನಾಗಿ ನಿಲ್ಲಿಸಬಾರದೆಂದು ಕೃಷ್ಣಾಜಿಯ ಗುಂಪು ಒಳಗೊಳಗೇ ನಿರ್ಧರಿಸಿಕೊಂಡಿತ್ತು. ಕೃಷ್ಣಾಜಿ ಹಾಗೆ ಮಾಡಬಹುದೆಂಬ ಸಂಶಯ ವಿಶಾಲಪ್ಪನವರಿಗಿದ್ದಿತಾದರೂ ಮುಂಬಯಿಯಲ್ಲೂ ಹುಬ್ಬಳ್ಳಿಯಲ್ಲೂ ಪ್ರಭಾವ ಬೀರಿ ಸ್ಥಾನವುಳಿಸಿಕೊಳ್ಳಬಹುದೆಂಬ ಭರವಸೆಯೂ ಅವರಿಗಿತ್ತು. ತಮ್ಮ ಬಗ್ಗೆ ಜನತೆಯಲ್ಲಿ ಅಪಾರ ಭಕ್ತಿ ಶ್ರದ್ಧೆಗಳಿವೆಯೆಂದೇ ಅವರು ನಂಬಿಕೊಂಡಿದ್ದರು. ಕಾಂಗ್ರೆಸ್ಸಿನವರು ತಮಗೆ ಸೀಟು ಕೊಡದಿದ್ದಲ್ಲಿ ಜನತೆ ಸುಮ್ಮನಿರದೆ ಕೃಷ್ಣಾಜಿಯ ಮೇಲೆ ಒತ್ತಡ ತಂದು ಸೀಟು ಕೊಡಿಸಬಹುದೆಂಬ ಭ್ರಮೆಯೂ ಅವರಲ್ಲಿತ್ತು. ಚುನಾವಣೆಗಳ ತರುವಾಯ ಹೊಸ ಮಂತ್ರಿಮಂಡಲ ರಚಿಸಲ್ಪಡುವಾಗ

ತಮಗೊಂದು ಮಂತ್ರಿಪದವಿಯೂ ದೊರೆಯಬಹುದೆಂದು ಅವರು ಕನಸು ಕಾಣುತ್ತಿದ್ದರು. ಇಂಥವರು ಕಾಂಗ್ರೆಸ್ಸನ್ನು ಬಿಡುವ ಆಲೋಚನೆ ಮಾಡುವುದುಂಟೇ ?

ಅಂತೆಯೆ, ಚೆನ್ನಬಸಪ್ಪನ ಪ್ರಶ್ನೆಯಿಂದ ಕೆರಳಿ ಕೊಂಚ ಕಟುವಾದ ಸ್ವರದಲ್ಲಿ :

" ನೀವು ಏನೇನೋ ನಾನ್ಸೆನ್ಸ್ ಮಾತಾಡುತ್ತಿದೀರಿ. ನನಗೀಗ ಟೈಂ ಇಲ್ಲ. ಕ್ಲಬ್ಬಿಗೆ ಹೋಗಬೇಕು " ಎಂದು ಹೇಳಿದವರೆ ವಿಶಾಲಪ್ಪ ಮನೆಯೊಳಗಡೆ ಹೊರಟುಹೋಗಿದ್ದರು. ಅವರ ವರ್ತನೆಯನ್ನು ಕಂಡು ಚೆನ್ನಬಸಪ್ಪನಿಗೂ ಅಸಹ್ಯವೆನ್ನಿಸಿತ್ತು.

" ನೀವು ಹೇಳಿದ್ದು ಖರೆ ಸದಾಶಿವಣ್ಣಾ. ನಾವು ಮುಖಂಡರ ಬೆನ್ನು ಹತ್ತಿ ಉಪಯೋಗವಿಲ್ಲ. "

" ಈಗಲಾದರೂ ಗೊತ್ತಾಯಿತಲ್ಲ ನಿಮಗೆ. ಈ ಹಳೆಯ ತಲೆಮಾರಿನ ಜನರೆಲ್ಲಾ ಹೀಗೇ. ಅವರು ತಮ್ಮ ವೈಯಕ್ತಿಕ ಸ್ವಾರ್ಥ ಪ್ರತಿಷ್ಠೆ ನೋಡುತ್ತಾರೆಯೆ ವಿನಾ ಜನರ ಕಷ್ಟ ದುಃಖ ನೋಡುವದಿಲ್ಲ. ಅದರಲ್ಲೂ ವಿಶಾಲಪ್ಪನಂಥವರಂತೂ ಎಂದೂ ಜನರನ್ನು ಕಣ್ಣೆತ್ತಿ ನೋಡಿದವರಲ್ಲ. ಇವರು ಮುಖಂಡರಾದದ್ದು ಹ್ಯಾಗೆ ಗೊತ್ತಿಲ್ಲವೇ ನಿಮಗೆ ? ಬ್ರಾಹ್ಮಣೇತರ ಪಕ್ಷದ ಪುಢಾರಿಯಾಗಿ, ಬ್ರಿಟಿಷರ ಬೂಟು ಒರೆಸುತ್ತ ಬಂದು ಲಿಂಗಾಯತರ ನಾಯಕರೆನಿಸಿಕೊಂಡರು. ಕೌನ್ಸಿಲಿಗೆ ನಾಮಕರಣ ಹೊಂದಿದರು. ಹತ್ತು ವರ್ಷಗಳ ಹಿಂದೆ ಕಾಂಗ್ರೆಸ್ಸನ್ನೇ ಎದುರಿಸಿ ನಿಂತು ಚುನಾವಣೆಯಲ್ಲಿ ಸೋತು ಆಮೇಲೆ ಗಾಂಧಿ ಟೋಪಿ ಹಾಕಿಕೊಂಡು ತಾವೂ ಕಾಂಗ್ರೆಸ್ಸಿಗರಾದರು. ಇದುವರೆಗೆ ಬರೀ ತಮ್ಮ ಸ್ವಾರ್ಥಕ್ಕಾಗಿ ಬಣ್ಣ ಬದಲಿಸುತ್ತ ಬಂದ ಇವರು ಈಗಲೂ ಹಾಗೇ ಮಾಡುವದು ಸಹಜ. ಕಾಂಗ್ರೆಸಿನವರು ಇವರಿಗೆ ಸೀಟು ಕೊಡುವದಿಲ್ಲವೆಂದು ಖಾತ್ರಿಯಾದಾಗ ಮಾತ್ರ ಇವರು ಕಾಂಗ್ರೆಸ್ ಬಿಡುವದಕ್ಕೂ ತಯಾರಾಗಬಹುದು. "

" ಸೋಮಶೇಖರಪ್ಪ ವೀರಣ್ಣನೂ ಇವರಂತೇ ಮಾಡಬಹುದು ? "

" ಅದರಲ್ಲೇನು ಸಂಶಯ ? ಇವರೆಲ್ಲಾ ಒಂದೇ ಜಾತಿಯವರು ಇಂಥವ

ರನ್ನು ಮುಖಂಡರನ್ನಾಗಿ ಮಾಡಿಕೊಂಡು ನಾವು ಎಂಥಾ ಪಕ್ಷ ಮಾಡುವದು ಚೆನ್ನಬಸಪ್ಪ ? ”

ಪರಸ್ಪರ ವಿರುದ್ಧ ವಿಚಾರಗಳ ಸುಳಿಗೆ ಸಿಕ್ಕಿ ತೊಳಲುತ್ತಿದ್ದ ಚೆನ್ನಬಸಪ್ಪ. ಹೆಸರಾಂತ ಮುಖಂಡರಿಲ್ಲದೆ ಪಕ್ಷ ಯಶಸ್ವಿಯಾಗುವುದಿಲ್ಲವೆಂದೇ ಅವನಿಗಿನ್ನೂ ಎನ್ನಿಸುತ್ತಿತ್ತು.

ವಿಶಾಲಪ್ಪನವರಲ್ಲಿ ನಡೆದ ವಿದ್ಯಮಾನ ಹಣಮಣ್ಣನ ಮೂಲಕ ತಿಳಿದು ಬರುತ್ತಲೂ ಚಿಮಣಾಜಿಯ ಬಳಗ ಬಿದ್ದು ಬಿದ್ದು ನಕ್ಕಿತು.

“ ಚಟ್ರೋ ಫಜೀತಿಯೇ ಆಯ್ತು ಸದಾಶಿವಗ. ಇನ್ನಾದರೂ ಅವನು ತಣ್ಣಗೆ ಕೂಡಬಹುದು ” ಎಂದ ಧರ್ಮಣ್ಣ.

“ ಬಹಳ ಆದರೆ ಎರಡು ಮೂರು ತಿಂಗಳು ಪಿರಿಪಿರಿ ತಿರುಗಿ ಕೈಯಾಗಿದ್ದ ರೊಕ್ಕ ಖರ್ಚಾದ ಮ್ಯಾಲ ಮನೆ ಹಿಡಿದುಕೊಂಡು ಕೂಡುತಾನ ” ಎಂದ ಮಲ್ಲಪ್ಪ.

“ ಅವನ ಹತ್ತರಿ ಬಹಳ ಹಣ ಇರಬೇಕಲ್ಲ ಮಲ್ಲಪ್ಪಾ ? ” ಎಂದು ಕುತೂಹಲದಿಂದ ಕೇಳಿದ ಧರ್ಮಣ್ಣ.

“ ದರೋಡೆ ಹಾಕಿದ್ದು ಇರಲೇಬೇಕಲ್ಲ ? ಅದೆಲ್ಲಿ ಹೋಗುತ್ತೈತಿ ? ”

“ ಏನು ಒಂದು ಹತ್ತು ಸಾವಿರ ಇದ್ದೀತು ಅಂತೀಯಾ ? ”

“ ಇದ್ದರೂ ಇದ್ದೀತಪ್ಪಾ. ”

“ ಅದನ್ನೆಲ್ಲಾ ಎಲ್ಲಿ ಇಟ್ಟಿರಬಹುದು ಮಲ್ಲಪ್ಪಾ ? ಅಪ್ಪನ ಕೈಯಾಗ ಕೊಟ್ಟಿದ್ದಾನೋ ಏನು ? ”

“ ಯಾರಿಗೆ ಗೊತ್ತು ! ಮಹಾದೇವಪ್ಪ ಅಂತೂ ಗುಟ್ಟು ಬಿಟ್ಟುಕೊಡುವ ಮನುಷ್ಯ ಅಲ್ಲ. ”

“ ಅಲ್ಲೋ ಚಿಮಣಾಜಿ, ನಿನ್ನೂ ಮೀರಿಸುವ ಹಾಂಗ ಗಾಂಧೀ ಶಿಷ್ಯ ಅಂತ ಸೋಗು ಹಾಕಿದಾನಲ್ಲ ಮಹಾದೇವಪ್ಪ ? ಮಗನ ಕೆಲಸ ತನಗ ಸರಿ ಬರುವದಿಲ್ಲಂತ ಮ್ಯಾಲ ತೋರಿಸುತಾನ. ಒಳಗೊಳಗ ದರೋಡೆಯ ಹಣ ಮುಚ್ಚಿಟ್ಟುಕೊಂಡಿರಬೇಕು. ಏನಂತೀ ? ”

“ ಏನೋಪ್ಪಾ, ನನಗಾದರೂ ಹ್ಯಾಗೆ ಗೊತ್ತಾಗಬೇಕು ? ”

" ನಿನ್ನ ಮಗಳನ್ನ ಸದಾಶಿವಗ ಕೊಡಬೇಕಂತ ಮಾಡೀಯೇನೋ ಮಲ್ಲಪ್ಪಾ ? ಮಂದಿ ಮಾತಾಡುತಾರಲ್ಲ ? "

"ಮಂದಿಯೇನು ಬಿಡು, ಬಾಯಿಗೆ ಬಂದದ್ದೆಲ್ಲಾ ಮಾತಾಡುತಾರ. ಅಂಥವನಿಗೆ ಮಗಳನ್ನ ಕೊಡಲು ನನಗೇನು ಹುಚ್ಚೇ ಧರ್ಮಣ್ಣಾ ? "

" ಹುಡುಗಿ ಅಲ್ಲೇ ಇರುತಾಳಂತಲ್ಲ ಯಾವಾಗಲೂ ? "

" ಸಣ್ಣವಳಿದ್ದಾಗಿಂದ ಹೋಗಿ ಬಂದು ರೂಢಿಯಾಗೈತಿ ಅವಳಿಗೆ. ಅದರಾಗೇನು ಬಿಡೋ. ನೆರೆಮನೆಯವರು, ಹೋದರೂ ಏನಂತೆ ? "

ಧರ್ಮಣ್ಣ ಆ ವಿಷಯ ಹೆಚ್ಚು ಬೆಳಸಲಿಲ್ಲ.

ತನ್ನ ಮಗಳು ಮಹಾದೇವಪ್ಪನ ಮನೆಗೆ ಹೋಗಿ ಅಡುಗೆಯಲ್ಲಿ ನೆರವಾಗುವುದೂ, ಸದಾಶಿವನಿಗೆ ಊಟಕ್ಕೆ ಬಡಿಸುತ್ತ ನಿಲ್ಲುವುದೂ, ಅವನ ಬಟ್ಟೆಗಳನ್ನು ತೊಳೆದು ಕೊಡುವುದೂ ಮಲ್ಲಪ್ಪನಿಗೆ ಎಷ್ಟು ಮಾತ್ರಕ್ಕೂ ಸರಿಬರುತ್ತಿರಲಿಲ್ಲ. ಬೆಳೆದ ಯುವತಿಯನ್ನು ಹಾಗೆ ಬಿಡುವುದು ತಪ್ಪೆಂದು ಯೋಚಿಸಿ ಒಂದೆರಡು ಬಾರಿ ಅವನು ಸೌಮ್ಯವಾಗಿ ಆ ವಿಷಯವೆತ್ತಿದಾಗ ಸಾವಿತ್ರಿ ಮೃದುವಾಗಿ ನಕ್ಕು ಹೇಳಿದ್ದಳು :

" ಅವರು ತ್ರಾಸ ಮಾಡಿಕೊಳ್ಳುವದನ್ನ ನೋಡಲಾರದೆ ಯಾವಾಗಲಾದರೂ ಹೋಗಿ ಸಹಾಯ ಮಾಡುತ್ತೇನಪ್ಪಾ ನೀನು ಬೇಡಾಂದರೆ ಬಿಟ್ಟುಬಿಡುತೇನೆ. "

ಮಗಳ ಮನಸ್ಸು ನೋಯಿಸಲು ಮಲ್ಲಪ್ಪನಿಗಿಷ್ಟವಿರಲಿಲ್ಲವಾದುದರಿಂದ ಅವನು ಆ ವಿಷಯವನ್ನು ಅಲ್ಲಿಗೇ ಬಿಟ್ಟುಬಿಟ್ಟದ್ದ.

ಸದಾಶಿವ ಮನೆಯಲ್ಲಿರುವಾಗ ಸಾವಿತ್ರಿ ತಮ್ಮಲ್ಲಿಗೆ ಪದೇ ಪದೇ ಬರುವುದು ಉಚಿತವಾಗಲಾರದೆಂದು ಯೋಚಿಸಿ ಮಹಾದೇವಪ್ಪನೂ ಒಂದು ಸಲ ಅವಳಿಗೆ ಹೇಳಿ ನೋಡಿದ್ದ.

" ಮಂದಿಯ ಬಾಯಿ ಚಲೋದಲ್ಲ ಮಗಳೇ. ನಮ್ಮಿಂದಾಗಿ ನಿನಗೆ ಯಾಕೆ ಅಪವಾದ ಬರಬೇಕು ಸುಮ್ಮನೆ ? "

ಅಪವಾದ ಬಂದರೂ ಬರಬಹುದೆಂಬುದೇನೊ ಅವಳಿಗೆ ಚೆನ್ನಾಗಿ ಗೊತ್ತಿತ್ತು. ಅವಳು ಅನನುಭವಿಕಳೇನೂ ಅಲ್ಲ. ಸಮಾಜದ ಟೀಕೆಗೆ ಅವಕಾಶ

ಲಭಿಸದಂತೆ ವರ್ತಿಸಬೇಕೆಂಬುದನ್ನೂ ಅವಳು ಬಲ್ಲಳು. ಆದರೂ ಮಹಾದೇವಪ್ಪನ ಮನೆಗೆ ಬಂದು ಹೋಗುವುದನ್ನು ನಿಲ್ಲಿಸಿಬಿಡಲು ಅವಳ ಮನಸ್ಸು ಒಪ್ಪುತ್ತಿರಲಿಲ್ಲ. ತನ್ನ ಬಗ್ಗೆ ಸದಾಶಿವನಿಗಾಗಲಿ, ಅವನ ಬಗ್ಗೆ ತನಗಾಗಲಿ ಯಾವ ಬಗೆಯ ವಿಕಾರವೂ ಇಲ್ಲವೆಂಬುದನ್ನು ಅವಳು ಅರಿತುಕೊಂಡವಳು. ಅವನು ತನ್ನವನಾಗಬೇಕೆಂಬ ಆಕಾಂಕ್ಷೆಯೇನೊ ತನಗಿದೆ. ತನ್ನ ವಿಚಾರವಾಗಿ ಅವನಲ್ಲಿಯೂ ಅಂಥ ಅಪೇಕ್ಷೆಯಿದ್ದರೂ ಇದ್ದೀತು, ಇಲ್ಲದಿದ್ದರೂ ಇಲ್ಲ. ಪರಸ್ಪರರ ಬಗ್ಗೆ ಕೀಳು ಯೋಚನೆ ಮಾತ್ರ ಇಬ್ಬರಲ್ಲೂ ಇಲ್ಲವೆಂಬುದಿಷ್ಟು ನಿಜ. ಹೀಗಿರುತ್ತ ಜನರ ಮಾತಿಗೆ ತಾನೇಕೆ ಭಯಪಡಬೇಕು? ಹಾಗೆ ಭಯಪಡುವುದೆಂದರೆ ಅಪ್ರತ್ಯಕ್ಷನಾಗಿ, ತಮ್ಮಿಬ್ಬರ ಪವಿತ್ರ ಸಂಬಂಧಕ್ಕೆ ಕಲಂಕ ಸವರಿದ ಹಾಗಾದೀತು. ಎಂದವಳ ಯೋಚನೆ. ಅಂತೆಯೆ, ಜನಾಪವಾದದ ಭೀತಿಯನ್ನು ತೊಡೆದು ಹಾಕಿ ವಿಶುದ್ಧ ಮನಸ್ಸಿನಿಂದ ಸದಾಶಿವನ ಮನೆಯಲ್ಲಿ ಓಡಿಯಾಡುತ್ತಿದ್ದಳು ಸಾವಿತ್ರಿ. ಸದಾಶಿವನಿಗಂತೂ ಅವಳ ವಿಚಾರವಾಗಿ ಯೋಚಿಸುವುದಕ್ಕೂ ಬಿಡುವಾಗುತ್ತಿರಲಿಲ್ಲ. ಧ್ಯೇಯ ಸಾಧನೆಯ ಆಲೋಚನೆಯೊಂದೇ ಅವನ ಮನಸ್ಸನ್ನೆಲ್ಲ ಆಕ್ರಮಿಸಿಕೊಂಡಿತ್ತು. ಅವಳು ತಮ್ಮ ಮನೆಗೆ ಬಂದು ಕೆಲಸ ಮಾಡುವುದೊಂದು ವಿಚಿತ್ರ ವಿಷಯವೆಂದು ಅವನಿಗೆಂದೂ ಹೊಳೆದಿರಲಿಲ್ಲ. ತಮ್ಮ ಮನೆಯಲ್ಲಿ ಅವಳೂ ಒಬ್ಬಳು ಪ್ರಮುಖ ವ್ಯಕ್ತಿಯೆಂದೇ ಅವನ ಭಾವನೆ. ಚಿಕ್ಕ ಕೂಸಾಗಿದ್ದಂದಿನಿಂದ ಅವಳು ತಮ್ಮಲ್ಲಿಯೆ ಆಡಿಕೊಂಡು ಬೆಳೆದವಳು. ತಾನೂ ಅನೇಕ ಸಲ ಅವಳನ್ನೆತ್ತಿ ಆಡಿಸಿದ್ದಾನೆ. ಅವಳು ಬೇರೆಯವರ ಮನೆಯವಳೆಂಬ ವಿಚಾರ ಒಂದು ಬಾರಿಯೂ ಅವನಿಗೆ ಬಂದಿಲ್ಲ. ಅಂತೆಯೆ, ಅವಳ ಸೇವೆಯನ್ನೆಲ್ಲ ನಿಸ್ಸಂಕೋಚವಾಗಿ ಸ್ವೀಕರಿಸುವುದು ಅವನಿಗೆ ಅಭ್ಯಾಸವಾಗಿದೆ. ಅವಳೀಗ ಬೆಳೆದ ಯುವತಿಯೆಂಬುದರ ಅರಿವೂ ಅವನಿಗಿದ್ದಂತಿಲ್ಲ. ಅವಳಿನ್ನೂ ಮಗುವೇ ಅವನ ದೃಷ್ಟಿಯಲ್ಲಿ. ಮೊದಲಿನ ಸಲಿಗೆಯಿಂದಲೇ ಈಗಲೂ ಅವನು ಅವಳನ್ನು ಕರೆಯುತ್ತಾನೆ. ತಾನು ಹೊರಗಿನಿಂದ ಬಂದಾಗ ಅವಳು ಮನೆಯಲ್ಲಿರದಿದ್ದರೆ, ಮಲ್ಲಪ್ಪನ ಮನೆಗೆ ಕೇಳಿಸುವ ಹಾಗೆ ಕೂಗಿ ಅವಳನ್ನು ಬರಮಾಡಿಕೊಳ್ಳುತ್ತಾನೆ. ಸಾವಿತ್ರಿಯ ತಾಯಿಗೂ ಸದಾಶಿವನ ಬಗ್ಗೆ ತುಂಬಾ ಪ್ರೇಮ. ತನ್ನ ಮಗಳ ಬಗ್ಗೆ ಅವನು

ವ್ಯಕ್ತಗೊಳಿಸುವ ಆತ್ಮೀಯತೆಯನ್ನು ಕಂಡು ಅವಳಿಗೂ ಹಿಗ್ಗು. ಇಂದಿಲ್ಲ ನಾಳೆ ಅವನು ಅವಳನ್ನು ಮದುವೆಯಾಗಬಹುದೆಂಬ ಭರವಸೆ ಅವಳದು. ಸದಾಶಿವನಂಥ ಸುಶಿಕ್ಷಿತ, ಸುಸ್ವಭಾವಿ ಯುವಕನನ್ನು ಮದುವೆಯಾಗಿ ಮಗಳು ನೆರೆಮನೆಯಲ್ಲಿಯೆ ಸುಖದಿಂದ ಇರುವಂತಾದರೆ ತಾಯಿಗೂ ಸಂತೋಷ ವಲ್ಲವೆ ?

೧೨

ರೈತಸಮಿತಿಯೊಂದನ್ನು ಸ್ಥಾಪಿಸಿ ಅದರ ಮೂಲಕ ಸಂಘಟನೆಯ ಕಾರ್ಯ್ಯಕ್ಕಾರಂಭಿಸಬೇಕೆಂದು ಸದಾಶಿವನೂ ಚೆನ್ನಬಸಪ್ಪನೂ ಯೋಚಿಸುತ್ತಿದ್ದಾಗ ಒಂದು ದಿನ ಮೂರುಸಾವಿರಪ್ಪನಿಂದ ಕಾಗದವೊಂದು ಬಂದಿತು. ತನ್ನ ಗ್ರಾಮವಾದ ಮೇಲ್ಕುರಿಯಲ್ಲಿ ತಮ್ಮ 'ರೈತೋದ್ಧಾರ ಸಂಘ'ದ ಸಭೆಯೊಂದನ್ನು ಏರ್ಪಡಿಸಿರುವುದಾಗಿ ತಿಳಿಸಿ ಅದಕ್ಕೆ ಉಪನ್ಯಾಸಕಾರರಾಗಿ ಬಂದು ಹೋಗಬೇಕೆಂದು ಆಮಂತ್ರಿಸಿದ್ದ ಮೂರುಸಾವಿರಪ್ಪ. "ಮುದಿಯಪ್ಪ ವಕೀಲರು, 'ಲಿಂಗವೀರ'ದ ಗಂಗಾಧರ ಶಾಸ್ತ್ರಿಗಳು, ಜೋಶಿ ರಾಮಣ್ಣ, ಎಡ್ವರ್ಡ್ ಸಹ ಬರುತ್ತಾರೆ. ನೀವೂ ತಪ್ಪದೆ ಬರಬೇಕು. ನಾವೆಲ್ಲ ಸೇರಿ ಕೃಷ್ಣಾಜಿಯನ್ನು ನಡುಗಿಸಿಬಿಡೋಣ," ಎಂದೂ ಅವನು ಬರೆದಿದ್ದ.

ಕೊನೆಯ ವಾಕ್ಯವನ್ನು ಕಂಡು ಸದಾಶಿವನಿಗೆ ಬಲು ಬೇಸರವಾಯಿತು.

"ಇವನು ಸಭೆ ಮಾಡುವದರ ಉದ್ದೇಶವಾದರೂ ಏನು ಈಶ್ವರ? ಇವನಿಲ್ಲಿ ಬರೆದಿರುವವನ್ನು ನೋಡಿದರೆ ಕೇವಲ ಕೃಷ್ಣಾಜಿಯನ್ನು ನಡುಗಿಸುವದಕ್ಕೇ ಇಷ್ಟೆಲ್ಲ ಜನರನ್ನು ಕೂಡಿಸಿ ಇವನು ಗದ್ದಲ ಮಾಡುತ್ತಿರುವನೇನೋ ಅನ್ನಿಸುತ್ತದೆ."

"ನನಗೂ ಹಾಗೇ ಅನ್ನಿಸುತ್ತದೆ," ಎಂದ ಈಶ್ವರ. ಕೆಲವು ದಿನಗಳಿಂದ ಅವನಿಗೆ ಮತ್ತೆ ಜ್ವರ ಕಾಯತೊಡಗಿತ್ತು. ಪೂರ್ಣ ವಿಶ್ರಾಂತಿ ಪಡೆಯಬೇಕೆಂದು ಡಾಕ್ಟರು ಮೇಲಿಂದ ಮೇಲೆ ಎಚ್ಚರಿಸತೊಡಗಿದರು. ನಿತ್ರಾಣನಾಗಿದ್ದ ಈಶ್ವರನಿಗೆ ಆಗ ಸಹಜವಾಗಿಯೆ ಯಾವುದರ ಬಗೆಗೂ ಉತ್ಸಾಹವಿರಲಿಲ್ಲ.

"ಕೃಷ್ಣಾಜಿಯನ್ನ ನಡುಗಿಸುವದೂ ಬೇಕೇ ಬೇಕು," ಎಂದು ಚೆನ್ನ

ಬಸಪ್ಪ ಅಭಿಪ್ರಾಯಪಟ್ಟ. "ಕಾಂಗ್ರೆಸ್ಸಿನ ಮುಖ್ಯ ಶಕ್ತಿ ಅಂದರೆ ಕೃಷ್ಣಾಜಿ. ಅವನ್ನ ಮುರಿಬಡಿದೆವೆಂದರೆ ಕಾಂಗ್ರೆಸ್ಸನ್ನೇ ಮುರಿಬಡಿದ ಹಾಗೆ."

"ಪೂರಾ ತಪ್ಪು ಕಲ್ಪನೆ ನಿಮ್ಮದು ಚೆನ್ನಬಸಪ್ಪ. ಒಂದು ಸಂಸ್ಥೆಯ ಭವಿತವ್ಯ ಒಂದು ವ್ಯಕ್ತಿಯನ್ನವಲಂಬಿಸಿಕೊಂಡಿರುವದಿಲ್ಲ. ಕಾಂಗ್ರೆಸ್ಸಿನ ಬಗ್ಗೆ ಜನರಲ್ಲಿ ಅಂಧಶ್ರದ್ಧೆ ಇರುವ ವರೆಗೂ ಕಾಂಗ್ರೆಸ್ಸು ಪ್ರಬಲವಾಗೇ ಉಳಿಯುತ್ತದೆ. ಒಬ್ಬ ಕೃಷ್ಣಾಜಿ ಹೋದರೆ ಇನ್ನೊಬ್ಬ ವೆಂಕಾಜಿ ಬರುತ್ತಾನೆ."

"ನಮಗೂ ನಿಮಗೂ ಜಗಳ ಬರೂದು ಇಲ್ಲೇ. ಮೊದಲು ಕೃಷ್ಣಾಜಿಯನ್ನ ಮಣ್ಣುಗೂಡಿಸಬೇಕೆಂದೇ ನನ್ನದೂ ವಿಚಾರ."

"ಅವನ ಬದಲು ಕಡುಗಲಿಯ ಕೈಗೆ ಜಿಲ್ಲಾ ಕಾಂಗ್ರೆಸ್ ಅಧಿಕಾರ ಬಂತು ಅಂತ ತಿಳಿಯೋಣ. ಆಗ ನೀವೇನು ಮಾಡುವವರು ?"

"ಏನೂ ಮಾಡುವದಿಲ್ಲ. ಸುಮ್ಮನಿರುತ್ತೇನೆ. ನಮ್ಮವರೇ ಅಧಿಕಾರಕ್ಕೆ ಬಂದರೆ ನಾವ್ಯಾಕೆ ವಿರೋಧ ಮಾಡಬೇಕು ?"

ಈಶ್ವರ ನಡುವೆ ಬಾಯಿ ಹಾಕಿ ಆ ವಾದವನ್ನು ತಡೆದು ನಿಲ್ಲಿಸಿ, "ಅದು ಇರಲಿ ಚೆನ್ನಬಸಪ್ಪ ಈಗೇನು ಮಾಡುವದೆಂಬುದನ್ನು ನಿಶ್ಚಯಿಸೋಣ. ಮೂರುಸಾವಿರಪ್ಪನ ಸಭೆಗೆ ಹೋಗಿ ಬರುವದೋ ಹ್ಯಾಗೆ ?"

"ಆಮಂತ್ರಣ ಕೊಟ್ಟಿದ್ದಾನೆಂದ ಮ್ಯಾಲ ಹೋಗಿಬರಲಿಕ್ಕೇ ಬೇಕಲ್ಲ ? ಅವನು ಅಲ್ಲಿ, ನಾವು ಇಲ್ಲಿ ಒಬ್ಬರಿಗೊಬ್ಬರು ಸಹಾಯವಾಗಿ ಕೆಲಸ ಮಾಡಬಹುದು. ಮೂರುಸಾವಿರಪ್ಪನೂ ಬಹಳ ಹುರುಪಿನ ಗಡಿ."

ಗೊತ್ತಾದ ದಿನ ಬೆಳಗಿನ ರೈಲಿಗೆ ಮೂವರೂ ಹೊರಟು ಮಧ್ಯಾಹ್ನದ ವೇಳೆಗೆ ಮೇಲ್ಮುರಿಯನ್ನು ಸೇರಿದರು. ರಾಮಣ್ಣ, ಗಂಗಾಧರ ಶಾಸ್ತ್ರಿ ಮೊದಲಾದವರೆಲ್ಲ ಅವರಿಗೂ ಮೊದಲೇ ಬಂದು ಮುಟ್ಟಿದ್ದರು. ಸದಾಶಿವ, ಈಶ್ವರ ಅಲ್ಲಿಗೆ ಬಂದುದು ಗಂಗಾಧರ ಶಾಸ್ತ್ರಿ, ಮುದಿಯಪ್ಪರಿಗೆ ಸರಿಬರಲಿಲ್ಲ. ಮೂರುಸಾವಿರಪ್ಪನನ್ನು ಒಂದು ಬದಿಗೆ ಕರೆದೊಯ್ದು ಶಾಸ್ತ್ರಿಯೆಂದ :

"ಇವರನ್ಯಾಕೆ ಕರೆಸಿದೆ ಮೂರುಸಾವಿರಪ್ಪ? ಇವರು ಕಮ್ಯುನಿಸ್ಟರು..."

"ಇರಲಿರಲಿ ಶಾಸ್ತ್ರಿಗಳೇ. ಎಲ್ಲಾ ತರದ ಜನರನ್ನ ಕೂಡಿಸಿ ದೊಡ್ಡ

ಗದ್ದಲ ಹಾಕಿಬಿಡೋಣ. ಕಮ್ಯುನಿಸ್ಟರೂ ಬಂದಿದ್ದರೆಂತ ತಿಳಿದಾಗ ಕೃಷ್ಣಾಜಿ ಗಡಗಡ ನಡುಗಿ ಬಿಟ್ಟಾನು."

ಮೂವತ್ತೆರಡರ ಪ್ರಾಯದ ಮುದಿಯಪ್ಪ, ಹೆಸರಿಗೆ ತಕ್ಕಂತೆ ಆ ವಯಸ್ಸಿಗಾಗಲೇ ಮುದುಕನಂತೆ ಕಾಣುತ್ತಿದ್ದ. ಸುಕ್ಕು ಸುಕ್ಕಾದ ಮುಖ. ನರೆತ ಕೂದಲಿನ ತಲೆ. ಎಣ್ಣೆಯ ಸ್ಪರ್ಶವಿಲ್ಲದ ಕೂದಲು ಕೆದರಿ ಹಾರುತ್ತಿತ್ತು. ಅನೇಕ ದಿನ ಉಪಯೋಗಿಸಿ ಕೊಳೆಯಾಗಿದ್ದ ಬಿಳಿಯ ಪ್ಯಾಂಟು ಹಾಕಿ ಮಾಸಿದ ಕೋಟು ತೊಟ್ಟುಕೊಂಡಿದ್ದ ಮುದಿಯಪ್ಪ ಪ್ಯಾಂಟನ್ನು ಸರಿಯಾಗಿ ಹಾಕಿಕೊಳ್ಳಲು ಕೂಡ ಅವನಿಗೆ ಗೊತ್ತಿದ್ದಂತೆ ತೋರುತ್ತಿರಲಿಲ್ಲ; ಅದು ಪದೇ ಪದೇ ಕೆಳಗಡೆ ಜಾರುತ್ತಿತ್ತು, ಅದನ್ನು ಮತ್ತೆ ಮತ್ತೆ ಮೇಲಕ್ಕೇರಿಸಿಕೊಳ್ಳುವುದರಲ್ಲಿಯೆ ಅವನ ಸಮಯ ಕಳೆಯುತ್ತಿತ್ತು. ಮೂರುಸಾವಿರಪ್ಪನನ್ನು ಮುಂದೆ ಮಾಡಿ ಜನತೆಯಲ್ಲಿ ಕಾಂಗ್ರೆಸ್ ವಿರೋಧಭಾವ ಬೆಳೆಸಿ ಅದನ್ನು ಉಪಯೋಗಿಸಿಕೊಂಡು ತಾನು ಹುರಿಯಾಳಾಗಿ ನಿಂತು ಶಾಸನಸಭಾ ಸದಸ್ಯನಾಗಬೇಕೆಂದು ಯೋಜನೆ ಹಾಕಿಕೊಂಡಿದ್ದ ಮುದಿಯಪ್ಪನಿಗೆ, ಸದಾಶಿವನಂಥ ತೇಜಸ್ವಿಯನ್ನು ಕಂಡಾಗ ಅಸೂಯೆಯೆನ್ನಿಸುವುದು ಸಹಜವೆ ಆಗಿತ್ತು.

" ಇವನನ್ಯಾಕೆ ಕರೆಸಿದೆಯೋ ಮೂರುಸಾವಿರಪ್ಪಾ? ನಿನಗೆ ಏನೇನೂ ಬುದ್ಧಿಯಿಲ್ಲ ನೋಡು. ರಾಜಕಾರಣದ ಮುತ್ಸದ್ದಿತನವಂತೂ ಸ್ವಲ್ಪವೂ ತಿಳಿಯುವದಿಲ್ಲ ನಿನಗೆ," ಎಂದು ಸಿಟ್ಟು ಮಾಡಿ ಹೇಳಿದ ಮುದಿಯಪ್ಪ.

" ಯಾಕ್ರೀ, ಏನಾತು ? "

" ಚುನಾವಣೆಗೆ ಇವನೂ ನಿಲ್ಲುವ ಹಾಗೆ ಕಾಣುತ್ತದೆ. ಇಂಥವನನ್ನು ನಾವಾಗೇ ಭಾಷಣಕ್ಕೆ ಕರೆಯಿಸಿ ಇವನ ಹೆಸರು ಜನರಿಗೆ ತಿಳಿಯುವಂತೆ ಮಾಡುತ್ತಾರೆಯೆ? ನಮ್ಮ ಕಾಲ ಮೇಲೆ ನಾವೇ ಕಲ್ಲು ಹಾಕಿಕೊಂಡರೆ ಹ್ಯಾಗೆ? "

" ನೀವ್ಯಾಕ ಅಂಜುತೀರಿ ಬಿಡಿರೀ. ಇಂಥವರೆಲ್ಲಾ ಚುನಾವಣೆಗೆ ನಿಂತರೆ ವೋಟು ಹಾಕುವವರು ಯಾರು? ನಿಮ್ಮಂಥ ಬಿ. ಎ. ಎಲ್‌ಎಲ್. ಬಿ. ದವರನ್ನ ಬಿಟ್ಟು ಮಂದಿ ಇಂಥವರ ಬೆನ್ನು ಹತ್ತುತಾರೇನು? "

ಆಗಲೂ ಮುದಿಯಪ್ಪನಿಗೆ ಸಮಾಧಾನವಾಗಲಿಲ್ಲ. ಊಟ ನಡೆದಾಗ

ಅವನು ಸದಾಶಿವನನ್ನು ಮತ್ಸರದ ದೃಷ್ಟಿಯಿಂದ ಮತ್ತೆ ಮತ್ತೆ ನಿರೀಕ್ಷಿಸುತ್ತಿದ್ದ. ಸದಾಶಿವನಿಗೆ ಮಾತ್ರ ಅವನ ಕಡೆ ಗಮನವಿರಲಿಲ್ಲ.

"ಏನು ಸದಾಶಿವ, ಕಡೆಗೆ ಏನು ನಿಶ್ಚಯ ಮಾಡಿದಿರಿ?" ಎಂದು ರಾಮಣ್ಣ ಮಾತು ತೆಗೆದ.

"ಯಾತರ ನಿಶ್ಚಯ?" ಎಂದು ನಡುವೆ ಬಾಯಿ ಹಾಕಿದ ಶಾಸ್ತ್ರಿ.

"ಪುರೋಗಾಮಿ ಪಕ್ಷಕ್ಕೆ ಸೇರಿಕೊಳ್ಳುವ ಮಾತು."

"ಹೂಂ. ಇವರೊಬ್ಬರು ಸೇರಿಕೊಂಡರೆ ಪ್ರಬಲವಾಗಿ ಹೋಗುತ್ತದೆ ನೋಡ್ರಿ ನಿಮ್ಮ ಪಕ್ಷ!" ಎಂದು ಅಣಕದ ಧ್ವನಿಯಲ್ಲಿ ನುಡಿದ ಮುದಿಯಪ್ಪ. ತಟ್ಟೆಯ ಮೇಲೆ ದೃಷ್ಟಿಯಿರಿಸಿ ಊಟದಲ್ಲಿ ತನ್ಮಯನಾಗಿದ್ದ ಸದಾಶಿವ ಒಂದು ಬಾರಿ ಕತ್ತೆತ್ತಿ ಮುದಿಯಪ್ಪನ ಕಡೆ ದೃಷ್ಟಿ ಹೊರಳಿಸಿದನಷ್ಟೆ. ಅವನ ಅಣಕದ ಮಾತಿಗೆ ಉತ್ತರವೀಯಬೇಕೆಂದೂ ಸದಾಶಿವನಿಗನ್ನಿಸಲಿಲ್ಲ. ಮುದಿಯಪ್ಪನ ಸ್ವಭಾವ ಅವನಿಗೂ ಚೆನ್ನಾಗಿ ಗೊತ್ತಿತ್ತು—ಮೊದಲಿನಿಂದಲೂ ಅತ್ಯಂತ ದುರ್ಬಲನಾದುದರಿಂದ ಮುದಿಯಪ್ಪ ಸ್ವಾಭಾವಿಕವಾಗಿಯೆ ಮತ್ಸರ ಮನಸ್ಕನಾಗಿದ್ದ. ತನಗಿಂತ ಹೆಚ್ಚು ಮೇಧಾವಿಗಳಾಗಿದ್ದವರನ್ನೂ ಬಲಶಾಲಿಯಾಗಿದ್ದವರನ್ನೂ ಕಂಡೊಡನೆ ಕರುಬುವುದು ಅವನ ಚಾರಿತ್ರ್ಯದಲ್ಲೇ ಬಂದು ಬಿಟ್ಟಿತ್ತು. ವಕೀಲಿ ವೃತ್ತಿಯಲ್ಲೂ ಅಂಥ ಆದಾಯವೇನೂ ಇರಲಿಲ್ಲ. ಸಂಸಾರದಲ್ಲೂ ಅವನಿಗೆ ಸುಖವಿರಲಿಲ್ಲ. ಧನಿಕರೊಬ್ಬರ ಏಕಮಾತ್ರ ಕನ್ಯೆಯನ್ನವನು ವಿವಾಹವಾಗಿದ್ದ. ಸಂಸಾರದ ಖರ್ಚಿಗಾಗಿ ತನ್ನ ತವರುಮನೆಯಿಂದ ಹಣ ತಂದುಹಾಕುತ್ತಿದ್ದ ಅವಳು ಸಹಜವಾಗಿಯೆ ಅವನ ಮೇಲೆ ಯಾಜಮಾನ್ಯ ನಡಸುತ್ತಿದ್ದಳು. ಅವನೊಂದು ಅಂಗಿಯನ್ನು ಹೊಲಿಸಿಕೊಳ್ಳುವುದಿದ್ದರೂ ಅವಳಿಂದ ಹಣ ಪಡೆಯಬೇಕಾಗುತ್ತಿತ್ತು. ಆರೇಳು ವರ್ಷಗಳ ಕಾಲ ಅವಳ ದಾಸ್ಯದಲ್ಲಿ ಬದುಕುತ್ತ ಬಂದಿದ್ದ ಮುದಿಯಪ್ಪನಿಗೆ ಈ ವೇಳೆಗಾಗಲೇ ಆ ಜೀವನ ವೈಯುಂಡು ಹೋಗಿತ್ತು. ಚುನಾವಣೆಯ ಖರ್ಚಿಗೂ ಅವಳಿಂದಲೇ ಹಣ ಪಡೆದು ಶಾಸನಸಭಾಸದಸ್ಯನಾಗಿ ಮುಂಬಯಿಗೆ ಹೋಗಿ ಮೆರೆಯಬೇಕೆಂದು ಅವನು ಲೆಕ್ಕ ಹಾಕಿಕೊಂಡಿದ್ದ. ಕಾಂಗ್ರೆಸ್ ವರ್ತುಲಗಳಲ್ಲಂತೂ ಅವನನ್ನು ಯಾರೂ ಗಮನಿಸುತ್ತಿರಲಿಲ್ಲ. ಅಂತೆಯೆ, ಮೂರುಸಾವಿರಪ್ಪನ

ಬೆನ್ನು ತಟ್ಟುತ್ತಾ ತನ್ನ ಬೇಳೆ ಬೇಯಿಸಿಕೊಳ್ಳುವ ಹವಣಿಕೆಯಲ್ಲಿದ್ದ ಮುದಿಯಪ್ಪ. ರೈತರದೊಂದು ಗುಂಪು ಕಟ್ಟಿದ್ದ ಮೂರುಸಾವಿರಪ್ಪನನ್ನು ತನ್ನ ಹೊರತು ಇನ್ನಾರೂ ಉಪಯೋಗಿಸಿಕೊಳ್ಳದಂತೆ ಅವನು ಎಚ್ಚರಿಕೆ ವಹಿಸುತ್ತ ಬಂದಿದ್ದ. ಪುರೋಗಾಮಿ ಪಕ್ಷದ ವತಿಯಿಂದ ರಾಮಣ್ಣನೇ ಚುನಾವಣೆಗೆ ನಿಲ್ಲಬಹುದೆಂದು ತೋರುತ್ತಿದ್ದುದರಿಂದ ಮೂರುಸಾವಿರಪ್ಪ ಆ ಪಕ್ಷಕ್ಕೂ ಸೇರಿಕೊಳ್ಳದಂತೆ ದಕ್ಷತೆವಹಿಸಿದ್ದ ಮುದಿಯಪ್ಪ. "ಹಾರವರನ್ನು ನಂಬಿ ಉದ್ಧಾರವಾದವರು ಯಾರಿದ್ದಾರೆ? ರಾಮಣ್ಣನ ಗೊಡವೆಯೇ ಬೇಡ," ಎಂಬುದೇ ಮುದಿಯಪ್ಪನ ಸಲಹೆಯಾಗಿತ್ತು. ಗಂಗಾಧರಶಾಸ್ತ್ರಿಯಂತೂ ನೂರಕ್ಕೆ ನೂರರಷ್ಟು ಜಾತೀಯವಾದಿ. ಬ್ರಾಹ್ಮಣರ ಹೆಸರು ಕೇಳಿದರೂ ಕೂಡ ಅವನಿಗೆ ಮೈಯೆಲ್ಲ ಉರಿಯುತ್ತಿತ್ತು. ರಾಮಣ್ಣನ ಜತೆಗೆ ಸೇರಿಕೊಳ್ಳಬಾರದೆಂದು ಅವನೂ ಮೂರುಸಾವಿರಪ್ಪನಿಗೆ ಮೇಲಿಂದ ಮೇಲೆ ಉಪದೇಶಿಸುತ್ತ ಬಂದಿದ್ದ. "ನಮ್ಮ ಶಕ್ತಿಯನ್ನ ಹೆಚ್ಚಿಸಿಕೊಳ್ಳುವದಕ್ಕೆ ಈ ಹಾರವರನ್ನ ದುಡಿಸಿಕೋಬಹುದು ಬೇಕಾದರೆ. ಅವರ ಕೈಯೊಳಗೆ ಮಾತ್ರ ನಾವು ಸಿಗಬಾರದು," ಎಂಬುದು ಅವನ ಅಭಿಪ್ರಾಯವಾಗಿತ್ತು.

"ಕೃಷ್ಣಾಜಿಯೂ ಹಾರವ, ರಾಮಣ್ಣನೂ ಹಾರವ. ಕೃಷ್ಣಾಜಿಯನ್ನ ಮಣ್ಣುಗಾಣಿಸುವದಕ್ಕೆ ರಾಮಣ್ಣನ ಸಹಾಯ ಪಡೆಯಲು ಅಡ್ಡಿಯಿಲ್ಲ. ಮುಳ್ಳಿನಿಂದ ಮುಳ್ಳು ತೆಗೆಯಬಹುದು."

ಜಾತಿಯ ಬಗ್ಗೆ ಮೂರುಸಾವಿರಪ್ಪನಲ್ಲಿ ಅಂಥ ಅಭಿಮಾನವೇನೂ ಇರಲಿಲ್ಲ. ಅವನು ಮೊದಲನೆ ದರ್ಜೆಯ ಸಂಧಿಸಾಧಕ, ಅಷ್ಟೆ. ರಾಮಣ್ಣ, ಎಡ್ವರ್ಡ್, ಗಂಗಾಧರ ಶಾಸ್ತ್ರಿ, ಮುದಿಯಪ್ಪ, ಸದಾಶಿವ, ಚೆನ್ನಬಸಪ್ಪ, ಈಶ್ವರ ಮುಂತಾದವರೆಲ್ಲರಿಂದಲೂ ಸಹಾಯ ಪಡೆದು, ಕೃಷ್ಣಾಜಿಯನ್ನು ಬೆದರಿಸಿ, ರೈತರ ಮೇಲೆ ತನ್ನ ಪ್ರಭಾವ ಬೀರಿ, ತಾನೇ ಮುಖಂಡನಾಗಿ, ಚುನಾವಣೆಯ ಕಾಲಕ್ಕೆ ಎಲ್ಲರಿಗೂ ಕೈಕೊಟ್ಟು ತಾನೇ ಹುರಿಯಾಳಾಗಿ ನಿಲ್ಲುವ ಯೋಚನೆ ಅವನದಾಗಿತ್ತು. ಶಾಸನಸಭಾಸದಸ್ಯನಾಗಲು ಮುದಿಯಪ್ಪನಿಗಿದ್ದ ದುರಾಸೆಯನ್ನು ಕಂಡು ಒಳಗೊಳಗೇ, "ಇವನ ಮಾರೀ ನೋಡಿ ವೋಟು ಕೊಡ್ತಾರೇನು ಮಂದಿ? ನೆಟ್ಟಗೆ ಚೊಣ್ಣಾ ಹಾಕಿಕೊಳ್ಳೊದಕ್ಕ ಕೂಡಾ ಬರು

ವದಿಲ್ಲ ಇವಗ. ಹೆಂಡತಿ ಕೂಡಾ ಕಿಮ್ಮತ್ತು ಕೊಡೂದಿಲ್ಲ, ಇನ್ನು ಮಂದಿ ಕೊಡುತಾರೇನು ಇವಗ ? " ಎಂದು ತನ್ನಲ್ಲಿಯೇ ಹೇಳಿಕೊಂಡು ಮುಗುಳ್ನಗುತ್ತಿದ್ದ ಮೂರುಸಾವಿರಪ್ಪ. ಪುರೋಗಾಮಿ ಪಕ್ಷವನ್ನು ಸೇರಿಕೊಳ್ಳುವುದಕ್ಕೂ ಅವನು ಸಿದ್ಧನಿರಲಿಲ್ಲ. ತನ್ನ ಶ್ರಮದ ಫಲ ರಾಮಣ್ಣನಿಗೇಕೆ ದಕ್ಕಬೇಕು ? ಅವನ ಶ್ರಮವನ್ನು ತಾನು ಉಪಯೋಗಿಸಿಕೊಳ್ಳಬೇಕು, ಅಷ್ಟೆ.

ಸದಾಶಿವನಿಗೆ ಮಾತ್ರ ಈ ಬಗೆಯ ವಿಚಾರಗಳೇನೂ ಇರಲಿಲ್ಲ. ಚುನಾವಣೆಗೆ ನಿಂತು ಶಾಸನಸಭಾ ಸದಸ್ಯನಾಗಬೇಕೆಂಬ ಬಯಕೆಯಂತೂ ಅವನಿಗೆ ಇರಲೇ ಇಲ್ಲ. ಬಡ ರೈತ ಕೂಲಿಗಾರರಿಗಾಗಿ ಪ್ರಾಮಾಣಿಕವಾಗಿ ಕೆಲಸ ಮಾಡುವವರು ಯಾರೇ ಹುರಿಯಾಳಾಗಿ ನಿಂತರೂ ಅವನಿಗೆ ಸಂತೋಷವಿತ್ತು. ಅಂಥವರನ್ನು ಆರಿಸುವುದಕ್ಕಾಗಿ ಪ್ರತಿಫಲದ ಆಸೆಯಿಲ್ಲದೆ ದುಡಿಯಲು ಸಿದ್ಧನಾಗಿದ್ದ. ಈಚೆಗೆ ಮಾರ್ಕ್ಸವಾದಿ ವಿಚಾರಸರಣಿಯನ್ನೊಪ್ಪಿ ತನ್ನ ಘಟನೆಯಲ್ಲಿ ಆ ಪ್ರಕಾರ ಘೋಷಿಸಿದ ಪುರೋಗಾಮಿ ಪಕ್ಷವನ್ನು ಸೇರಿ ಕೆಲಸ ಮಾಡುವುದಕ್ಕೂ ಅವನು ಸಿದ್ಧನಾಗಬಹುದಾಗಿತ್ತು. ರಾಮಣ್ಣ ಚುನಾವಣೆಗೆ ನಿಂತರೂ ಸದಾಶಿವನಿಗೆ ಸಂತೋಷವೆ ಆಗುತ್ತಿತ್ತು. ರಾಮಣ್ಣ ದೃಢ ಚಾರಿತ್ರ್ಯದ ಆಸಾಮಿ ; ಒಂದು ಧ್ಯೇಯಕ್ಕೆ ಅಂಟಿಕೊಂಡನೆಂದರೆ ಕಡೆಯ ವರೆಗೂ ಅದಕ್ಕಾಗಿ ನಿಷ್ಠೆಯಿಂದ ಹೋರಾಡುವವನು, ಸ್ವತಃ ಅವನೇನೂ ರೈತನಲ್ಲವಾದರೂ ರೈತ ಜನಾಂಗದ ಬಗ್ಗೆ ಹೃತ್ಪೂರ್ವಕ ಸಹಾನುಭೂತಿಯಿಟ್ಟುಕೊಂಡವನು, ಕಾಂಗ್ರೆಸ್ಸಿನಲ್ಲಿ ಹತ್ತು ಹದಿನೈದು ವರ್ಷ ಕೆಲಸ ಮಾಡಿ ಅನುಭವ ಪಡೆದವನು. ಕೇಳುವವರ ಮನಸ್ಸನ್ನಾಕರ್ಷಿಸುವ ಹಾಗೆ ಭಾಷಣ ಮಾಡುವ ಕಲೆಯನ್ನು ಸಾಧಿಸಿಕೊಂಡವನು, ಶಾಸನಸಭಾ ಸದಸ್ಯನಾಗಲು ಅನೇಕ ಅಂಶಗಳಲ್ಲಿ ಅರ್ಹನಾದವನು. ಚೆನ್ನಬಸಪ್ಪ ಒಪ್ಪಿಕೊಂಡಿದ್ದಲ್ಲಿ ತಕ್ಷಣವೆ ಪುರೋಗಾಮಿ ಪಕ್ಷ ಸೇರಿಕೊಳ್ಳಲು ಸಿದ್ಧನಿದ್ದ ಸದಾಶಿವ. ಚೆನ್ನಬಸಪ್ಪನ ಅಭಿಪ್ರಾಯಕ್ಕೆ ವಿರುದ್ಧವಾಗಿ ಸದಾಶಿವನೊಬ್ಬನೆ ಒಂದು ಪಕ್ಷ ಸೇರಿಬಿಡುವುದು ಪ್ರಯೋಜನಕರವಲ್ಲವೆಂಬುದು ಈಶ್ವರನ ಅಭಿಮತವಾಗಿತ್ತು.

" ಏನನ್ನುತ್ತೀರಿ ಚೆನ್ನಬಸಪ್ಪ? " ಎಂದು ಧ್ವನಿಯೆತ್ತಿ ಕೇಳಿದ ರಾಮಣ್ಣ.

“ ಸೇರುವದಾದರೆ ಮೂರುಸಾವಿರಪ್ಪ, ಸದಾಶಿವ, ನಾನು ಎಲ್ಲರೂ ಸೇರಬೇಕು. ಅಂದರೇ ಚಂದ, ಅಲ್ಲವೇನು ? ”

“ ಒಬ್ಬರ ಬದಲು ಮೂವರೂ ಬಂದರೆ ಅದ್ಭುತವಾಯಿತಲ್ಲ. ಇವತ್ತೇ ಮೆಂಬರ್‌ಷಿಪ್ ಫಾರ್ಮಿಗೆ ಸಹಿ ಹಾಕಿಬಿಡಿರಿ ಎಲ್ಲರೂ. ಇಲ್ಲೇ ಸುರುಮಾಡಿ ಬಿಡೋಣ ಕೆಲಸ. ಸಭೆಯಲ್ಲೂ ಘೋಷಣೆ ಮಾಡಿಬಿಡೋಣ,” ಎಂದು ಉತ್ಸಾಹದ ಧ್ವನಿಯಲ್ಲಿ ಹೇಳಿದ ಎಡ್ವರ್ಡ್.

“ ಛೆ. ಛೆ. ಈಗ ಬೇಡ ಬಿಡಿರಿ. ನಾವು ಸ್ವಲ್ಪ ವಿಚಾರಮಾಡುತ್ತೇವೆ,” ಎಂದ ಮುದಿಯಪ್ಪ.

ರಾಮಣ್ಣ ಮುಖ ಕಿವುಚಿ ಆ ಮಾತನ್ನು ಅಲ್ಲಿಗೇ ನಿಲ್ಲಿಸಿದ. ಮುದಿಯಪ್ಪ ಗಂಗಾಧರ ಶಾಸ್ತ್ರಿಯಂಥವರು ಇರುವ ವರೆಗೂ ತಮ್ಮ ಪಕ್ಷ ಬೆಳೆಯಲಾರದೆಂಬ ಕಟು ಸತ್ಯ ಅವನಿಗೆ ಹೊಳೆಯದಿರಲಿಲ್ಲ. ಮೂರುಸಾವಿರಪ್ಪ, ಮುದಿಯಪ್ಪ ಮೊದಲಾದವರು ತಮ್ಮನ್ನು ಇಲ್ಲಿಗೆ ಆಮಂತ್ರಿಸಿದುದು ಕೇವಲ ದುರುಪಯೋಗಕ್ಕಾಗಿಯೆಂಬುದೂ ಅವನಿಗೆ ಮನವರಿಕೆಯಾಗದಿರಲಿಲ್ಲ. ರಾಮಣ್ಣನಿಗೆ ವಿಪರೀತ ದುಃಖವಾಯಿತಾದರೂ ಕಂಗೆಟ್ಟು ಕೈ ಚೆಲ್ಲಿ ಕುಳಿತಿರುವ ಸ್ವಭಾವ ಅವನದಲ್ಲ. “ ಇದೇ ಸ್ಥಿತಿ ಕಡೆ ತನಕ ಉಳಿಯುತ್ತದೆಯೆ ? ನೋಡೋಣ, ಇವರಾದರೂ ಏನು ಮಹಾ ಕೃತ್ಯ ಮಾಡುತ್ತಾರೆ. ಇಂದಿಲ್ಲ ನಾಳೆಯಾದರೂ ನಮ್ಮ ಪಕ್ಷದ ಸಹಾಯಕ್ಕಾಗಿ ಇವರೇ ಓಡಿಬಂದರೂ ಬಂದಾರು ” ಎಂದು ಅವನು ತನ್ನಲ್ಲಿಯೆ ಹೇಳಿಕೊಂಡು ಮತ್ತೆ ಉತ್ಸಾಹ ತಂದುಕೊಂಡ.

ಸಾಯಂಕಾಲ ಸೇರಿದ ಸಭೆ, ನಿರೀಕ್ಷಿಸಿದ್ದಂತೆ ಅದ್ಭುತವಾದ ರೀತಿಯಲ್ಲಿಯೆ ಜರಗಿತು. ಅತಿಥಿಗಳೆಲ್ಲ ಭಾಷಣ ಮಾಡಿದ ತರುವಾಯ ಮೂರುಸಾವಿರಪ್ಪ ಎದ್ದು ನಿಂತು ಬಯಲಾಟದ ರಾವಣ ಕುಣಿಯುವ ಹಾಗೆ ಕುಣಿಯುತ್ತಾ ಕೃಷ್ಣಾಜಿಯನ್ನೂ ಕಾಂಗ್ರೆಸ್ಸಿಗರನ್ನೂ ಅವಾಚ್ಯ ಶಬ್ದಗಳಲ್ಲಿ ಟೀಕಿಸಿದ; ಸಭೆಯ ಕಾರ್ಯಕಲಾಪಗಳ ವರದಿಗೆಂದು ಬಂದು ಕುಳಿತಿದ್ದ ಪೋಲೀಸರ ಮೇಲೂ ಹರಿಹಾಯ್ದು, “ ಕೃಷ್ಣಾಜಿ ಸಾಕಿದ ನಾಯಿಗಳು ನನ್ನ ವ್ಯಾಲ ಬೀಳೂದಕ್ಕ ಬಂದು ಕುಂತಾವ. ನಾನೇನು ಇವಕ್ಕ ಸೊಪ್ಪು ಹಾಕೂದಿಲ್ಲ. ಇವೇನಾದರೂ

ಸೊಕ್ಕು ಮಾಡಿದರ ಕಾಲು ಹಿಡಿದು ಗೀಸಿ ಒಗೀತೀನಿ," ಎಂದು ಆರ್ಭಟಿಸಿದ.

"ಹೌದಲೇ ಮೂರುಸಾವಿರಣ್ಣಾ! ನೀನs ಗಂಡುಮಗಾನಲೆ!" ಎಂದು ಅವನ ಹಸ್ತಕನೊಬ್ಬ ಕೂಗಿದ.

ಮೂರುಸಾವಿರಪ್ಪ 'ಹೋ' ಎಂದು ಕೇಕೆ ಹಾಕಿ ನೆಗೆದು ಕುಣಿದು, ಮೀಸೆ ಹುರಿಗೊಳಿಸುತ್ತ ಹೇಳಿದ :

"ಬರಲಿ ಈಗ ಆ ಕೃಷ್ಣ್ಯಾ ಮಗಾ ನನ್ನ ಮುಂದ. ನನ್ನ ಗುಂಡಾನ್ನ ಮಾಡುತೀನಿ ಅಂತಿದ್ದ. ಬಾ ಅನ್ನು ಅವಗ ಈಗ!"

ಉಗ್ರವಾಗಿ ಮಾತನಾಡುವುದರಲ್ಲಿ ಯಾರಿಗೂ ಕಡಮೆಯವನಲ್ಲದ ರಾಮಣ್ಣನಿಗೂ ಕೂಡ ಮೂರುಸಾವಿರಪ್ಪನ ಈ ಹುಂಬ ನುಡಿಗಳು ಒಪ್ಪಿಗೆಯಾಗ ಲಿಲ್ಲ. ತಾನು, ಸದಾಶಿವ, ಚೆನ್ನಬಸಪ್ಪ ಮೊದಲಾದವರು ಸಭಿಕರ ಮೇಲುಂಟು ಮಾಡಿದ ಸುಪರಿಣಾಮವನ್ನೆಲ್ಲ ಮೂರುಸಾವಿರಪ್ಪ ಕೆಡಿಸಿಬಿಟ್ಟನಲ್ಲಾ ಎಂದು ರಾಮಣ್ಣ ಕಳವಳಪಟ್ಟುಕೊಂಡ.

ಊಟ ಮುಗಿದು, ಎಲ್ಲರೂ ಮಾತನಾಡುತ್ತ ಕುಳಿತಿದ್ದಾಗ ಈಶ್ವರ ಮೂರುಸಾವಿರಪ್ಪನ ಮಾತಿನ ಸರಣಿಯನ್ನು ಟೀಕಿಸಿ, "ಏನು ಭಯಂಕರ ಮಾತಾಡುತೀರಪ್ಪ ನೀವು! ಸಭ್ಯತನ ಸ್ವಲ್ಪ ಕೂಡಾ ಗೊತ್ತಿಲ್ಲವಲ್ಲ ನಿಮಗೆ!" ಎಂದ.

ಮೂರುಸಾವಿರಪ್ಪನಿಗೆ ಭಯಂಕರ ಕೋಪವೇರಿತು. ಉದ್ರೇಕದಿಂದ ಕಂಪಿಸುತ್ತ ಅವನು ಎದ್ದು ನಿಂತು, ಸಭೆಯಲ್ಲಿ ಕುಣಿದ ಹಾಗೆಯೆ ಕುಣಿ ಯುತ್ತಾ ಕೂಗಿಕೊಂಡ :

"ನನಗೆ ಸಭ್ಯತನಾ ಕಲಿಸೂವಕ್ಕ ಬರ್ತೀರೇನು ನೀವು? ನಾ ಯಾರು ಅನ್ನೂದು ಗೊತ್ತಿಲ್ಲೇನು? ಈ ಭಾಗದ ಮೂವತ್ತು ಸಾವಿರ ರೈತರ ಮುಖಂಡ ಇದ್ದೀನಿ ನಾ, ಮುಖಂಡ! ಸಭ್ಯತನ ಗಿಭ್ಯತನ ಎಲ್ಲಾ ಕಲಿತವರ ಢೋಂಗು ನಾವು ಸ್ಪಷ್ಟ ಮಾತಾಡುವವರು "

"ಮಾತಾಡುವದನ್ನು ಒಳ್ಳೆಯ ರೀತಿಯಲ್ಲಿ ಮಾತಾಡಬೇಕು ಮೂರು ಸಾವಿರಪ್ಪ. ಕಾಂಗ್ರೆಸ್ಸಿಗರನ್ನು ಟೀಕಿಸುವದಾದರೂ ಅದಕ್ಕೊಂದು ಮರ್ಯಾದೆ ಇರಬೇಕು. ಲಫಂಗ, ಹಲ್ಕಟ, ಬದ್ಮಾಷ, ಲುಚ್ಚಾ ಅಂತ ಬಯ್ದಿರಿ ಕೃಷ್ಣಾ

ಜಿಯನ್ನು. ಪೋಲೀಸರು ನಾಯಿಗಳು ಅಂದಿರಿ. ಇದೆಲ್ಲಾ ಒಳ್ಳೆಯದಲ್ಲ. ಇದರಿಂದ ನಮಗೂ ಮರ್‍ಯಾದೆ ಬರುವದಿಲ್ಲ," ಎಂದ ಸದಾಶಿವ.

"ಕೃಷ್ಣಪ್ಪನ್ನ ಬಯ್ದರ ನಿಮಗ್ಯಾಕ ಸಿಟ್ಟು ಬರಬೇಕು? ನೀವೂ ಅವನ ಬಗಲಗೂನುಗಳೇ ಅಂತ ಕಾಣುತ್ತೈತಿ. ಅವನೇ ಹೇಳಿ ನಿಮ್ಮನ್ನ ಇಲ್ಲಿ ಕಳಿಸಿದ್ದಾನೋ ಏನೋ."

"ನಾಲಗೆ ಬಿಗಿಹಿಡಿದು ಮಾತಾಡು ಮೂರುಸಾವಿರಪ್ಪಾ. ನೀನು ಪತ್ರ ಬರೆದು ಕರೆಸಿದಿ ಅಂತ ನಾವು ಬಂದೀವಿ. ಇಲ್ಲದಿದ್ದರ ಯಾರು ಬರುತಿದ್ದರು?" ಎಂದ ಚೆನ್ನಬಸಪ್ಪ.

"ನೀವು ಬಂದು ಮಾಡಿದ್ದು ಅಷ್ಟರಾಗ್ತ ಐತಿ. ಇನ್ನು ಮ್ಯಾಲ ನಿಮ್ಮನ್ನ ಎಂದೆಂದೂ ಕರೆಸುವದಿಲ್ಲ," ಎಂದ ಮೂರುಸಾವಿರಪ್ಪ

"ನಿನ್ನಂಥವನ ಸಂಗಡ ಕೂಡಿದರೆ ನಮ್ಮ ಹೆಸರೂ ಕೆಟ್ಟೀತು ನೀನು ಇಂಥಾ ಮೂರ್ಖ ಅಂತ ಗೊತ್ತಿದ್ದರೆ ನಾವು ಬರುತಾನೇ ಇರಲಿಲ್ಲ," ಎಂದ ಚೆನ್ನಬಸಪ್ಪ.

"ನಿಮ್ಮಂಥವರು ಸಾವಿರ ಮಂದಿ ಬರುತಾರ ಹೋಗ್ರಿ," ಎಂದ ಮೂರುಸಾವಿರಪ್ಪ.

ಚೆನ್ನಬಸಪ್ಪ ರೇಗಿ ಅಂಗಿಯ ತೋಳೇರಿಸುತ್ತ ಎದ್ದು ನಿಂತ. ಇನ್ನು ಅವರಿಬ್ಬರಿಗೂ ಹೊಡೆದಾಟಕ್ಕಾರಂಭವಾಗುವ ಲಕ್ಷಣ ಕಾಣಿಸುತ್ತಲೂ ಅದುವರೆಗೆ ಮೌನವಾಗಿ ಕುಳಿತಿದ್ದ ರಾಮಣ್ಣ, ಎಡ್ವರ್ಡ್ ಅಡ್ಡ ಬಂದು ಇಬ್ಬರನ್ನೂ ಸಮಾಧಾನಗೊಳಿಸಲು ಯತ್ನಿಸತೊಡಗಿದರು. ಕೋಪವಿಳಿಯುತ್ತಲೂ ಮೂರುಸಾವಿರಪ್ಪ ಮೂಢನಂತೆ ನಗತೊಡಗಿದ. ಚೆನ್ನಬಸಪ್ಪನಿಗೆ ಮಾತ್ರ ಸಿಟ್ಟು ಇಳಿಯಲಿಲ್ಲ. "ಇವನ ಮನೆಯಲ್ಲಿ ಮತ್ತೊಮ್ಮೆ ಕಾಲಿಡುವದಿಲ್ಲ," ಎಂದು ಹೇಳಿದವನೆ ಅವನು ಅಲ್ಲಿಂದ ಹೊರಟು ಬಿಟ್ಟ. ಸದಾಶಿವ, ಈಶ್ವರರೂ ಅವನನ್ನು ಹಿಂಬಾಲಿಸಿ ಹೊರಟರು.

ಅದೇ ಊರಲ್ಲಿದ್ದ ತನ್ನ ಬೀಗರ ಮನೆಗೆ ಜತೆಗಾರರೊಡನೆ ಬಂದು ಆ ರಾತ್ರಿಯನ್ನು ಅಲ್ಲಿಯೆ ಕಳೆಯುವ ಏರ್ಪಾಡು ಮಾಡಿದ ಚೆನ್ನಬಸಪ್ಪ.

" ಅಂತೂ ಇವತ್ತು ಒಂದು ಉತ್ತಮ ಪಾಠ ಕಲಿತಂತಾಯಿತು," ಎಂದ ಈಶ್ವರ.

" ಇವನ ಆಮಂತ್ರಣ ಸ್ವೀಕರಿಸುವ ಬುದ್ಧಿ ಯಾವ ಕೆಟ್ಟಗಳಿಗೆಯೊಳಗ ಬಂತೋ ನನಗ ! " ಎಂದು ಗೋಳಾಡಿದ ಚೆನ್ನಬಸಪ್ಪ.

ಅವನ ಬೇಗ ಬಸವಂತಪ್ಪ ಚಕಿತನಾಗಿ ಕೇಳಿದ:

" ಏನಾತು ಚೆನ್ನಬಸಪ್ಪ ? "

ಮೂರುಸಾವಿರಪ್ಪನ ಮನೆಯಲ್ಲಿ ನಡೆದ ಮಾತುಕತೆಗಳ ಬಗ್ಗೆ ಈಶ್ವರ ವಿಶದವಾಗಿ ತಿಳಿಸಿ ಹೇಳುತ್ತಲೂ ಬಸವಂತಪ್ಪ ಮುಗುಳ್ನಗು ಬೀರುತ್ತ ನುಡಿದ :

" ಅವ ಇಂಥಾಂವ ಅನ್ನೋದು ಗೊತ್ತಿರಲಿಲ್ಲೇನು ನಿಮಗ ? "

" ಇದೆಲ್ಲಾ ಹ್ಯಾಗೆ ಗೊತ್ತಾಗಬೇಕು ? "

" ಈ ಊರಾಗ ನಾಕ್ಕೈದು ಮಂದಿ ಉಂಡಾಡಿಗರನ್ನ ಬಿಟ್ಟರ ಯಾರೂ ಕೂಡುವದಿಲ್ಲ ಅವನ ಸಂಗಡ. ಅಡವಿಯ ಭೂಮಿ ಕೊಡಿಸ್ತೇನಿ ಅಂತ ನೂರಿನ್ನೂರು ಮಂದಿಯಿಂದ ಒಬ್ಬೊಬ್ಬರಿಂದ ಐವತ್ತು ರೂಪಾಯಿ ತಗೊಂಡಿದ್ದ. ನಾಕು ವರ್ಷಾತು, ಭೂಮಿನೂ ಇಲ್ಲ, ರುಪಾಯಿನೂ ಇಲ್ಲ. ಕೇಳಿದರ ಆ ಆಫೀಸರಗ ಕೊಟ್ಟೆನಿ, ಈ ಆಫೀಸರಗ ಕೊಟ್ಟೆನಿ ಅಂತ ಹೇಳುತಾನ. ನಾಕ್ಕೈದು ಮಂದಿಯಿಂದ ಬಡಿತಾನೂ ತಿಂದಾನ. ಊರಾಗ ಎಳ್ಳುಕಾಳಿನಷ್ಟು ಕಿಂಮತ್ತು ಇಲ್ಲ ಅವಗ. ಅದಕ್ಕ ನಿಮಂಥವರನ್ನ ಕರಕೊಂಡು ಬಂದು ಭಾಷಣಾ ಮಾಡಿಸಿ ತಾನೂ ದೊಡ್ಡವನಾಗಬೇಕಂತ ಮಸಲತ್ತು ಮಾಡಿದ್ದಾನ."

" ಕೃಷ್ಣಾಜಿಯ ಮೇಲೇಕೆ ಇವನಿಷ್ಟು ಕಾರುತ್ತಾನೆ ? "

" ಭೂಮಿ ಕೊಡಿಸುತೀನಂತ ಹೇಳಿ ಇವ ರೊಕ್ಕ ಹೊಡೆದಿದ್ದನಲ್ಲ, ಒಬ್ಬಿಬ್ಬರು ರೈತರು ಕೃಷ್ಣಾಜಿಯ ಹತ್ತರ ದೂರಿಕೊಂಡರು. ರೈತರ ರೊಕ್ಕ ತಿರುಗಿ ಕೊಡು ಅಂತ ಕೃಷ್ಣಾಜಿ ಹೇಳಿದ. ಅಂದಿನಿಂದ ಇವ ಅವನ ಮ್ಯಾಲ ಕಾರುತಾ ಇದಾನ. ಕೃಷ್ಣಾಜಿಗೆ ಹೇಳ ಹೋಗಿದ್ದ ರೈತರನ್ನೂ ಬಡಿಸಿದ. ಅದು ಖಟ್ಲೆ ಆತು. ತನ್ನ ವಿರುದ್ಧ ಸಾಕ್ಷಿ ಹೇಳಿದವರನ್ನ ಕಡಿಸಿಬಿಡ್ತೀನಿ ಅಂತ ಒದರಾಡಿದ ಇವ. ಗುಂಡಾಕಾಯ್ದೆ ತಂದು ಇವನ್ನ ಗಡೀಪಾರು ಮಾಡಿಸುತೀವಿ ಅಂತ

ಕಾಂಗ್ರೆಸದವರಂದರು. ಹಂಗೇ ಜಗಳ ನಡದೈತಿ. ತನ್ನ ಕಡೆ ದೊಡ್ಡ ದೊಡ್ಡ ಮಂದಿಯಿದ್ದಾರಂತ ತೋರಿಸೂದಕ್ಕ ಈಗ ಸಭಾ ಗಿಭಾ ಮಾಡ್ತಾ ಇದಾನ. ಇಲೇಶನಕ್ಕೂ* ನಿಲ್ಲುತಾನಂತ!" ಎಂದು ಹೇಳಿ ಮತ್ತೆ ನಗತೊಡಗಿದ ಬಸವಂತಪ್ಪ.

* ಎಲೆಕ್ಶನ್.

೧೩

ಮೇಲ್ಕೂರಿಯಿಂದ ಮರಳಿದ ಸದಾಶಿವ, ಚೆನ್ನಬಸಪ್ಪ ಅದೇ ದಿನವೇ ಕಳ್ಳೀಕಾಯಿಗೆ ಹೊರಟರು. ಈಶ್ವರನಿಗೆ ಮತ್ತೆ ಜ್ವರ ಮರುಕಳಿಸಿದ್ದಿತಾದುದರಿಂದ ಅವನು ಹಳ್ಳಿಯಲ್ಲಿಯೆ ಉಳಿದುಕೊಂಡ.

ಆ ದಿನದ ಪತ್ರಿಕೆಯಲ್ಲಿ ಮಹತ್ವದ ಸಮಾಚಾರವೊಂದು ಪ್ರಕಟವಾಗಿತ್ತು. ಅಖಿಲ ಭಾರತ ಕೀರ್ತಿಯ ಕಾಂಗ್ರೆಸ್ ನಾಯಕರಾದ ದೀನದಯಾಳರು ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟು 'ದರಿದ್ರ ನಾರಾಯಣ ಪಕ್ಷ' ವೆಂಬ ಹೊಸ ರಾಜಕೀಯ ಪಕ್ಷ ಸ್ಥಾಪಿಸುವ ತಮ್ಮ ನಿರ್ಧಾರವನ್ನು ಘೋಷಿಸಿದ್ದರು. ಅವರ ಜತೆಯಲ್ಲಿಯೆ ಅವರ ಅನುಯಾಯಿಗಳದೊಂದು ದೊಡ್ಡ ಗುಂಪು ಕಾಂಗ್ರೆಸ್ಸಿನಿಂದ ಹೊರಬಂದಿತ್ತು.

"ದೀನದಯಾಳರ ಹಿಂಬಾಲಕರು ಕರ್ನಾಟಕದಲ್ಲೂ ಇರಬೇಕಲ್ಲ ಸದಾಶಿವ?" ಎಂದು ಕೇಳಿದ ಚೆನ್ನಬಸಪ್ಪ.

"ಬಹಳ ಜನರಿದ್ದಾರೆ. ನಮ್ಮ ಮಾವಾ ಕೂಡಾ ದೀನದಯಾಳರ ಅನುಯಾಯಿಗಳೇ. ಒಂದು ವರ್ಷದಿಂದಲೂ ಕಾಂಗ್ರೆಸ್ಸಿನೊಳಗೇ ಅವರದೊಂದು ಗುಂಪು ಇತ್ತು. ಆ ಗುಂಪಿಗೆ ಮಾವಾ ಕೂಡಾ ಸೇರಿಕೊಂಡಿದ್ದರು."

"ಹಾಗಾದರೀಗ ಸೋಮಶೇಖರಪ್ಪನವರೂ ಕಾಂಗ್ರೆಸ್ ಬಿಟ್ಟು ಬರಬಹುದಲ್ಲ?"

"ಅವರ ಮನಸ್ಸು ಬಂದರೆ ಬರಬಹುದು. ಕಾಂಗ್ರೆಸ್ಸಿನವರು ಸೀಟು ಕೊಡಬಹುದು ಅಂತ ಅವರೂ ಕಾಯುತ್ತಿದ್ದಾರೆ."

ನಿಲ್ದಾಣದಲ್ಲಿಳಿದ ಬಳಿಕ ಅವರಿಬ್ಬರೂ ನೇರವಾಗಿ ಸೋಮಶೇಖರಪ್ಪನವರ ಮನೆಗೆ ಬಂದರು.

ದೀನದಯಾಳರ ರಾಜೀನಾಮೆಯ ಪ್ರಸ್ತಾಪ ಬರುತ್ತಲೂ ವಕೀಲರು ತಾನಾಗಿಯೆ ಹೇಳಿದರು :

" ಇನ್ನು ನಾನೇನು ಮಾಡಬೇಕು ಅನ್ನುವದನ್ನ ನಿಶ್ಚಯ ಮಾಡುವ ಕಾಲ ಬಂತು. ದೀನದಯಾಳರಿಂದ ನನಗೂ ಪತ್ರ ಬಂದಿದೆ. ಆದರೆ ನಾನೊಬ್ಬನೇ ಏನೂ ಮಾಡುವಂತಿಲ್ಲ. ಹತ್ತು ಜನ ಕಾರ್ಯಕರ್ತರನ್ನು ಕೇಳಬೇಕು. ಅವರೆಲ್ಲಾ ಒಪ್ಪಿದರೆ ಮುಂದಿನ ವಿಚಾರ. "

ಮುಂದಿನ ಭಾನುವಾರ ಅವರ ಮನೆಯಲ್ಲಿಯೆ ಜಿಲ್ಲೆಯ ಕಾರ್ಯಕರ್ತರ ಗುಪ್ತ ಸಭೆಯೊಂದು ನಡೆಯಬೇಕೆಂದು ಗೊತ್ತಾಯಿತು.

" ವಿಶಾಲಪ್ಪನವರನ್ನೂ ಆಮಂತ್ರಿಸುವಿರಲ್ಲ ವಕೀಲರೇ ? " ಎಂದು ಕೇಳಿದ ಚೆನ್ನಬಸಪ್ಪ.

ತಮ್ಮ ಗುಂಪಿನಲ್ಲಿ ವಿಶಾಲಪ್ಪನವರನ್ನು ಸೇರಿಸಿಕೊಳ್ಳಲು ಸೋಮಶೇಖರಪ್ಪನವರಿಗೆ ಕೊಂಚವೂ ಇಷ್ಟವಿರಲಿಲ್ಲ. ಕಾಂಗ್ರೆಸ್ ಸಂಸ್ಥೆಯಲ್ಲಿ ತನ್ನನ್ನು ಹಿಂದೆ ಹಾಕಿ ಶಾಸನಸಭಾ ಸದಸ್ಯತ್ವ ಹೊಡೆದುಕೊಂಡ ವಿಶಾಲಪ್ಪ ಈ ಸಂಸ್ಥೆಯಲ್ಲಿಯೂ ತನ್ನನ್ನು ಹಿನ್ನೆಲೆಯಲ್ಲಿಯೆ ಇರಿಸಲು ಯತ್ನಿಸಬಹುದು. ಆ ಸ್ವಾರ್ಥಿಯ ಸಹವಾಸವೇ ಬೇಡ ಎನ್ನಿಸುವಷ್ಟು ಬೇಸರವಾಗಿತ್ತು ಸೋಮಶೇಖರಪ್ಪನವರಿಗೆ.

ಸದಾಶಿವ ಚೆನ್ನಬಸಪ್ಪ ಕೂತುಕೊಂಡು ಅದೇ ದಿನವೆ ಕಾರ್ಯಕರ್ತರಿಗೆಲ್ಲ ಪತ್ರ ಬರೆದು ಗುಪ್ತಸಭೆಗೆ ಆಮಂತ್ರಣವಿತ್ತರು. ಕಡುಗಲಿ ಸಿದ್ಧರಾಮಪ್ಪ, ವೀರಣ್ಣರಿಗೂ ಆಮಂತ್ರಣ ಹೋದುವು.

ವಿಶಾಲಪ್ಪನವರನ್ನು ವಿಚಾರಿಸದೆ ಯಾವ ಚಟುವಟಿಕೆಗೂ ತೊಡಗುವವನಲ್ಲ ಸಿದ್ಧರಾಮಪ್ಪ. ಗುಪ್ತಸಭೆಯ ವಿಚಾರವನ್ನು ಅವನು ತಿಳಿಸುತ್ತಲೂ ವಿಶಾಲಪ್ಪ ಗೊಂದಲಕ್ಕೊಳಗಾದರು.

" ನನಗೆ ಆಮಂತ್ರಣ ಬಂದಿಲ್ಲವಲ್ಲ ಕಡುಗಲಿ ? "

" ಹಾ ! ನಿಮಗೆ ಬಂದಿಲ್ಲ ? " ಎಂದು ಅವನೂ ಚಕಿತನಾಗಿ ಕೇಳಿದ.

" ಇದರಲ್ಲಿ ಆ ಸೋಮಪ್ಪಂದು ಏನೋ ದುರುದ್ದೇಶವಿರಬೇಕು. ಎಲ್ಲರಿಗೂ ಆಮಂತ್ರಣ ಕೊಟ್ಟು ನನ್ನನ್ನೇ ಬಿಡಬೇಕಾದರೆ ! ಇರಲಿರಲಿ,

ಮಾಡೋಣ ಅವನಿಗೆ! ನನ್ನ ಬಿಟ್ಟು ಪಕ್ಷ ಮಾಡುತ್ತಾನೆಯೋ ಅವ?" ಎಂದರು ವಿಶಾಲಪ್ಪ.

" ನಾನಾದರೂ ಹೋಗಲೋ ಬ್ಯಾಡವೋ ? "

" ನೀನೊಬ್ಬ ಹೋಗಿ ಏನೇನು ಮಾಡುತಾರೆ ನೋಡಿ ಬಾ. ಮುಂದೆ ವಿಚಾರ ಮಾಡೋಣ. "

ಸಭೆಯ ಆಮಂತ್ರಣ ಪತ್ರ ಕೈಸೇರುತ್ತಲೂ ಶಿವಲಿಂಗಯ್ಯನವರು ಚೆನ್ನ ಬಸಪ್ಪನನ್ನು ಕರೆಸಿಕೊಂಡು ಕೇಳಿದರು :

" ಸಭೆಗೆ ಯಾರ್‍ಯಾರನ್ನು ಕರೆದಿದ್ದಾರ ಚೆನ್ನಬಸೂ ? "

ಆಮಂತ್ರಿತರ ಹೆಸರುಗಳನ್ನಾತ ತಿಳಿಸುತ್ತಲೂ ಶಿವಲಿಂಗಯ್ಯನವರು ಕೇಳಿದರು :

" ವಿಶಾಲಪ್ಪನವರನ್ನು ಯಾಕೆ ಬಿಟ್ಟಿರಿ ? "

" ಅವರನ್ನು ಕರೆಯೋಣಂತ ನಾ ಹೇಳಿದೆ. ಸೋಮಶೇಖರಪ್ಪ ಬ್ಯಾಡಾಂದರು. "

" ವಿಶಾಲಪ್ಪನ್ನ ಬಿಟ್ಟು ಈ ಜಿಲ್ಲ್ಯಾದಾಗ ಪಕ್ಷ ಆಗುತ್ತೈತೇನ? ಈ ಸೋಮಪ್ಪನ್ನ ಹಳೀ ನಾಯಿ ಕೇಳೂದಿಲ್ಲ. ಪಕ್ಷ ಅಂದ ಮ್ಯಾಲ ಮಂದಿ ಬೇಕು, ರೊಕ್ಕ ಬೇಕು. ವಿಶಾಲಪ್ಪ ಇದ್ದರ ಮಾತ್ರ ಏನೋ ಸ್ವಲ್ಪಾದರೂ ರೊಕ್ಕ ಕೂಡೀತು. ಅವನ್ನೂ ಕರೀಲಿಕ್ಕೆ ಹೇಳಿ ಬಾ ಸೋಮಪ್ಪಗ. "

ರಹಸ್ಯವಾಗಿ ನಡೆಯಬೇಕಾಗಿದ್ದ ಆ ಸಭೆಯ ಸಮಾಚಾರ ಮಾತ್ರ ರಹಸ್ಯವಾಗುಳಿಯಲು ಸಾಧ್ಯವಾಗಲಿಲ್ಲ. ಆಮಂತ್ರಿತರಿಂದ ಅವರ ಸ್ನೇಹಿತರಿಗೂ, ಆ ಸ್ನೇಹಿತರಿಂದ ಇತರರಿಗೂ ಸುದ್ದಿ ತಿಳಿದು ಮೂರು ನಾಲ್ಕು ದಿನಗಳಲ್ಲಿಯೆ ಕಳ್ಳೇಕಾಯಿ ನಗರಕ್ಕೆಲ್ಲ ಹರಡಿತು. ಕೃಷ್ಣಾಜಿಗೆ ಆ ವಾರ್ತೆ ತಿಳಿದೊಡನೆ ಅವನು ತನ್ನ ಹತ್ತಿರ ಧಾವಿಸಿ ಬರಬಹುದೆಂದೂ, ಕಾಂಗ್ರೆಸ್ಸನ್ನು ತ್ಯಜಿಸದಂತೆ ಬಿನ್ನವಿಸಿಕೊಳ್ಳಬಹುದೆಂದೂ ಸೋಮಶೇಖರಪ್ಪ ಭಾವಿಸಿಕೊಂಡಿದ್ದರು. ವಾಸ್ತವವಾಗಿ ಹಾಗೇನೂ ಆಗಲಿಲ್ಲ. ಕೃಷ್ಣಾಜಿ ಏನೆಂದುಕೊಂಡನೊ ಏನೊ. ಅಂತೂ ಅವನು ಸೋಮಶೇಖರಪ್ಪನವರತ್ತ ಸುಳಿಯಲಿಲ್ಲ.

ಕಲ್ಲನಗೌಡನ ಮೂಲಕ ಸಭೆಯ ಸುದ್ದಿ ತಿಳಿದೊಡನೆ ಟೋಪಿ ಶಾಂತ

ಣ್ಣನಿಗೆ ಕಳವಳದಿಂದ ಕಣ್ಣೀರು ಸುರಿಸುವಂತಾಯಿತು. ಕಳ್ಳೀಕಾಯಿ ನಗರದ ಮುಖಂಡರಲ್ಲೊಬ್ಬನೂ, ಕಾಂಗ್ರೆಸ್ ವಿರೋಧಿ ರಾಜಕೀಯ ಪಕ್ಷವೊಂದನ್ನು ಸ್ಥಾಪಿಸಬೇಕೆಂದು ಬಹುದಿನಗಳಿಂದ ಯೋಚಿಸುತ್ತಿದ್ದವನೂ ಆದ ತನ್ನನ್ನೆ ಆಮಂತ್ರಿಸಲಿಲ್ಲವಲ್ಲ ಸೋಮಪ್ಪ! ಶಾಂತಣ್ಣನಿಗೆ ಬಲು ಅವಮಾನವಾದಂತಾಯಿತು.

"ಆ ಸೋಮಪ್ಪ ಎಂಥಾ ಸಂಧಿಸಾಧಕನಿದ್ದಾನ ನೋಡಿದಿರಾ ಗೌಡರೆ! ದೀನದಯಾಳರು ಕಾಂಗ್ರೆಸ್ ಬಿಟ್ಟದ್ದೇ ತಡ, ಕರ್ನಾಟಕದಲ್ಲಿ ಅವರ ಪಕ್ಷಕ್ಕೆ ತಾನೇ ಮುಖಂಡನಾಗಬೇಕಂತ ಲೆಕ್ಕ ಹಾಕಿ ಸಭಾ ಕರೆದು, ನಮ್ಮಂಥವರನ್ನೂ ಕರೆಯದೆ ಬಿಟ್ಟದ್ದಾನಲ್ಲ!"

"ಏನೋ ಮರೆತಿರಬಹುದು ಬಿಡಿರಿ ವಕೀಲರೆ. ಪಕ್ಷ ಎಲ್ಲಿ ಹೋಗುತದೆ? ಮೊದಲು ಸ್ಥಾಪನಾ ಆದರೂ ಆಗಲೇಳಿರಿ."

"ಆದಮೇಲೆ ನಾವು ಹೋದರೆ ಏನುಪಯೋಗ ಗೌಡರೆ? ರಾಜಕಾರಣದ ಗತ್ತು ನಿಮಗೆ ಏನೇನೂ ತಿಳಿಯುವದಿಲ್ಲ. ಸ್ಥಾಪನಾ ಆಗುವ ಮೊದಲೇ ಪಕ್ಷದ ಜುಟ್ಟು ಹಿಡಕೊಳ್ಳಬೇಕಾಗುತದೆ."

ಅಂದೇ ಸಂಜೆ ಶಾಂತಣ್ಣ ವಿಶಾಲಪ್ಪನವರನ್ನು ಕಂಡು, ಗುಪ್ತಸಭೆಯ ವಿಷಯ ಚರ್ಚಿಸಿದ.

"ಅವನು ನಮ್ಮನ್ನು ಕರೆಯಿದ್ದದ್ದೂ ಚಲೋದೇ ಆಯ್ತು ಸುಮ್ಮನಿರು ಶಾಂತಣ್ಣ."

"ಅರೆ! ಇದೇನು, ಹೀಗಂತೀರಿ? ಚಾನ್ಸ್ ಹೊಡಕೊಂಡು ಲೀಡರ್ ಆಗಿಬಿಡುತಾನಲ್ಲ ಅವ!"

"ಯಾರು ಕೇಳುತಾರೆ ಬಿಡೋ ಇಂಥಾ ಲೀಡರುಗಳನ್ನ! ಮುಂದಿನ ಸಾರಿ ನಾನು ಮಂತ್ರಿ ಆಗುತೇನೆ ಮಂತ್ರಿ!"

"ನಿಮಗೆ ಕಾಂಗ್ರೆಸ್ ಟಿಕೀಟು ಕೂಡಾ ಕೊಡೂದಕ್ಕೆ ಕೃಷ್ಣಾಜಿ ತಯಾರಿಲ್ಲಂತಲ್ಲರಿ?"

"ಕೃಷ್ಣಾಜಿಯೆಂದರೇನು ಸರ್ವಾಧಿಕಾರಿಯೇನು? ಇವನಾವ ಕಾಮಣ್ಣ ಟಿಕೀಟು ಕೊಡುವವ? ಕೆ. ಪಿ. ಸಿ. ಸಿ. ಇದೆ, ಅಲ್ಲಿ ನಮ್ಮವರ ಕೈಯಲ್ಲೇ ಅಧಿ

ಕಾರ ಇದೆ. ನನಗೆ ಟಿಕೀಟು ಕೊಡದಿದ್ದರೆ ಕರ್ನಾಟಕದಲ್ಲಿ ಕಾಂಗ್ರೆಸ್ ಉಳಿಯುವದಿಲ್ಲ ಅನ್ನುವದು ನೆಹ್ರೂಗೆ ಕೂಡಾ ಗೊತ್ತಿದೆ."

ಶಾಂತಣ್ಣ ಒಂದು ನಿಮಿಷ ಮೌನದಿಂದಿದ್ದು ಅನಂತರ ಹೇಳಿದ:

"ಅವರು ನಿಮಗೆ ಟಿಕೀಟು ಕೊಟ್ಟೇ ಕೊಡುತಾರೆ ಅಂತ ಭರವಸೆಯಾದರೂ ಇದ್ದರೆ ಅಡ್ಡಿಯಿಲ್ಲ. ಈಗಲೇ ಕೇಳಿ ಖಾತ್ರಿ ಮಾಡಿಕೊಂಡು ಬಿಡಿರಿ. ಜನರಿಗೂ ಕಾಂಗ್ರೆಸ್ ಅಂದರೆ ಹೇಸಿಕೆಯಾಗಿದೆ. ದೀನದಯಾಳರ ದರಿದ್ರ ನಾರಾಯಣ ಪಕ್ಷ ಯಶಸ್ವಿಯಾದರೂ ಆದೀತು. ಆದಷ್ಟು ಬೇಗ ನೀವು ಯಾವವನ್ನೂ ನಿರ್ಧಾರ ಮಾಡಬೇಕು. ಸೋಮಪ್ಪ ಈ ಪಕ್ಷದ ಮುಖಂಡನಾಗಿ ಕುಳಿತ ಮೇಲೆ ನೀವು ಬಂದರೆ ಕಿಮ್ಮತ್ತು ಹೋಗುತ್ತದೆ."

"ಹಾ, ಹೀಗೇನು? ಹೌದು ಹೌದು" ಎಂದು ವಿಶಾಲಪ್ಪ ಕತ್ತು ಕೊಡಹಿದರು. "ನಾಳೆಯೆ ಕಡುಗಲಿಯನ್ನು ಕಳಿಸಿ ಎಲ್ಲಾ ತಿಳಿದುಕೊಂಡು ಬರಲು ಹೇಳುತೇನೆ."

ನಿಶ್ಚಿತಪಡಿಸಿದ ಮೇರೆಗೆ ಭಾನುವಾರ ಮಧ್ಯಾಹ್ನ ಸೋಮಶೇಖರಪ್ಪನವರ ಅಟ್ಟದ ಮೇಲೆ ಕಾರ್ಯಕರ್ತರ ಸಭೆ ಜರುಗಿತು. ಸೋಮಶೇಖರಪ್ಪನವರೇ ಅಧ್ಯಕ್ಷಸ್ಥಾನ ವಹಿಸಿಕೊಂಡಿದ್ದರು. ಕಾಂಗ್ರೆಸ್ಸಿನಿಂದ ಬಡ ಜನತೆಯ ಕಲ್ಯಾಣವಾಗುವುದು ಸಾಧ್ಯವಿಲ್ಲವಾದುದರಿಂದ, ರೈತ ಕೂಲಿಕಾರರ ರಾಜ್ಯ ಸ್ಥಾಪನೆಗಾಗಿ ಹೋರಾಡುವ ಉದ್ದೇಶದಿಂದ ದೀನದಯಾಳರು ಸ್ಥಾಪಿಸಿದ 'ದರಿದ್ರನಾರಾಯಣ ಪಕ್ಷ'ಕ್ಕೆ ಎಲ್ಲರೂ ಸೇರಿಕೊಂಡು ಸಾಧ್ಯವಾದಷ್ಟು ಬೇಗ ಆ ಪಕ್ಷದ ಕರ್ನಾಟಕ ಶಾಖೆಯನ್ನು ಸಂಘಟಿಸಿ ಕಾರ್ಯೋನ್ಮುಖವಾಗಬೇಕೆಂದು ಸರ್ವಾನುಮತದಿಂದ ನಿರ್ಧಾರವಾಯಿತು. ಸಭೆಗೆ ಬಂದಿದ್ದ ಕಾಂಗ್ರೆಸ್ ಕಾರ್ಯಕರ್ತರನೇಕರು ಅಲ್ಲಿಯೆ ಕುಳಿತು ಕಾಂಗ್ರೆಸ್ಸಿಗೆ ರಾಜೀನಾಮೆಯೀಯುವ ಪತ್ರಗಳನ್ನು ಬರೆದು ಅಧ್ಯಕ್ಷರಿಗೊಪ್ಪಿಸಿದರು.

"ನಾನು ಆಮ್ಯಾಲ ರಾಜೀನಾಮಾ ಕೊಡುತೀನಿ" ಎಂದ ಸಿದ್ಧರಾಮಪ್ಪ.

"ಆ ಮ್ಯಾಲಂದರ ಯಾ ಮ್ಯಾಲ?" ಎಂದ ಚೆನ್ನಬಸಪ್ಪ.

"ವಿಶಾಲಪ್ಪನವರನ್ನ ಕೇಳಿಕೊಂಡ ಮ್ಯಾಲ."

" ಓರೆಕೋರೆ ನಗರಕ್ಕೆ ಹೋಗಿ ಬಸೆಟ್ಟೆಯವರ ಹತ್ತಿರ ಮಾತನಾಡಿದ ಬಳಿಕ ನಾನು ರಾಜೀನಾಮೆ ಕೊಡುತ್ತೇನೆ " ಎಂದ ವೀರಣ್ಣ. " ಮುಂದಿನ ವಾರ ಅವರೂ ಒಂದು ಸಭೆ ಕರೆದಿದ್ದಾರಲ್ಲ. ನಿಮಗೂ ಬಂದಿರಬಹುದು ಆಮಂತ್ರಣ ? "

" ನನಗೆ ಬಂದಿದೆ " ಎಂದರು ಸೋಮಶೇಖರಪ್ಪನವರು. " ಕನ್ನಡ ಜನತಾ ಪಕ್ಷ ಅಂತ ಹೊಸ ಪಕ್ಷ ಸ್ಥಾಪಿಸುವ ವಿಚಾರವಿದೆಯಂತೆ. ಹೀಗೆ ಜಿಲ್ಲೆಗೊಂದೊಂದು ಬೇರೆ ಬೇರೆ ಪಕ್ಷವಾದರೆ ಉಪಯೋಗವಿಲ್ಲ. ಅಖಿಲ ಭಾರತ ಕೀರ್ತಿಯ ಮುಖಂಡನೊಬ್ಬನಿದ್ದಾನೆಂದರೆ ಮಾತ್ರ ಜನರು ಮರ್ಯಾದೆ ಕೊಟ್ಟಾರು. ನಮ್ಮ ಪಕ್ಷಕ್ಕೇ ಕೂಡಿಕೊಳ್ಳಬೇಕು ಅಂತ ಬಸೆಟ್ಟೆಯವರ ಮನಸು ಒಲಿಸಿರಿ ವೀರಣ್ಣಾ. "

" ಪ್ರಯತ್ನ ಮಾಡುತ್ತೇನೆ. ಉತ್ತರ ಹಿಂದೂಸ್ಥಾನದ ಮುಖಂಡರೆಂದರೆ ಬಸೆಟ್ಟೆಯವರಿಗಾಗುವದಿಲ್ಲ. ಇನಾಂದಾರ್ ಶಿವಪ್ಪರಿಗೂ ಹಾಗೇ. ಓರೆಕೋರೆ ಜಿಲ್ಲೆಗೇ ಒಂದು ಸ್ವತಂತ್ರ ಪಕ್ಷವಿರಬೇಕೆನ್ನುತ್ತಾರೆ ಅವರಿಬ್ಬರೂ. "

ಅದುವರೆಗೆ ಮೌನವಾಗಿದ್ದ ಸದಾಶಿವ ಹಠಾತ್ತಾಗಿ ಧ್ವನಿಯೆತ್ತಿ ಹೇಳಿದ :

" ಅವರು ಸ್ವಾತಂತ್ರ್ಯ ಪಕ್ಷ ಕಟ್ಟಿಕೊಂಡರಾದರೂ ಏನು ಹಾನಿ ಬಿಡಿರಿ. ಈ ದರಿದ್ರನಾರಾಯಣರ ಪಕ್ಷದಲ್ಲಿ ಆ ಲಕ್ಷ್ಮೀನಾರಾಯಣರ ಅಗತ್ಯವೂ ಇಲ್ಲ. "

ಅದುವರೆಗೆ ನೀರಸವಾಗಿದ್ದ ಸಭೆಯ ವಾತಾವರಣದಲ್ಲಿ ಒಮ್ಮೆಲೆ ಬಿಸಿಯೇರಿದಂತಾಯಿತು. ಸಭಿಕರೆಲ್ಲರೂ ಚಕಿತರಾಗಿ ಸದಾಶಿವನನ್ನೆ ದಿಟ್ಟಿಸ ತೊಡಗಿದರು.

ಸಾಹುಕಾರ್ ಶಿವಲಿಂಗಯ್ಯನವರು ಕಣ್ಣು ಕೆಂಪಗೆ ಮಾಡಿ ಹೇಳಿದರು :

" ಪಕ್ಷದಾಗ ಅವರು ಬ್ಯಾಡ ಇವರು ಬ್ಯಾಡ ಅಂದರ ಮೂರ್ಖತನಾ ಆದೀತು. ಎಲ್ಲಾರೂ ಬರಬೇಕು. "

" ಎಲ್ಲರನ್ನೂ ಕೂಡಿಸಿ ಮದುವೆ ಮಾಡುವವರಿದ್ದೀರೇನು ? " ಎಂದು ಶಾಂತಸ್ವರದಲ್ಲಿಯೆ ಸವಾಲು ಹಾಕಿದ ಸದಾಶಿವ.

"ಹೌದು, ಹೌದು. ಇದೂ ಒಂದು ಮದುವಿಯೆ. ಕಾಂಗ್ರೆಸ್ ಪಕ್ಷದವರ ಕೈಯಾಗ ಇರುವ ಅಧಿಕಾರ ಅಂಬೂ ಹೆಣ್ಣನ್ನ ನಾವು ಗೆದ್ದು ತಂದು ಮದುವೆಯಾಗಬೇಕಾಗೈತಿ. ಇಲೇಕ್ಶನ್ ಅಂದರೆ ಅದೂ ಒಂದು ಲಢಾಯಿಯೇ. ದಂಡು ಗುಂಡು ರೊಕ್ಕ ಹೆಚ್ಚು ಇದ್ದವರಿಗೆ ಜಯಾ ಸಿಗುತೈತಿ. ಕಿಸೇದಾಗ ನಾಕು ರೂಪಾಯಿ ಇಲ್ಲದ ನಿಮ್ಮಂಥ ಹುಡುಗರು ಹೋಗಿ ಕಾಂಗ್ರೆಸದವರನ್ನ ಸೋಲಿಸಿ ಬರೂದು ಶಕ್ಯವಾದೀತೇನು? ಅದಕ್ಕ ಬಸೆಟ್ಟಿ ವಿಶಾಲಪ್ಪನವರು ಇಂಥಾ ಪ್ರಚಂಡ ಮಂದಿ ಬೇಕು."

"ಸಾಮಾನ್ಯ ಜನರನ್ನು ಸುಲಿದು ತಿನ್ನುವ ಇಂಥ ಶ್ರೀಮಂತರನ್ನು ಸೇರಿಸಿಕೊಂಡರೆ ಪಕ್ಷಕ್ಕೆ ಜನಬೆಂಬಲ ಸಿಕ್ಕುವದು ಸಾಧ್ಯವೇ ಇಲ್ಲ. ಚುನಾವಣೆಯಲ್ಲಿ ಖಂಡಿತವಾಗಿ ಸೋಲಾಗುವದು. ನನ್ನ ಅಭಿಪ್ರಾಯವನ್ನಂತೂ ನಾನು ತಿಳಿಸಿಬಿಟ್ಟಿದ್ದೇನೆ. ನಿಮಗೆಲ್ಲ ತಿಳಿದ ಹಾಗೆ ಮಾಡಿಕೊಳ್ಳಬಹುದು" ಎಂದ ಸದಾಶಿವ.

"ನೀನಂತೂ ಇರುತ್ತೀಯಲ್ಲಪ್ಪ ಈ ಪಕ್ಷದಲ್ಲಿ?" ಸೋಮಶೇಖರಪ್ಪ ಕೇಳಿದರು. ಅವನು ಪಕ್ಷದಲ್ಲಿರದಿರುವುದೇ ಒಳ್ಳೆಯದೆಂದು ಅವರಿಗೆನ್ನಿಸುತ್ತಿತ್ತು. ದೀನದಯಾಳರು ಗಾಂಧೀ ಶಿಷ್ಯರು; ಅಹಿಂಸಾವಾದಿಗಳು, ಅವರು ಸ್ಥಾಪಿಸಿದ ಪಕ್ಷದಲ್ಲಿ ಸದಾಶಿವನಂಥ ಉಗ್ರ ಮನೋವೃತ್ತಿಯ ಯುವಕರು ಸೇರಿಕೊಂಡರೆ ವೃಥಾ ತೊಂದರೆಯಾದೀತು, ಎಂದು ವಕೀಲರ ವಿಚಾರ.

"ನಿಜವಾಗಿ ಇದು ದರಿದ್ರನಾರಾಯಣರ ಪಕ್ಷವಾದರೆ ಮಾತ್ರ ನಾನು ಸೇರುತ್ತೇನೆ. ಇಲ್ಲವಾದರಿಲ್ಲ" ಎಂದು ಸದಾಶಿವ ಹೇಳಿದಾಗ ವಕೀಲರಿಗೆ ಹಾಯೆನ್ನಿಸಿತು.

"ನೀವೇ ಹೀಗಂದರೆ ಹ್ಯಾಗೆ?" ಎಂದ ಚೆನ್ನಬಸಪ್ಪ.

"ರೈತ ಕೂಲಿಕಾರರನ್ನು ಶೋಷಿಸುವ ಜಮೀನ್ದಾರರಿಗೂ ಸೆಟ್ಟಿ ಸಾಹುಕಾರರಿಗೂ ಈ ಪಕ್ಷದಲ್ಲಿ ಪ್ರವೇಶವಿರಬಾರದು. ಸಮಾಜವಾದಿ ತತ್ವಗಳನ್ನು ಮನಃಪೂರ್ವಕ ಒಪ್ಪಿ ಅವುಗಳಿಗಾಗಿ ದುಡಿಯುವ ನಿಷ್ಠಾವಂತರನ್ನು ಮಾತ್ರ ಸದಸ್ಯರನ್ನಾಗಿ ಮಾಡಿಕೊಳ್ಳಬೇಕು" ಎಂದ ಸದಾಶಿವ.

"ದರಿದ್ರನಾರಾಯಣ ಪಕ್ಷ ಅಂದರೆ ಸಮಾಜವಾದಿ ಪಕ್ಷ ಅಲ್ಲ. ಗಾಂಧೀವಾದವೇ ನಮ್ಮ ಪಕ್ಷದ ಆಧಾರ" ಎಂದರು ಸೋಮಶೇಖರಪ್ಪ.

" ಕಾಂಗ್ರೆಸ್ಸೂ ಗಾಂಧೀ ವಾದಕ್ಕೇ ಅಂಟಿಕೊಂಡಿದೆಯಲ್ಲ ? ದರಿದ್ರನಾರಾಯಣ ಪಕ್ಷ ಯಾಕೆ ಬೇಕು ಹಾಗಾದರೆ ? "

" ಕಾಂಗ್ರೆಸದವರು ಗಾಂಧೀ ವಾದಿಗಳಂತ ಸೋಗು ಹಾಕುತಾರ. ನಾವು ಹಾಕೂದಿಲ್ಲ " ಎಂದರು ಶಿವಲಿಂಗಯ್ಯ.

" ಇನಾಂದಾರರು ಜಮೀನ್ದಾರರು ಬಂಡವಾಳಗಾರರ ಕೈಯಲ್ಲಿ ಸಿಕ್ಕಿದ್ದರಿಂದಲೇ ಕಾಂಗ್ರೆಸ್ಸು ಪ್ರತಿಗಾಮಿ ಸಂಸ್ಥೆಯಾಯಿತು. ದರಿದ್ರನಾರಾಯಣನ ಹೆಸರು ಹೇಳಿ ಇನಾಂದಾರರನ್ನು ಕರೆದುಕೊಂಡರೆ ನೀವೂ ಪ್ರತಿಗಾಮಿಗಳಾಗುತ್ತೀರಿ. ಕಾಂಗ್ರೆಸಿಗೂ ನಿಮಗೂ ಏನೂ ವ್ಯತ್ಯಾಸವುಳಿಯುವದಿಲ್ಲ. ಜನ ನಿಮ್ಮನ್ನು ನಂಬುವದಿಲ್ಲ

" ನನಗಿಂತ ಹೆಚ್ಚು ತಿಳೀತೈತೇನು ನಿಮಗ? " ಶಿವಲಿಂಗಯ್ಯನವರ ಧ್ವನಿಯಲ್ಲಿ ರೋಷವಿತ್ತು.

" ವಾದದಲ್ಲಿ ಸೋತು ಹೋದ ಕೂಡಲೆ ಹಿರಿಯತನದ ದೆವ್ವ ಮುಂದೆ ಮಾಡುತ್ತೀರಿ. ನಿಮ್ಮಂಥವರ ಸಂಗಡ ಮಾತಾಡುವದೂ ವ್ಯರ್ಥ " ಎಂದು ನುಡಿದು ಸದಾಶಿವ ಎದ್ದು ಅಟ್ಟವಿಳಿದು ಹೋದ.

೧೪

ಸೋಮಶೇಖರಪ್ಪನವರ ಮನೆಯಲ್ಲಿ ಸಭೆ ನಡೆದ ದಿನ ಚಿಮಣಾಜಿಯೂ ಕಳ್ಳೀಕಾಯಿ ನಗರದಲ್ಲಿದ್ದ. ಅವನೂ ನರಹರಿರಾಯರೂ ಹಣಮಣ್ಣನ ಬರು ವನ್ನು ಕುತೂಹಲದಿಂದ ಕಾಯುತ್ತಿದ್ದರು.

ರಾತ್ರೆ ಒಂಭತ್ತರ ವೇಳೆಗೆ ಹಣಮಣ್ಣಾ ಬಂದು ಸಭೆಯಲ್ಲಿ ನಡೆದುದೆಲ್ಲ ವನ್ನು ವರದಿಯೊಪ್ಪಿಸುತ್ತಲೂ ರಾಯರೆಂದರು :

" ಈಗಾಗಲೆ ಅವರವರೇ ಬಡಿದಾಡ ಹತ್ತಿದ್ದು ಚಲೋದೇ ಆಯ್ತು. ವಿಶಾಲಪ್ಪ—ಸೋಮಪ್ಪರ ವೈರ ಬೇರೆ. ಈ ಪಕ್ಷ ಹುಟ್ಟುವಾಗಲೇ ಸತ್ತು ಹೋದರೂ ಹೋಗಬಹುದು. ಏನನ್ನುತ್ತಿ ಚಿಮಣಾಜಿ ? "

" ಓರೆಕೋರೆ ನಗರದ ಬಸೆಟ್ಟಿಯೂ ಇವರೂ ಕೂಡಿಕೊಂಡರೆ ಮಾತ್ರ ಪಕ್ಷ ಪ್ರಬಲವಾಗಬಹುದು " ಎಂದ ಚಿಮಣಾಜಿ.

" ಅವರು ಇವರು ಕೂಡದಂತೆ ವಾದಿಸುತ್ತ ಆ ಸದಾಶಿವ ಒಳ್ಳೆಯದೇ ಮಾಡುತ್ತಿದಾನೆ ಚಿಮಣಾಜಿ. " ನರಹರಿರಾಯರು ಹೇಳಿದರು: " ಏನೇ ಆದರೂ ಬಸೆಟ್ಟಿಯೊಡನೆ ಕೂಡದಂತೆ ಬಡಿದಾಡಬೇಕೆಂತ ಮೇಲಿಂದ ಮೇಲೆ ಸದಾಶಿವನಿಗೆ ಹೇಳುತ್ತಾ ಇರು ಹಣಮಣ್ಣಾ. . ನಿನ್ನ ಮಾತಿಗೆ ಲಕ್ಷ್ಯ ಕೊಡು ತ್ತಾನೋ ಇಲ್ಲವೋ ? "

" ನನ್ನ ಮ್ಯಾಲ ಈಗ ಬಹಾಳ ನಂಬಿಕೆ ಇಟ್ಟಾನರಿ. "

" ಹಾಗಾದರೆ ಬಹಳ ಚಲೋದಾಯಿತು ಅವನು ಎಲ್ಲಿಗೆ ಹೋದರೂ ನೀನು ಬಿಡದೆ ಅವನ ಸಂಗಡ ಹೋಗುತ್ತಿರು ಹಂ ! " ಎಂದರು ರಾಯರು. ರಾತ್ರೆ ಅವನಿಗೂ ಅವರಲ್ಲಿಯೆ ಊಟವಾಯಿತು. ತಮ್ಮ ಪಕ್ಕದಲ್ಲಿಯೆ ಅವ ನನ್ನೂ ಕೂಡಿಸಿಕೊಂಡು ಮಮತೆಯಿಂದ ಮಾತನಾಡಿಸುತ್ತ ಅವನಿಗೆ ತೃಪ್ತಿ

ಯಾಗುವಂತೆ ನೋಡಿಕೊಂಡರು ರಾಯರು. ಸ್ವರ್ಗ ಸನಿಯದಲ್ಲೇ ಬಂದಂತೆ ಭಾಸವಾಯಿತು ಹಣಮಣ್ಣನಿಗೆ. ಸಾವಿರಾರು ಎಕರೆ ಭೂಮಿಯ ಒಡೆಯರಾದ ನರಹರಿರಾಯರು ತನ್ನಂಥ ಬಡವನನ್ನು ಪಕ್ಕದಲ್ಲಿ ಊಟಕ್ಕೆ ಕೂಡಿಸಿಕೊಳ್ಳು ವುದೆಂದರೇನು ಸಾಧಾರಣ ವಿಷಯವೆ!

"ರಾಯರು ನನ್ನ ಮಗ್ಗುಲದಾಗs ಕೂಡಿಸಿಕೊಂಡಿದ್ದರು ಊಟಕ್ಕ!" ಎಂದು ಮನೆಯಲ್ಲಿ ಹೇಳಿ ಜಂಬ ಕೊಚ್ಚಿಕೊಳ್ಳಲು ಅವನು ಮರೆಯಲಿಲ್ಲ.

ಓರೆಕೋರೆ ನಗರದ ಪರಿಷತ್ತಿಗೆ ಹೋಗುವ ಇಷ್ಟವಿರದಿದ್ದರೂ ಚೆನ್ನ ಬಸಪ್ಪನ ಬಲವಂತಕ್ಕೋಸ್ಕರವಾಗಿ ಸದಾಶಿವನೂ ಹೊರಡಬೇಕಾಗಿ ಬಂದಿತು. ದೂರದ ಪ್ರವಾಸ. ಸದಾಶಿವನ ಹತ್ತಿರ ಸಾಕಷ್ಟು ಹಣವೂ ಇರಲಿಲ್ಲ. ಇದ್ದುದೆಲ್ಲ ಆ ವೇಳೆಗಾಗಲೆ ವೆಚ್ಚವಾಗಿ ಹೋಗಿತ್ತು. ತನ್ನ ಸ್ವಂತದ ಖರ್ಚಿಗಾಗಿ ತಂದೆ ಯನ್ನು ಕೇಳಲು ಅವನಿಗಿಷ್ಟವಿರಲಿಲ್ಲ.

ಈಶ್ವರನನ್ನೂ ಅದೇ ತೊಂದರೆ ಕಾಡುತ್ತಿತ್ತು. ಇಂದೋ ನಾಳೆಯೊ ಬೀಳುವಂತಿದ್ದ ಮುರುಕು ಮನೆಯೊಂದರಲ್ಲಿ ಅವನು ವಾಸವಾಗಿದ್ದ. ಹೊಲ ದಿಂದ ಬರುವ ಕಾಳು ಆರು ತಿಂಗಳುಗಳಿಗೂ ನಾಲುತ್ತಿರಲಿಲ್ಲ. ಪತ್ರಿಕೆಗಳಿಗೆ ಲೇಖನಗಳನ್ನು ಬರೆದು ಅವನು ಸಂಪಾದಿಸುತ್ತಿದ್ದ ಅಲ್ಪಸ್ವಲ್ಪ ಹಣ ಔಷಧಕ್ಕೆ ಹೋಗುತ್ತಿತ್ತು. ಒಮ್ಮೊಮ್ಮೆ ಔಷಧಗಳಿಗೂ ಹಣ ಹುಟ್ಟುತ್ತಿರಲಿಲ್ಲ. "ಪ್ರಕೃತಿ ನೆಟ್ಟಗಿಲ್ಲ. ಅಲ್ಲಿ ಇಲ್ಲಿ ತಿರುಗಬ್ಯಾಡಪ್ಪ" ಎಂದು ಅವನ ವೃದ್ಧ ತಾಯಿ ಮತ್ತೆ ಮತ್ತೆ ಹೇಳುವಳು. ಅವನ ಇಬ್ಬರು ಮಕ್ಕಳ ಮೈಮೇಲೆ ಸರಿಯಾದ ಬಟ್ಟೆ ಗಳೂ ಇರಲಿಲ್ಲ. ಹೆಂಡತಿಯ ಪಾಲಿಗೂ ಹರಕು ಸೀರೆ. ಎರಡು ಷರ್ಟುಗಳನ್ನು ಬಿಟ್ಟರೆ ಅವನಿಗೂ ಬೇರೆ ಬಟ್ಟೆಗಳಿರಲಿಲ್ಲ. ಮಳೆಗಾಲ, ಚಳಿಗಾಲಗಳಲ್ಲಿ ಉಪ ಯೋಗಿಸಲು ಉಣ್ಣೆಯ ಬಟ್ಟೆ ಆವಶ್ಯಕವೆಂದು ಡಾಕ್ಟರು ಎಷ್ಟೋ ಬಾರಿ ಎಚ್ಚ ರಿಸಿದ್ದರಾದರೂ ಅವುಗಳನ್ನು ಕೊಳ್ಳುವ ಸಾಮರ್ಥ್ಯ ಅವನಲ್ಲಿರಲಿಲ್ಲ.

ಓರೆಕೋರೆ ನಗರಕ್ಕೆ ಹೊರಡುವ ಮುನ್ನ ಸದಾಶಿವ ಕಾಡಾಪುರಕ್ಕೆ ಬಂದು ಈಶ್ವರನನ್ನು ಕಂಡು, ಓರೆಕೋರೆಗೆ ಅವನನ್ನು ಕರೆಯುತ್ತಲೂ ಕ್ಷೀಣ ನಗು ಬೀರುತ್ತ ಹೇಳಿದ ಈಶ್ವರ:

"ನೀವು ಹೋಗಿ ಬರ್ರಿ ಸದಾಶಿವ."

" ನೀವೂ ಬಂದರೆ ನೆಟ್ಟಗಾದೀತು. ಈಗ ಮೈಯಲ್ಲಿ ಚೆನ್ನಾಗಿದೆ ಯಲ್ಲ ? "

" ಇದೆ. ಆದರೂ ಅಶಕ್ತಿ ಬಹಳ....ಅಲ್ಲದೆ.... "

" ಹಣದ ತೊಂದರೆಯೋ ? "

" ಅದನ್ನೆಲ್ಲ ಏನು ಹೇಳುವದು ಬಿಡಿರಿ. ಮೊದಲಿಂದಲೂ ಇದ್ದೇ ಇದೆ ಯಲ್ಲಾ... " ಎಂದು ಆ ಮಾತನ್ನು ಅಲ್ಲಿಗೇ ನಿಲ್ಲಿಸಿದ ಈಶ್ವರ.

" ನಾನೂ ಹೋಗಬಾರದೆಂದೇ ಮಾಡಿದ್ದೆ. ಚೆನ್ನಬಸಪ್ಪನ ಒತ್ತಾಯ. "

" ನೀವು ಹೋಗಿ ಬರ್ರಿ. ಹೇಗಾದರೂ ಒಂದು ವಿರೋಧಿ ಪಕ್ಷವಾಗ ಬೇಕಾಗಿದೆ ಮೊದಲು " ಎಂದ ಈಶ್ವರ.

ಓರೆಕೋರೆ ನಗರಕ್ಕೆ ತಾನೂ ಬರುವುದಾಗಿ ಹಣಮಣ್ಣಾ ಹೇಳುತ್ತಲೂ ಸದಾಶಿವ,

" ಹೋಗಿ ಬರಲು ಹತ್ತು ರೂಪಾಯಿಯಾದರೂ ಖರ್ಚು ಬರುತ್ತದೆ ಹಣಮಣ್ಣಾ. ಸುಮ್ಮನೆ ಯಾಕೆ ಖರ್ಚು ನಿನಗೆ ? " ಎಂದು ಹೇಳಿ ಅವನ ಕಾಟ ತಪ್ಪಿಸಲು ಯತ್ನಿಸಿದ.

ಹಣಮಣ್ಣಾ ಸುಮ್ಮನಾಗಲಿಲ್ಲ. ಮುಸಿ ಮುಸಿ ನಗುತ್ತಾ,

" ನನ್ನದೇನು ಖರ್ಚಾಗುತೈತಿ ಸದಾಶಿವಣ್ಣಾ ? ನೀನಿದ್ದೀಯಲ್ಲ ಖರ್ಚು ಮಾಡಲಿಕ್ಕೆ ! "

" ನನ್ನ ಹತ್ತರ ಲಕ್ಷಗಟ್ಟಲೆ ಹಣವಿದೆಯೆಂತ ತಿಳಿದಿದ್ದೀಯೇನು ನೀನು ? "

" ಐತಿ ಅಂತ ಊರಾಗೆಲ್ಲಾ ಅನ್ನುತಾರಪ್ಪ " ಎಂದು ಹೇಳಿ ಅರ್ಥ ಗರ್ಭಿತ ನಗು ನಕ್ಕ ಹನುಮಣ್ಣಾ.

ತುಟಿಗಳನ್ನು ಕಚ್ಚಿಕೊಂಡು ಮೌನ ತಳೆದ ಸದಾಶಿವ.

ಅವನು ಬೇಡವೆಂದರೂ ಬಿಡದೆ ಹಣಮಣ್ಣಾ, ಚಿಮಣಾಜಿಯಿಂದ ಹಣ ಪಡೆದುಕೊಂಡು ಓರೆಕೋರೆಗೆ ಹೊರಟು ನಿಂತ.

ಸದಾಶಿವನ ತೊಂದರೆಯನ್ನು ಸ್ವಲ್ಪಮಟ್ಟಿಗೆ ತಿಳಿದುಕೊಂಡಿದ್ದ ಚೆನ್ನ ಬಸಪ್ಪ ತಾನೇ ಅವನಿಗೂ ಟಿಕೆಟ್ಟು ತೆಗೆಸಿದ.

ಶಿವಲಿಂಗಯ್ಯನವರೂ ಹೊರಟಿದ್ದರು.

ಕಳ್ಳೀಕಾಯಿ ನಿಲ್ದಾಣದಲ್ಲಿ ಸೋಮಶೇಖರಪ್ಪ, ಟೋಪಿ ಶಾಂತಣ್ಣ, ರಾಮಣ್ಣ, ಎಡ್ವರ್ಡ್, ಚೆನ್ನಯ್ಯಶಾಸ್ತ್ರಿ, ಮುದಿಯಪ್ಪ, ಕಲ್ಲನಗೌಡ ಮೊದಲಾದವರೂ ಗಾಡಿ ಹತ್ತಿದರು. ಆ ವೇಳೆಗಾಗಲೆ ಕಾಹಿಲೆಯಿಂದ ಚೇತರಿಸಿಕೊಂಡಿದ್ದ ಕೇಶವನೂ ತನ್ನ ಪತ್ನಿ ವನಮಾಲೆಯೊಂದಿಗೆ ಪರಿಷತ್ತಿಗೆಂದು ಹೊರಟಿದ್ದ. ಸದಾಶಿವ, ಚೆನ್ನಬಸಪ್ಪ ಕುಳಿತಿದ್ದ ಗಾಡಿಯಲ್ಲಿಯೆ ಅವರೂ ಏರಿ ಕುಳಿತರು.

" ಈಗ ಹ್ಯಾಗಿದೆ ಕೇಶವ್ ? "

" ಸ್ವಲ್ಪ ಅರಾಮು. ಪೂರಾ ನೆಟ್ಟಗಾಗಲಿಕ್ಕೆ ಇನ್ನೂ ಆರೇಳು ತಿಂಗಳಾದರೂ ಬೇಕಾದೀತು. "

" ಮತ್ತೇಕೆ ಹೊರಟಿರಿ ಹಾಗಾದರೆ ? ಬಸೆಟ್ಟಿಯವರು ನಿಮ್ಮನ್ನೂ ಕರೆದಿದ್ದಾರೇನು ? " ಚೆನ್ನಬಸಪ್ಪ ಕೇಳಿದ.

" ಸೋಶಲಿಸ್ಟ್ ಪಾರ್ಟಿಯವರು ನಾವು. ನಮ್ಮನ್ಯಾಕೆ ಕರೆದಾರು ಅವರು ? ಈಗ ಹೊಸ ಪಕ್ಷ ಮಾಡುವದರಿಂದ ಏನೂ ಉಪಯೋಗವಿಲ್ಲ. ಕಾಂಗ್ರೆಸಿನ ವಿರುದ್ಧ ಕೆಲಸ ಮಾಡಬೇಕೆನ್ನುವವರೆಲ್ಲಾ ನಮ್ಮ ಪಾರ್ಟಿಯನ್ನೇ ಸೇರಿಬಿಟ್ಟರೆ ಚಲೋದು. "

" ನೀವು ಹೀಗನ್ನುತ್ತೀರಿ. ರಾಮಣ್ಣ ಪುರೋಗಾಮಿ ಪಕ್ಷ ಸೇರಿರಿ ಅನ್ನುತ್ತಾರೆ. ನಾವು ಯಾವದಕ್ಕಂತ ಸೇರೋಣ ? ಈ ತಂಟೆಯೇ ಬ್ಯಾಡ ಅಂತ ಸೋಮಶೇಖರಪ್ಪನವರು ದರಿದ್ರನಾರಾಯಣ ಪಕ್ಷ ಕಟ್ಟಲಿಕ್ಕೆ ಹೊರಟಿದ್ದಾರೆ."

" ಸುಮ್ಮನೆ ಶಕ್ತಿ ವ್ಯರ್ಥ. ಏನೂ ಉಪಯೋಗವಾಗುವದಿಲ್ಲ. ಹತ್ತಿಪ್ಪತ್ತು ಪಕ್ಷಗಳಾಗಿ ಬಿಟ್ಟರೆ ಜನರಿಗೆ ದಿಕ್ಕು ಕಾಣದಂತಾಗುತ್ತದೆ. ಅದಕ್ಕೇ ಸಾಧ್ಯವಾದರೆ ಬಸೆಟ್ಟಿಯವರು ಹೊಸ ಪಕ್ಷ ಸ್ಥಾಪಿಸದಂತೆ ಯತ್ನ ಮಾಡಲೆಂದು ನಾನು ಅಲ್ಲಿಗೆ ಹೊರಟಿದ್ದೇನೆ. "

ಅದುವರೆಗೆ ಸುಮ್ಮನಿದ್ದ ಸದಾಶಿವ ಮಾತನಾಡಿದ :

" ಹಾಗಾದರೆ ಅವರನ್ನೂ ಇನಾಂದಾರರನ್ನೂ ಸೋಶಲಿಸ್ಟ್ ಪಾರ್ಟಿಯಲ್ಲಿ ಕರೆದುಕೊಳ್ಳುವ ವಿಚಾರವೋ ಏನು ನಿಮ್ಮದು ? "

ಆ ಮಾತಿಗೆ ಕೂಡಲೆ ಉತ್ತರವೀಯಲಿಲ್ಲ ಕೇಶವ. ವನಮಾಲಾ ಹೇಳಿದಳು :

" ಹೌದು ಮತ್ತೆ ! ಈಗೇನ್ರಿ, ಸೋಶಲಿಸ್ಟ್ ಪಾರ್ಟಿಯಲ್ಲಿ ದೊಡ್ಡ ದೊಡ್ಡ ಜಮೀನ್ದಾರರೂ ಬಂಡವಾಳಗಾರರೂ ಬೇಕಾದಷ್ಟು ಮಂದಿ ಇದ್ದಾರೆ. "

" ಸೋಶಲಿಸ್ಟ್ ಪಾರ್ಟಿಯೂ ಹೀಗಾಯಿತಲ್ಲಾ ಅಂತ ನನಗೆ ಬಹಳ ದುಃಖವಾಗುತ್ತದೆ " ಎಂದ ಸದಾಶಿವ.

ಗಾಡಿ ಮುಂದೆ ಮುಂದೆ ಓಡುತ್ತಲೂ ಹಿಂದೆ ಹಿಂದೆ ಬೀಳುವ ಗಿಡಗಳನ್ನು ಶೂನ್ಯದೃಷ್ಟಿಯಿಂದ ನಿಟ್ಟಿಸುತ್ತಾ ಉತ್ಸಾಹರಹಿತ ಧ್ವನಿಯಲ್ಲಿ ನುಡಿದ ಕೇಶವ :

" ನಮ್ಮದು ಮಾಸ್ ಪಾರ್ಟಿ ( Mass Party ) ಆದದ್ದೇ ದೊಡ್ಡ ತಪ್ಪಾಯಿತು ಸದಾಶಿವ. ಸದಸ್ಯತ್ವದ ಅರ್ಜಿಗೆ ಸಹಿ ಹಾಕಿ ಯಾರು ಬೇಕಾದರೂ ಬರಲು ಸಾಧ್ಯವಾಯಿತು ಪಾರ್ಟಿಯಲ್ಲಿ. ನಾವಾದರೂ ಏನು ಮಾಡುವದು ಹೇಳಿರಿ. ಮೇಲಿನವರ ಕಾರಭಾರ ಇದೆಲ್ಲಾ. "

" ಮೇಲಿನವರು ಮನಸಿಗೆ ಬಂದ ಹಾಗೆ ಮಾಡಿದರೆ ನೀವ್ಯಾಕೆ ಅವರ ತಾಳಕ್ಕೆ ಕುಣಿಯಬೇಕು ? ಪಾರ್ಟಿ ಕೆಟ್ಟು ಹಾಳಾಗಿ ಹೋಗುತ್ತದೆಂದೇಕೆ ಅವರಿಗೆ ತಿಳಿಸಬಾರದು ? " ಎಂದಳು ವನಮಾಲಾ.

" ತಿಳಿಸಿದ್ದಾಯಿತಲ್ಲ ವನೂ. ಕೇಳುವವರು ಯಾರು ? " ಎಂದು ನುಡಿದು ಸದಾಶಿವನತ್ತ ತಿರುಗಿ ಕೇಶವನೆಂದ : " ನಿಜ ಹೇಳಬೇಕಾದರೆ ನನಗೂ ಬಲು ಬೇಸರವಾಗಿದೆ. ಆದರೆ ಪಾರ್ಟಿಯನ್ನು ಬಿಡಲಾರೆ. ಏನೇ ತಪ್ಪುಗಳಾದರೂ ಸುಧಾರಿಸಿಕೊಂಡು ಹೋಗಬೇಕು. "

" ಹಾಗಾದರೆ ಕಾಂಗ್ರೆಸಿಗೂ ಸೋಶಲಿಸ್ಟ್ ಪಾರ್ಟಿಗೂ ಏನು ಭೇದವುಳಿದಂತಾಯಿತು ? "

" ಕಾಂಗ್ರೆಸಿನದಷ್ಟು ಹೊಲಸಾಗಿಲ್ಲರೀ. "

" ಚುನಾವಣೆಯೊಳಗಾಗಿ ಅಷ್ಟೇ ಹೊಲಸಾಗುತ್ತದೆರೀ ! " ಎಂದು ಅಣಕವಾಡಿದಳು ವನಮಾಲಾ. " ಬಸೆಟ್ಟಿ ಮತ್ತು ಇನಾಂದಾರರು ಏನಾದರೂ

ಮಾಡಿಕೊಳ್ಳಲೊಲ್ಲರ್‍ಯಾಕೆ, ಅವರನ್ನು ಸೋಶಲಿಸ್ಟ್ ಪಾರ್ಟಿಗೆ ಸೇರಿಸುವ ಮಾತೇ ಬೇಡ ಅಂತ ನಾನೆಷ್ಟು ಹೇಳಿದರೂ ಕೇಳದೆ. ಈಗ ಓರೆಕೋರೆಗೆ ಹೊರಟಿದ್ದಾರೆ. ”

“ ಅವರು ನಿಮ್ಮ ಪಾರ್ಟಿಗೆ ಸೇರುವದೂ ಸಾಧ್ಯವಿಲ್ಲ ಬಿಡಿರಿ ” ಎಂದ ಚೆನ್ನಬಸಪ್ಪ.

ಓರೆಕೋರೆಯಲ್ಲಿ ಆದದ್ದೂ ಹಾಗೆಯೆ. ಬಸಟ್ಟಿಯವರನ್ನು ಖಾಸಗಿಯಾಗಿ ಕಂಡು, ಸಮಾಜವಾದಿ ಪಕ್ಷಕ್ಕೇ ಅವರೆಲ್ಲ ಸೇರಬೇಕೆಂದು ಕೇಶವ ವಿನಂತಿ ಮಾಡಿಕೊಳ್ಳುತ್ತಲೂ ಅವರು ಗಹಗಹಿಸಿ ನಕ್ಕು ಹೇಳಿದರು :

“ ಇನಾಂದಾರರು ಎಂದಾದರೂ ಸೋಶಲಿಸ್ಟ್ ಪಾರ್ಟಿ ಸದಸ್ಯರಾಗಲು ಸಾಧ್ಯವಾದೀತೇ ಕೇಶವರಾವ್ ? ಹಾವು ತಾನಾಗಿಯೇ ಮುಂಗಲಿಯೊಡನೆ ಕೂಡಿಕೊಳ್ಳುತ್ತದೆಯೆ ? ”

ಗೆಳೆಯರೊಡನೆ ವ್ಹಿಸ್ಕಿ ಸೇವಿಸುತ್ತಾ ಸೋಫಾದಲ್ಲಿ ಬಿದ್ದುಕೊಂಡಿದ್ದ ಇನಾಂದಾರರಂತೂ ಆ ವಿಷಯ ಕೇಳಿ ಬಿದ್ದು ಬಿದ್ದು ನಕ್ಕರು. “ ಸೋಶಲಿಸ್ಟ್ ಪಾರ್ಟಿಗೆ....ನಾನು ? ನಾನು ? ಆ ಕೇಶವನಿಗೆ ತಲೆ ನೆಟ್ಟಗಿರಲಿಕ್ಕಿಲ್ಲ....ಹ ಹ ಹ್ಹಾ... ಎಂಥಾ ಮಾತು....ಎಂಥಾ ಮಾತು ! ”

ದರಿದ್ರನಾರಾಯಣ ಪಕ್ಷಕ್ಕೆ ಕೂಡಿಕೊಳ್ಳುವ ವಿಷಯವೂ ಅವರಿಗೆ ಒಪ್ಪಿಗೆಯಾಗಲಿಲ್ಲ. ದೀನದಯಾಳನ ಆಜ್ಞೆಯಂತೆ ಕೆಲಸ ಮಾಡುವುದು ಅವರಿಗೆ ಬೇಡವಾಗಿತ್ತು. “ ಕರ್ನಾಟಕದ ಮಂದಿ ಈ ಉತ್ತರ ಹಿಂದೂಸ್ತಾನದವರ ಮಾತು ಯಾಕೆ ಕೇಳಬೇಕು ? ನಮಗೇನು ಬುದ್ಧಿಯಿಲ್ಲ ? ಪಾಂಡಿತ್ಯವಿಲ್ಲ ? ಉತ್ತರ ಹಿಂದೂಸ್ತಾನದವರಿಗೆ ನಾವು ಯಾವದರಲ್ಲಿ ಹಿಂದುಳಿದಿದ್ದೇವೆ ? ಅವರ ಹವಾಸವೇ ಬೇಡ. ನಾವು ಸ್ವತಂತ್ರ ಪಕ್ಷವನ್ನೇ ಮಾಡುವವರು. ನೀವೂ ನಮ್ಮ ಪಕ್ಷಕ್ಕೇ ಸೇರಿಕೊಳ್ಳಬೇಕು ” ಎಂದು ಬಸೆಟ್ಟಿ ಸೋಮಶೇಖರಪ್ಪನವರಿಗೆ ಹೇಳಿದರು.

ಪರಿಷತ್ತು ಸಾಂಗವಾಗಿ ಜರುಗಿತು. ಬಹುಸಂಖ್ಯ ಸಿಧಿಗಇಸಗಳ ಇಷ್ಟದಂತೆ ‘ ಕನ್ನಡ ಜನತಾ ಪಕ್ಷ ’ ಸ್ಥಾಪಿತವಾದುದೂ ಆಯಿತು. ದೊಡ್ಡ ದೊಡ್ಡ ಸೆಟ್ಟಿ ಸಾಹುಕಾರರು, ಜಮೀನ್ದಾರರು, ಅವರ ಹಸ್ತಕರಾದ ಹಲವರು ವಕೀ

ಲರು, ಕೆಲವರು ನಿರುದ್ಯೋಗಿಗಳು, ಕೋಮುವಾರು ಅಗ್ನಿ ಭಕ್ಷಕರು ಆ ನೂತನ ಪಕ್ಷದ ನಾಯಕರೆನಿಸಿಕೊಂಡರು. "ಕನ್ನಡ ಜನತೆಯ ಸರ್ವತೋಮುಖ ಉದ್ಧಾರಕ್ಕಾಗಿ ದುಡಿಯುವುದೇ ನಮ್ಮ ಪಕ್ಷದ ಧ್ಯೇಯ" ಎಂಬುದಾಗಿ ಬಸೆಟ್ಟಿ ಭಾಷಣ ಕುಟ್ಟಿದಾಗ ಪರಿಷತ್ತಿಗೆ ಸೇರಿದ್ದ ಜನಜಂಗುಳಿ ಕೈತಟ್ಟಿ ಕೇಕೆ ಹಾಕಿತು. "ಜನ ಮರುಳೋ ಜಾತ್ರೆ ಮರುಳೋ ಎಂಬ ಗಾದೆಯನ್ನು ಹಿರಿಯರು ಬಹಳ ವಿಚಾರ ಮಾಡಿ ರೂಢಿಸಿರಬೇಕು" ಎಂದು ತನ್ನಲ್ಲಿಯೆ ಹೇಳಿಕೊಂಡು ವಿಷಾದಪೂರಿತ ನಗು ನಕ್ಕು ಸುಮ್ಮನಾದ ಸದಾಶಿವ.

ಕೋಮುವಾರು ಚಳುವಳಿಗಳಲ್ಲಿ ಹೆಸರು ಗಳಿಸಿದ ವಕೀಲರೊಬ್ಬರು ಕಾಂಗ್ರೆಸ್ಸನ್ನೂ ಇತರ ಪಕ್ಷಗಳನ್ನೂ ಕುಹಕವಾದ ರೀತಿಯಲ್ಲಿ ಟೀಕಿಸಿ ಭಾಷಣ ಮಾಡಿ ಜನಗಳಿಂದ ಚಪ್ಪಾಳೆ ದೊರಕಿಸಿದರು. "ಎಷ್ಟು ಜೋರು ಮಾತಾಡ್ತಾರಪಾ ವಕೀಲರು! ಇವರೇ ಅಸೆಂಬ್ಲಿಗೆ ಹೋದರಂದರ ಬಹಾಳ ಮಜಾ ಆಗುತೈತಿ ನೋಡು. ಟೊಪಿಗೀ ಮುಂದೀನ್ನ ಫಜೀತಿ ಮಾಡಿ ಬಿಡುತಾರ!" ಎಂದು ಜನರು ತಮ್ಮಲ್ಲಿಯೆ ಆಡಿಕೊಂಡರು. ಶಾಸನಸಭಾ ಸದಸ್ಯರಿಂದ ಅದಕ್ಕಿಂತ ಹೆಚ್ಚಿನದೇನನ್ನೂ ಅವರು ನಿರೀಕ್ಷಿಸುವಂತೆ ತೋರುತ್ತಿರಲಿಲ್ಲ.

ಬಸೆಟ್ಟೆಯವರ ಆಮಂತ್ರಣದ ಮೇರೆಗೆ ಕಳ್ಳೀಕಾಯಿ ಜಿಲ್ಲೆಯ ಕಾರ್ಯಕರ್ತರೂ ಕೆಲವರು ಭಾಷಣ ಮಾಡಿದರು. ಟೋಪಿ ಶಾಂತಣ್ಣನೂ ಮಾತನಾಡಿ, ದರಿದ್ರನಾರಾಯಣ ಪಕ್ಷ, ಕನ್ನಡ ಜನತಾ ಪಕ್ಷಗಳೆರಡೂ ಅಣ್ಣತಮ್ಮಂದಿರಂತೆ ಕೂಡಿಕೊಂಡು ಕೆಲಸ ಮಾಡಬೇಕೆಂದೂ ಚುನಾವಣೆಯಲ್ಲಿ ಕಾಂಗ್ರೆಸ್ಸನ್ನು ಸಂಪೂರ್ಣವಾಗಿ ಸೋಲಿಸಬೇಕೆಂದೂ ಗುಡುಗಿದ. ವೀರಣ್ಣ, ಸಿದ್ಧರಾಮಪ್ಪ, ಸೋಮಶೇಖರಪ್ಪನವರೂ ಮಾತನಾಡಿದರು ಚೆನ್ನಬಸಪ್ಪನ ಬಲವಂತಕ್ಕೊಳಗಾಗಿ ಸದಾಶಿವನೂ ಎದ್ದು ಐದು ನಿಮಿಷಗಳ ಕಾಲ ತನ್ನ ವಿಚಾರಗಳನ್ನು ಸ್ಪಷ್ಟವಾಗಿ ಮಂಡಿಸಿದ. ಕಾಂಗ್ರೆಸ್ಸಿನ ಬಗ್ಗೆ ಜನತೆಯಲ್ಲಿ ಹರಡಿಕೊಂಡ ಅಸಂತೋಷದ ದುರ್ಲಾಭ ಪಡೆಯುವ ಹೊಂಚು ಹಾಕಿ ಪ್ರತಿಗಾಮಿಗಳೂ ಶೋಷಕರೂ ಸ್ಥಾಪಿಸಿದ ಇಂಥ ಪಕ್ಷವನ್ನು ಸಾಮಾನ್ಯ ಜನರು ಎಂದಿಗೂ ನಂಬುವುದಿಲ್ಲವೆಂದು ಹೇಳಿದುದಲ್ಲದೆ ಚುನಾವಣೆಯಲ್ಲಿ ಈ ಪಕ್ಷಕ್ಕೆ ಸಂಪೂರ್ಣ ಪರಾಭವ ಖಂಡಿತವೆಂದೂ ನುಡಿದುಬಿಟ್ಟ. ವಕೀಲರ ಮತ್ತು ಬಸೆಟ್ಟೆಯವರ ಭಾಷಣ ಕೇಳಿ ಚಪ್ಪಾಳೆ

ಹಾಕಿದ್ದ ಜನರೇ ಸದಾಶಿವನ ಮಾತಿಗೂ ಚಪ್ಪಾಳೆ ಹಾಕಿದರು. "ಬರೋಬರಿ ಹೇಳಿದ.. ಬರೋಬರಿ ಹೇಳಿದ" ಎಂಬ ಉದ್ಗಾರಗಳೂ ಕೇಳಬಂದುವು. ಇನಾಂ ದಾರರು, ಬಸೆಟ್ಟಿ, ವಿತ್ತಿಸ್ನಿತರರೆಲ್ಲ ಗಾಬರಿಗೊಳ್ಳದಿರಲಿಲ್ಲ. "ಎಷ್ಟು ಚಲೋ ನಡೆದುಬಂದ ಸಭಾನ್ನ ಇವ ಕೆಡಿಸಿಬಿಟ್ಟನಲ್ಲಾ! ಇವನ್ನ ಬಿಡಲೇಬಾರದಾಗಿತ್ತು ಭಾಷಣಕ್ಕ!" ಎಂದು ಹೇಳಿಕೊಂಡು ಸದಾಶಿವನನ್ನು ಕೆಂಗಣ್ಣುಗಳಿಂದ ದಿಟ್ಟಿಸುತ್ತ ಕೈಗಳನ್ನ ಹಿಸುಕಿಕೊಂಡು ಕೋಪಶಮನ ಮಾಡಿಕೊಂಡರು ಇನಾಂದಾರರು.

ಸದಾಶಿವನ ಭಾಷಣದಿಂದ ಉತ್ತೇಜಿತನಾಗಿದ್ದ ಕೇಶವನೂ ಮಾತನಾಡಲು ಎದ್ದು ನಿಂತ. ಸಮಯವಿಲ್ಲವೆಂದು ನೆಪ ಹೇಳಿ ಅವನಿಗೆ ಅವಕಾಶವೀಯಲಿಲ್ಲ ಅಧ್ಯಕ್ಷರು. ಅವನು ಬೇಸರಗೊಂಡು ವನಮಾಲೆಯ ಸಮೇತ ಸಭೆಯನ್ನು ತ್ಯಜಿಸಿ ಹೊರಟು ಹೋದ. ಸದಾಶಿವನೂ ಎದ್ದು ಅವರನ್ನು ಅನುಸರಿಸಿ ನಡೆದ.

ಓರೆಕೋರೆ ಸಭೆ ಹೋಗಿ ಬಂದ ಸಿದ್ಧರಾಮಪ್ಪನ ಮೂಲಕ ಅಲ್ಲಿ ನಡೆದ ವಿದ್ಯಮಾನಗಳೆಲ್ಲ ತಿಳಿದುಬರುತ್ತಲೂ ವಿಶಾಲಪ್ಪನವರಿಗೆ ತಳಮಳವಾಗದಿರಲಿಲ್ಲ. ತಮಗೆ ಕಾಂಗ್ರೆಸ್ ಚೀಟಿ ಸಿಗುವ ಸಂಭವವಿಲ್ಲವೆಂಬ ವರ್ತಮಾನವೂ ಅದಕ್ಕೆ ಮೊದಲೇ ಅವರಿಗೆ ಸಿದ್ಧರಾಮಪ್ಪನಿಂದಲೇ ಗೊತ್ತಾಗಿ ಹೋಗಿತ್ತು. ಇನ್ನು ವಿಶಾಲಪ್ಪ ಸುಮ್ಮನೆ ಕುಳಿತಿರುವಂತಿರಲಿಲ್ಲ. ಕಾಂಗ್ರೆಸ್ಸಿನ ಆಸೆಯನ್ನು ತ್ಯಜಿಸಿ ದರಿದ್ರನಾರಾಯಣ ಪಕ್ಷಕ್ಕಾಗಲಿ, ಜನತಾ ಪಕ್ಷಕ್ಕಾಗಲಿ ಸೇರಿಕೊಳ್ಳಲೇ ಬೇಕಾದ ಸಂದರ್ಭ ಬಂದಿತ್ತು. ವಿಲಂಬ ಮಾಡಿದಲ್ಲಿ, ಬಸೆಟ್ಟಿಯೂ ಸೋಮಶೇಖರಪ್ಪನವರೂ ಮುಖಂಡರಾಗಿ ಮೆರೆಯುವರು. ಆಮೇಲೆ ಜನತೆಯ ದೃಷ್ಟಿಯಲ್ಲಿ ತಮ್ಮ ವ್ಯಕ್ತಿತ್ವ ಎದ್ದು ಕಾಣಿಸಲಿಕ್ಕಿಲ್ಲ....

"ನೀವೂ ಬೇಗನೆ ಏನಾದರೂ ನಿಶ್ಚಯ ಮಾಡಿಬಿಡಬೇಕ್ರಿ" ಎಂದು ಸಿದ್ಧರಾಮಪ್ಪನೂ ಹೇಳಿದ.

"ಹಾಂ....ಹಾಂ....ಇದೌದು. ನಿಶ್ಚಯ ಮಾಡಬೇಕು...."

"ಇವೊತ್ತೇ ರಾಜೀನಾಮೆ ಕೊಟ್ಟುಬಿಡಿರಿ ಕಾಂಗ್ರೆಸ್ಸಿಗೆ. ಪತ್ರಿಕೆಗಳಿಗೆ ಕಳಿಸಿಬಿಡೋಣ."

" ಅಷ್ಟು ಅವಸರ ಬೇಡ ಕಡುಗಲಿ. ಮಂತ್ರಿಗಳಿಗೆ ಪತ್ರ ಬರೆದಿದ್ದೇನೆ. ಅವರಿಂದ ಉತ್ತರ ಬರುವ ತನಕ ನೋಡಿದರಾಯಿತು. '

" ಕೃಷ್ಣಾಜಿ ಮತ್ತು ಕಳ್ಳೀಕಾಯಿ ಜಿಲ್ಲಾ ಕಾಂಗ್ರೆಸ್ಸು ನಿಮಗೆ ವಿರುದ್ಧ ಇರುವಾಗ ಮಂತ್ರಿಯಾದರೂ ಏನು ಮಾಡಿಯಾರು! ನಿಮಗೆ ಕಾಂಗ್ರೆಸ್ ಚೀಟಿ ಕೊಡಿಸುವದು ಯಾರಿಂದಲೂ ಶಕ್ಯ ಇಲ್ಲ. ಕೆ. ಪಿ ಸಿ. ಸಿ. ಯವರಂತೂ ಸ್ಪಷ್ಟ ಹೇಳಿಬಿಟ್ಟರಲ್ಲ, ಜಿಲ್ಲಾ ಕಾಂಗ್ರೆಸಿನ ಅಭಿಪ್ರಾಯದ ವಿರುದ್ಧ ಏನೂ ಮಾಡಲಿಕ್ಕೆ ಬರುವದಿಲ್ಲ ಅಂತ.... "

ಹತಾಶರಾದ ವಿಶಾಲಪ್ಪನವರು ಕಾಂಗ್ರೆಸ್ಸಿಗೆ ರಾಜೀನಾಮೆ ಕೊಡದೆ ಅನ್ಯ ಮಾರ್ಗವಿರಲಿಲ್ಲ.

ಒಂದೆರಡು ದಿನಗಳಲ್ಲಿಯೆ ಉಗ್ರಪುರದಲ್ಲಿ ಸಭೆ ಸೇರಿ ದರಿದ್ರನಾರಾಯಣ ಪಕ್ಷದ ಕರ್ನಾಟಕ ಶಾಖೆಯ ಆರಂಭೋತ್ಸವ ನಡೆಯುವುದಿತ್ತು. ಅಷ್ಟರೊಳಗಾಗಿಯೆ ವಿಶಾಲಪ್ಪನವರೂ ಕಾಂಗ್ರೆಸ್ಸನ್ನು ತ್ಯಜಿಸಬೇಕಾಗಿತ್ತು. ಸಭೆಯ ಸಿದ್ಧತೆಗೆಂದು ಓಡಿಯಾಡುತ್ತಿದ್ದ ಶಿವಲಿಂಗಯ್ಯನವರು ಒಂದು ದಿನ ವಿಶಾಲಪ್ಪನವರಲ್ಲಿಗೆ ಬಂದು,

" ಇನ್ನೂ ವಿಚಾರವಾಗಲಿಲ್ಲೇನು ನಿಮ್ಮದು ?' ಎಂದು ಕೇಳಿದರು.

" ನಾನೇನು ಮಾಡಬೇಕೆನ್ನುತ್ತೀರಿ ? "

" ಸಭೆಯ ದಿನ ಹತ್ತಿರ ಬಂತು. ಈಗಿಂದೀಗ ಕಾಂಗ್ರೆಸ್ ಬಿಟ್ಟು ನಮ್ಮ ಪಕ್ಷ ಸೇರಬೇಕು ನೀವು. "

" ಸೇರಬಹುದು ಅನ್ನಿರಿ. ನಾನು ಸೇರುವ ಸೋಮಶೇಖರಪ್ಪನಿಗೆ ಬೇಕಾಗಿಲ್ಲವಲ್ಲ. ಗುಪ್ತಸಭೆ ಮಾಡಿದವನು ನನ್ನನ್ನ ಕರೆಯಬಾರದೇ ? "

" ನಿಮ್ಮ ವಿಚಾರ ಹ್ಯಾಗೋ ಏನೋ ಅಂತ ಕರೆಯಲಿಲ್ಲ. ಅದೆಲ್ಲಾ ಮರೆತುಬಿಡಿರಿ. ನಿಮ್ಮನ್ನು ಬಿಟ್ಟು ಪಕ್ಷ ಮಾಡುವ ಮಾರಿ ಏನು ಸೋಮಪ್ಪನದು ? ಅವನೊಬ್ಬನೇ ಹೋದರೆ ಹಣ ಕೂಡುತ್ತೇ ? ಮಂದಿ ಕೂಡುತ್ತೈತೇ ? ಅದಕ್ಕೆಲ್ಲಾ ನಿಮ್ಮಂಥ ಮುಖಂಡರೇ ಬೇಕು. "

ನಿರುತ್ಸಾಹಿಯಾಗಿ ಕುಳಿತಿದ್ದ ವಿಶಾಲನವರ ಮೈಯಲ್ಲಿ ಹೊಸ ರಕ್ತ ಹರಿದಾಡಿದಂತಾಯಿತು. ಮುಖಸ್ತುತಿಯೆಂದರೆ ಅವರಿಗೆ ಬಹಳ ಪ್ರೀತಿ.

" ನಿಮ್ಮಂಥ ಹಿರಿಯರು ಹೇಳುತ್ತೀರೆಂದ ಮೇಲೆ ನಾನು ಬರದೆ ಬಿಡಲಿ ಕ್ಕಾದೀತೇ ? " ಎಂದು ನುಡಿದು, ಕಾಗದ ತೆಗೆದುಕೊಂಡು ಕಾಂಗ್ರೆಸ್ ಸಂಸ್ಥೆಗೆ ರಾಜೀನಾಮೆ ಬರೆದರು ವಿಶಾಲಪ್ಪ.

" ಅಸೆಂಬ್ಲಿಗೂ ರಾಜೀನಾಮೆ ಕೊಡುವವರೇನು ? "

" ಅಸೆಂಬ್ಲಿಗ್ಯಾಕೆ ರಾಜೀನಾಮೆ ? ನನ್ನನ್ನು ಆರಿಸಿ ಕಳಿಸಿದವರು ಮತ ದಾರರು. ಕಾಂಗ್ರೆಸ್ಸಲ್ಲ " ಎಂದು ಹೇಳಿ ಆ ಪ್ರಸಂಗದಿಂದ ಜಾರಿಕೊಂಡರು ವಿಶಾಲಪ್ಪ.

ಮರುದಿನದ ದೈನಂದಿನ ಪತ್ರಿಕೆಗಳಲ್ಲಿ ವಿಶಾಲಪ್ಪನವರ ರಾಜೀನಾಮೆಯ ವರ್ತಮಾನ ದಪ್ಪಕ್ಷರಗಳಲ್ಲಿ ಪ್ರಕಟವಾಗಿ ಬಂತು. " ಕಾಂಗ್ರೆಸ್ಸಿನಲ್ಲಿನ ಕೊಳೆ ಯನ್ನು ಹೋಗಲಾಡಿಸಲು ಯತ್ನಿಸಿ ವಿಫಲರಾದುದರಿಂದ ಅದನ್ನು ತ್ಯಜಿಸಿ ದರಿದ್ರನಾರಾಯಣ ಪಕ್ಷಕ್ಕೆ ಸೇರುವುದು ಅನಿವಾರ್ಯವಾಯಿತು " ಎಂಬಾಶ ಯದ ಅವರ ಹೇಳಿಕೆಯೂ ಹೊರಬಿತ್ತು.

ಅದನ್ನೋದಿದ ಕೃಷ್ಣಾಜಿ ಮಾರ್ಮಿಕವಾಗಿ ನಗುತ್ತ ನುಡಿದ :

" ಕಾಂಗ್ರೆಸ್ಸಿನಲ್ಲಿನ ಕೊಳೆ ಇಂದು ಹೊರಟು ಹೋಯಿತು. "

ವಿಶಾಲಪ್ಪ ಕಾಂಗ್ರೆಸ್ಸನ್ನು ಬಿಡಲಿಕ್ಕಿಲ್ಲವೆಂದೇ ಭಾವಿಸಿದ್ದ ಸೋಮಶೇಖ ರಪ್ಪನವರಿಗೆ ಆ ವಾರ್ತೆಯಿಂದಾಗಿ ತುಂಬಾ ವ್ಯಸನವಾಗದಿರಲಿಲ್ಲ. " ಕಡೆಗೂ ಇತ್ತ ನುಗ್ಗಿಯೇ ಬಿಟ್ಟ ಕಳ್ಳ. ಇದುವರೆಗೆ ಕಾಂಗ್ರೆಸ್ಸನ್ನು ಹೊಲಸು ಮಾಡು ತ್ತಿದ್ದ. ಇನ್ನು ಈ ಪಕ್ಷವನ್ನೂ ಹಾಳು ಮಾಡುತ್ತಾನೆ " ಎಂದು ಅವರು ತನ್ನ ಲ್ಲಿಯೆ ಹೇಳಿಕೊಂಡರು.

ಟೋಪಿ ಶಾಂತಣ್ಣನಿಗೆ ಮಾತ್ರ ಪರಮ ಸಂತೋಷವಾಯಿತು. ಸೋಮ ಶೇಖರಪ್ಪ ಅವನನ್ನು ನಂಬುತ್ತಿರಲಿಲ್ಲ, ಹತ್ತಿರ ಸೇರಿಸುತ್ತಿರಲಿಲ್ಲ ದರಿದ್ರ ನಾರಾಯಣ ಪಕ್ಷದ ಮುಖಂಡತ್ವ ಅವರದೇ ಆಗಿ ಉಳಿದಿದ್ದಲ್ಲಿ ಶಾಂತ ಣ್ಣನ ಬೇಳೆ ಅಲ್ಲಿ ಬೇಯುವಂತಿರಲಿಲ್ಲ. ವಿಶಾಲಪ್ಪನವರಾದರೋ ಶಾಂತಣ್ಣನ ಬಂಧುವರ್ಗಕ್ಕೆ ಸೇರಿದವರು. ಅವನ ಬಗ್ಗೆ ಇವರಿಗೂ ಇವರ ಬಗ್ಗೆ ಅವನಿಗೂ ಗಾಢ ನಂಬುಗೆ. ತನ್ನ ತರುವಾಯ ಕಳ್ಳೀಕಾಯಿ ಜಿಲ್ಲೆಯ ರಾಜಕೀಯ ನಾಯಕತ್ವ ಶಾಂತಣ್ಣನಿಗೇ ಹೋಗಬೇಕೆಂಬ ಬಯಕೆಯೂ ಇತ್ತು ವಿಶಾಲಪ್ಪ

ನವರಿಗೆ. “ ಗಾಂಧಿಯ ಪಟ್ಟ ನೆಹರೂಗೆ ಹೋದ ಹಾಗೆ ನನ್ನ ಪಟ್ಟ ಶಾಂತಣ್ಣ ನಿಗೆ ಹೋಗುತ್ತದೆ ” ಎಂದು ಅವರು ಪದೇ ಪದೇ ಹೇಳುತ್ತಿದ್ದುದಿತ್ತು. ಶಾಂತಣ್ಣನೂ ಅವರನ್ನು ಓಲೈಸಿಕೊಂಡು ಅವರ ಚಟುವಟಿಕೆಗಳಲ್ಲೆಲ್ಲ ನೆರವಾಗುತ್ತ ಬಂದು ಅವರ ಕೃಪೆಗೆ ಪಾತ್ರನಾಗಿದ್ದ. ದರಿದ್ರನಾರಾಯಣ ಪಕ್ಷದ ಅಧ್ಯಕ್ಷ ಸ್ಥಾನವನ್ನು ವಿಶಾಲಪ್ಪನವರೇ ಹಿಡಿದುಕೊಂಡಲ್ಲಿ ತಾನು ಪ್ರಧಾನ ಕಾರ್ಯದರ್ಶಿಯಾಗಲು ಸಾಧ್ಯವಾದೀತು, ಚುನಾವಣೆಯಲ್ಲಿ ತಾನೂ ಒಬ್ಬ ಹುರಿಯಾಳಾಗಿ ನಿಂತು ಆರಿಸಿ ಬರಲು ಅನುಕೂಲವಾದೀತು, ಅಲ್ಪಾವಧಿಯಲ್ಲಿಯೆ ತಾನೂ ಒಬ್ಬ ಅಖಿಲ ಕರ್ನಾಟಕ ಮುಖಂಡನಾಗಲು ಸಾಧ್ಯವಾದೀತು ಎಂದೆಲ್ಲ ಎಣಿಕೆ ಹಾಕುತ್ತಿದ್ದ ಶಾಂತಣ್ಣ. ಇತ್ತೀಚೆಗೆ ‘ ಶರಣ ಶರಣೆಯರ ಸಂಘ ’ ದಿಂದ ಅವನೆಗೇನೂ ಲಾಭವಿರಲಿಲ್ಲವಾದುದರಿಂದ ಸಂಪಾದನೆಯ ಹೊಸ ಮಾರ್ಗಗಳನ್ನವನು ಹುಡುಕ ಬೇಕಾದುದೂ ಅವಶ್ಯವಾಗಿತ್ತು. ದರಿದ್ರನಾರಾಯಣ ಪಕ್ಷದ ಕಾರ್ಯದರ್ಶಿಯ ಸ್ಥಾನ ಸಿಕ್ಕಿದಲ್ಲಿ ಅನಾಯಾಸವಾಗಿಯೆ ಸಾವಿರಾರು ರೂಪಾಯಿಗಳನ್ನು ಎತ್ತಿ ಹಾಕಬಹುದೆಂದು ಅವನ ಯೋಚನೆ. ಅಂತೆಯೆ, ಆ ಸ್ಥಾನವನ್ನು ಹಿಡಿದುಕೊಳ್ಳುವುದಕ್ಕಾಗಿ ಶಾಂತಣ್ಣ ಬಗೆ ಬಗೆಯ ಉಪಾಯಗಳನ್ನು ಯೋಚಿಸತೊಡಗಿದ. ಕಳ್ಳೀಕಾಯಿ ನಗರಕ್ಕೆ ಬರುವ ಕಾರ್ಯಕರ್ತರನ್ನೆಲ್ಲ ತನ್ನ ಮನೆಗೆ ಆಮಂತ್ರಿಸಿ ಅವರಿಗೆ ಹೋಳಿಗೆಯೂಟ ಹಾಕುವ ಕ್ರಮಕ್ಕೂ ಆರಂಭಿಸಿದ. ವೀರಣ್ಣ, ಸಿದ್ಧರಾಮಪ್ಪ, ಚೆನ್ನಯ್ಯಶಾಸ್ತ್ರಿ, ಗೊಬ್ಬೂರಿನ ಭೀಮರಾಯಪ್ಪ, ಉಗ್ರಪುರದ ಜಡೆಯಪ್ಪ ಮೊದಲಾದವರೆಲ್ಲ ಶಾಂತಣ್ಣನ ಕಾಯಂ ಅತಿಥಿಗಳಂತೆ ಅವನಲ್ಲಿಯೆ ಬಿಡಾರ ಹೂಡತೊಡಗಿದರು. ಅವರೆಲ್ಲರೆದುರಿಗೆ ತನ್ನ ಪಾಂಡಿತ್ಯವನ್ನು ಪ್ರದರ್ಶಿಸುತ್ತ, ರಾಜಕೀಯ ಪಕ್ಷ ಯಶಸ್ವಿಯಾಗಲು ಕಾಯದೆ ಕಾನೂನುಗಳನ್ನು ಚೆನ್ನಾಗಿ ಓದಿಕೊಂಡ ಸುಶಿಕ್ಷಿತ ಕಾರ್ಯದರ್ಶಿ ಅವಶ್ಯವೆಂಬ ಅಂಶವನ್ನು ಅವರ ಮನಸ್ಸಿನ ಮೇಲೆ ಬಿಂಬಿಸಲು ಯತ್ನಿಸತೊಡಗಿದ ಶಾಂತಣ್ಣ. ಬುದ್ಧಿವಂತನಾದ ವೀರಣ್ಣನಿಗೆ ಶಾಂತಣ್ಣನ ಹೊಂಚು ಒಡನೆಯೆ ಅರ್ಥವಾಯಿತು. ಪ್ರಧಾನ ಕಾರ್ಯದರ್ಶಿ ಪದವನ್ನು ತಾನೇ ಹಿಡಿದುಕೊಳ್ಳಬೇಕೆಂದು ಬಯಸುತ್ತಿದ್ದವನು ವೀರಣ್ಣ. ಶಾಂತಣ್ಣನ ಆಸೆಯನ್ನು ಗುರುತಿಸಿಕೊಂಡು ಅವನು ಮನಸ್ಸಿನಲ್ಲಿಯೆ ನಗುತ್ತಾ, ಬಾಯಿ ಬಿಟ್ಟು ಏನನ್ನೂ

ಆಡದೆ ಬಿಟ್ಟೆ ಊಟ ಗಿಟ್ಟಿಸುತ್ತಲಿದ್ದ.

ಗೊಬ್ಬೂರಿನ ಭೀಮರಾಯಪ್ಪನಿಗೂ ಬೇರೆ ಉದ್ಯೋಗವೇನೂ ಇರಲಿಲ್ಲ. ಸಂಘ—ಸಂಸ್ಥೆ, ಪಕ್ಷ—ಪಂಗಡಗಳಲ್ಲಿ ಅಧಿಕಾರ ಸ್ಥಾನ ಹಿಡಿದುಕೊಂಡು ಹಲವಾರು ತಂತ್ರಗಳಿಂದ ಕಾಸು ಉಳಿಸಿ ಜೀವನ ನಿರ್ವಾಹ ಸಾಗಿಸುತ್ತಿದ್ದ ಅನೇಕ ಕಾರ್ಯಕರ್ತರಲ್ಲಿ ಅವನೂ ಒಬ್ಬನಾಗಿದ್ದ. ಹೆಸರಿಗೆ ತಕ್ಕ ಹಾಗೆ ಅವನು ಭೀಮನಂತೆಯೆ ಇದ್ದ. ಭಯಂಕರಾಕಾರ, ಭಯಂಕರ ಮಾತು, ಭಯಂಕರ ಸ್ವಭಾವ. "ನಮ್ಮ ಗುಂಪಿನ ಭೀಮಸೇನ ಅಂದರೆ ಭೀಮರಾಯಪ್ಪ" ಎಂದು ಆಗಾಗ ಹೇಳುತ್ತಿದ್ದ ಸಿದ್ಧರಾಮಪ್ಪ. ಭೀಮರಾಯಪ್ಪ ಶಾಲೆಯಲ್ಲಿ ಓದಿದುದೆಷ್ಟೆಂಬುದು ಯಾರಿಗೂ ಗೊತ್ತಿರಲಿಲ್ಲ. ಅವನು ಕೈಯಲ್ಲಿ ಪುಸ್ತಕ ಹಿಡಿದುದನ್ನೊ ಯಾರೂ ಕಂಡಿರಲಿಲ್ಲ. ದೈನಂದಿನ ಪತ್ರಿಕೆಗಳನ್ನು ಕೂಡ ಅವನು ಮುಟ್ಟುತ್ತಿರಲಿಲ್ಲ. ಅವರಿವರೊಡನೆ ಮಾತನಾಡುವಾಗಲಷ್ಟೆ ಮಹತ್ವದ ರಾಜಕೀಯ ಘಟನೆಗಳನ್ನಾತ ಅರಿತುಕೊಳ್ಳುತ್ತಿದ್ದುದು. ಕಾಂಗ್ರೆಸ್ಸಿನಲ್ಲಿರುವ ವರೆಗೆ ಕೃಷ್ಣಾಜಿಗೂ ಅವನಿಗೂ ಒಂದು ದಿನವೂ ಹೊಂದಿಕೆಯಾಗಿರಲಿಲ್ಲ. ಕೃಷ್ಣಾಜಿ ವಾದಕ್ಕಾರಂಭಿಸಿದಾಗಲೆಲ್ಲ ಭೀಮರಾಯಪ್ಪ ಅವನನ್ನು ಹೊಡೆಯಲು ಮುಂದಾಗಿ ಹೋಗುತ್ತಿದ್ದ. ಅಂತೆಯೆ, ಕೃಷ್ಣಾಜಿ ಅವನೊಡನೆ ವಾದಕ್ಕೆ ನಿಲ್ಲುವುದನ್ನೆ ತ್ಯಜಿಸಿ "ಈ ಹುಂಬನ ಹತ್ತಿರ ಏನು ಮಾತು!" ಎಂದುಕೊಂಡು ದೂರ ವಿರುತ್ತ ಬಂದಿದ್ದ. ತನ್ನನ್ನು ಕೃಷ್ಣಾಜಿ 'ಹುಂಬ' ನೆಂದು ಸಂಬೋಧಿಸುತ್ತಿದ್ದ ವಿಷಯ ಯಾರ ಬಾಯಿಂದಲೋ ಗೊತ್ತಾದಂದಿನಿಂದ ಕೃಷ್ಣಾಜಿಯ ಬಗ್ಗೆ ದ್ವೇಷವಿಟ್ಟುಕೊಂಡು ಸಮಯ ಸಿಕ್ಕಿದಾಗಲೆಲ್ಲ ಅವನನ್ನು ಅವಾಚ್ಯವಾಗಿ ತೆಗಳುತ್ತ ಬಂದಿದ್ದ, ಭೀಮರಾಯಪ್ಪ. ಸೋಮಶೇಖರಪ್ಪ, ವಿಶಾಲಪ್ಪ ಮೊದಲಾದವರು ಕಾಂಗ್ರೆಸ್ಸಿನಿಂದ ಸಿಡಿದು ಹೋಗಿ ದರಿದ್ರನಾರಾಯಣ ಪಕ್ಷಕ್ಕೆ ಸೇರಿಕೊಳ್ಳುತ್ತಲೂ ಭೀಮರಾಯಪ್ಪನಿಗೆ ಅಪರೂಪದ ಸಂಧಿಯೊಂದು ಲಭಿಸಿದಂತಾಯಿತು. ವಿಶಾಲಪ್ಪನವರನ್ನೂ ಸೋಮಶೇಖರಪ್ಪನವರನ್ನೂ ಕಾಡಿಸಿ ಪೀಡಿಸಿ ಪಕ್ಷದ ಕಾರ್ಯದರ್ಶಿ ಸ್ಥಾನ ಪಡೆದುಕೊಂಡು ಚರಿತಾರ್ಥವನ್ನೂ ಸಾಗಿಸುವುದಲ್ಲದೆ ಕೃಷ್ಣಾಜಿಯ ಜಂಬದ ಕೋಡು ಮುರಿಯುವುದೆಂದು ಎಣಿಕೆ ಹಾಕುತ್ತಿದ್ದ ಭೀಮರಾಯಪ್ಪ. ಈ ನಿಟ್ಟಿನಲ್ಲಿ ಟೋಪಿ ಶಾಂತಣ್ಣ ತನಗೆ ಅಡ್ಡ ಬರುವನೆಂದು

ತಿಳಿದೊಡನೆ ಅವನಿಗೆ ವ್ಯಸನವಾಗದಿರಲಿಲ್ಲ. ಚೆನ್ನಯ್ಯಶಾಸ್ತ್ರಿಯೊಡನೆ ಆ ವಿಚಾರ ಮಾತನಾಡುತ್ತಾ ಭೀಮರಾಯಪ್ಪ ಹೇಳಿದ:

" ಈ ಟೋಪಿ ಶಾಂತಣ್ಣ ನಮಗೆಲ್ಲಾ ಟೋಪಿ ಹಾಕಬೇಕಂತ ಹೆಂಗ ಪ್ರಯತ್ನ ಮಾಡುತಿದ್ದಾನ ನೋಡಿದಿಯಾ ಶಾಸ್ತ್ರೀ ! "

" ಅಷ್ಟು ತಿಳಿಯುವದಿಲ್ಲೇನು ? ಏನಾದರೂ ಮಾಡಿ ನಮ್ಮನ್ನೆಲ್ಲಾ ಕಿಸೇಕ್ಕ ಹಾಕಿಕೊಂಡು ಕಾರ್ಯದರ್ಶಿ ಆಗಬೇಕಂತ ಹವಾಪಿಸುತ್ತಿದಾನ. "

" ಇವನ ಮಾರೀ ನೋಡಿ ಯಾರಾದರೂ ಕಾರ್ಯದರ್ಶಿ ಮಾಡಿಯಾರೇನು ಇವನ್ನ ! ಇಪ್ಪತ್ತು ಇಪ್ಪತ್ತೈದು ವರ್ಷ ರಾಜಕಾರಣ ಮಾಡುತಾ ಬಂದ ನಮ್ಮಂಥವರ ಮುಂದೆ ಇವನ್ಯಾವ ಕಾಮಣ್ಣ ? "

" ವಿಶಾಲಪ್ಪನವರಿಗೆ ಬಹಳ ಪ್ರೀತಿಯಪ್ಪಾ ಇವನ ಮ್ಯಾಲ. "

" ಪ್ರೀತಿಯಿದ್ದರ ಹೆಣ್ಣು ಕೊಟ್ಟು ಮದುವೆ ಮಾಡಲಿ. ಪಕ್ಷ ಅಂದರೇನು ವಿಶಾಲಪ್ಪನವರ ಮನಿಯದಲ್ಲ. "

" ಮನಿಯದೇ ಆಗುತೈತಿ ನೋಡು ಬೇಕಾದರೆ. ಎಲ್ಲಾ ಅಧಿಕಾರ ಅವರೇ ಹಿಡುಕೊಂಡು ಕೂಡುತಾರೆ. "

" ಹಾಂಗ ಆಗಲಿಕ್ಕೆ ನಾವು ಬಿಡಬಾರದು ಶಾಸ್ತ್ರಿ. "

" ನಮ್ಮಿಬ್ಬರ ಮಾತು ಯಾರು ಕೇಳುತಾರೊ ? ಸಿದ್ಧರಾಮಪ್ಪನಂಥ ವರಿಗೆ ವಿಶಾಲಪ್ಪ ಅಂದರೆ ಸಾಕ್ಷಾತ್ ಪರಮೇಶ್ವರನ ಅವತಾರ. ಅವರನ್ನ ಸಿಂಹಾಸನದ ಮ್ಯಾಲ ಕೂಡಿಸಿ ಅವರು ಹೇಳಿದ್ದಕ್ಕೆಲ್ಲಾ ಜೋ ಹುಕ್ಕುಂ ಅನ್ನುವ ಹುಚ್ಚರೇ ಬಹಳ ಇದ್ದಾರೆ."

ಶಾಸ್ತ್ರಿ ಭಾವಿಸಿದ್ದುದರಲ್ಲಿ ಅತಿಶಯವಾದುದೇನೂ ಇರಲಿಲ್ಲ. ಶಿವಲಿಂಗಯ್ಯನವರಾದಿಯಾಗಿ ಅನೇಕ ಜನರು ವಿಶಾಲಪ್ಪನವರನ್ನೆ ಪಕ್ಷದ ಅಧ್ಯಕ್ಷರನ್ನಾಗಿ ಮಾಡಬೇಕೆಂದು ಆಗಲೆ ನಿಶ್ಚಯಿಸಿಕೊಂಡಿದ್ದರು.

ಉಗ್ರಪುರದಲ್ಲಿ ನಡೆಯಬೇಕಾಗಿದ್ದ ಪಕ್ಷದ ಆರಂಭೋತ್ಸವದ ಅಧ್ಯಕ್ಷತೆ ವಹಿಸಲು ಕಳ್ಳೇಕಾಯಿಯ ವಯೋವೃದ್ಧ ವಕೀಲರಾದ ನಾರಾಯಣರಾಯರನ್ನು ಕೇಳಿಕೊಳ್ಳಲಾಯಿತು.

ಆಮಂತ್ರಣ ಪತ್ರಿಕೆಯಲ್ಲಿ ಅವರ ಹೆಸರು ಕಾಣಿಸುತ್ತಲೂ ಸದಾಶಿವನಿಗೆ

ಸಹಿಸಲಾರದಷ್ಟು ಕೋಪ ಬಂದಿತು. ತಿರೋಗಾಮಿ ನೀತಿಗೆ ಹೆಸರುವಾಸಿಯಾಗಿದ್ದ ನಾರಾಯಣರಾಯರನ್ನು ಆರಂಭೋತ್ಸವದ ಅಧ್ಯಕ್ಷರನ್ನಾಗಿ ಮಾಡಿದವರಾರೆಂಬುದೇ ಅವನಿಗೆ ಹೊಳೆಯದಂತಾಯಿತು. ದರಿದ್ರನಾರಾಯಣ ಪಕ್ಷದ ಧ್ಯೇಯ ಧೋರಣಗಳಿಗೂ ನಾರಾಯಣರಾಯರ ಧ್ಯೇಯ ಧೋರಣಗಳಿಗೂ ಒಂದು ಅಂಶದಲ್ಲೂ ಸಾಮ್ಯವಿರಲಿಲ್ಲ. ಸತ್ಯ, ಅಹಿಂಸೆ, ಸರ್ವೋದಯ ಎಂಬ ಶಬ್ದಗಳನ್ನು ಗೇಲಿ ಮಾಡಿ ನಕ್ಕು ಬಿಡುತ್ತಿದ್ದವರು ನಾರಾಯಣರಾಯರು. ಕಳ್ಳೇಕಾಯಿ ಜಿಲ್ಲೆಯ ಜಮೀನ್ದಾರರ ಸಂಘದ ಅಧ್ಯಕ್ಷರಾಗಿದ್ದ ರಾಯರಿಗೆ ಸ್ವಾಭಾವಿಕವಾಗಿಯೆ ರೈತರ ಬಗ್ಗೆ ಸಹಾನುಭೂತಿಯಿರಲಿಲ್ಲ. ಕಾಂಗ್ರೆಸ್ ಸರಕಾರ ಜಾರಿಗೆ ತಂದಿದ್ದ—ಅಷ್ಟೇನೂ ಪ್ರಗತಿಶೀಲವಲ್ಲದ—ಹೊಲಸಾಗುವಳಿ ಕಾನೂನನ್ನೂ ಸಾರ್ವಜನಿಕವಾಗಿ ವಿರೋಧಿಸಿ ಗದ್ದಲವೆಬ್ಬಿಸಿದ ಕೀರ್ತಿ ನಾರಾಯಣರಾಯರದು. ಹಿಂದೂ ಮಹಾಸಭೆ, ಆರ್. ಎಸ್. ಎಸ್. ಮೊದಲಾದ ಜಾತೀಯ ಸಂಸ್ಥೆಗಳಿಗೆ ಅವರು ಪ್ರೋತ್ಸಾಹವೀಯುತ್ತಿದ್ದ ವಿಷಯ ಜನಜನಿತವಾದುದಾಗಿತ್ತು. ಅವರ ಹೆಸರು ಕಿವಿಗೆ ಬಿದ್ದೊಡನೆ ಸಾಮಾನ್ಯ ಜನರು ಮೂಗು ಮುರಿಯುತ್ತಿದ್ದರು.

ಚೆನ್ನಬಸಪ್ಪನೊಡನೆ ಮಾತನಾಡುತ್ತ ಸದಾಶಿವ ಕೇಳಿದ :

"ಮೊದಲನೆಯ ನಂಬರಿನ ಈ ಪ್ರತಿಗಾಮಿಯನ್ನು ಅಧ್ಯಕ್ಷನನ್ನಾಗಿ ಮಾಡುವ ದುರ್ಬುದ್ಧಿ ಯಾರಿಗೆ ಬಂತು ?"

"ಏನೋಪಾ. ನನಗೂ ಗೊತ್ತಿಲ್ಲ. ಅಣ್ಣಾಗೋಳನ್ನ ಕೇಳೋಣ," ಎಂದ ಚೆನ್ನಬಸಪ್ಪ. ರಾಯರನ್ನು ಆಮಂತ್ರಿಸಿದ ವಿಷಯ ಅವನಿಗೂ ಸರಿಬಂದಿರಲಿಲ್ಲ.

ಶಿವಲಿಂಗಯ್ಯನವರೆದುರಿಗೆ ಅವರಿಬ್ಬರೂ ತಮ್ಮ ಅಭಿಪ್ರಾಯ ಮಂಡಿಸುತ್ತಲೂ ಅವರು ರೇಗಿಬಿದ್ದು ನುಡಿದರು :

"ಅವರನ್ನ ನಾವು ಯಾಕ ಕರಕೊಂಡು ಬಂದೀವಿ ಅನ್ನೂದನ್ನ ತಿಳಕೊಳ್ಳೂದಕ್ಕ ನಿಮಗ ಬುದ್ಧಿ ಇಲ್ಲ. ಸುಮ್ಮನೆ ಸಿಕ್ಕಂಗ ಮಾತಾಡ್ತೀರಿ."

ಚೆನ್ನಬಸಪ್ಪ ಚಕಿತನಾದರೂ ಶಿವಲಿಂಗಯ್ಯನವರಿಗೆ ಎದುರು ಮಾತನಾಡಲಾರದೆ ಮೌನವಾಗಿದ್ದ. ಸದಾಶಿವನಿಗೆ ಮಾತ್ರ ಸುಮ್ಮನಿರಲಾಗಲಿಲ್ಲ.

"ನಮಗೆ ಬುದ್ಧಿಯಿರಲಿಕ್ಕಿಲ್ಲ. ಬುದ್ಧಿಯಿದ್ದವರು ನೀವಾದರೂ ಹೇಳಿರಿ ಅಂಥವರನ್ನು ಯಾಕೆ ಆಮಂತ್ರಿಸಿದಿರೆಂಬುದನ್ನು."

ಶಿವಲಿಂಗಯ್ಯನವರಿಗೆ ಮತ್ತೆ ರೇಗಿತು. ಅವರೆಂದರು :

"ಅದೆಲ್ಲಾ ಯಾಕ ಬೇಕು ಉಸಾಬರಿ ನಿಮಗ? ಹಿರೇರು ನಾವು ಹೇಳಿದಷ್ಟು ಕೆಲಸ ಮಾಡಿಕೊಂಡು ಹೋಗಬಾರದೇ? ನಾರಾಯಣರಾಯರನ್ನ ಹಿಡಿದುಕೊಂಡು ಬರುವ ಯುಕ್ತಿ ಹುಡುಕಿದವನು ನಾನೇ. ಇಂಥಾದ್ದರಾಗೆಲ್ಲಾ ಸ್ವಲ್ಪ ಮುತ್ಸದ್ದಿತನ ಬೇಕು."

"ಮುತ್ಸದ್ದಿತನ?" ಅಚ್ಚರಿಗೊಂಡ ಧ್ವನಿಯಲ್ಲಿ ಕೇಳಿದ ಸದಾಶಿವ.

"ಆ ಸೋಮಪ್ಪಗ ಇಂಥಾ ಮುತ್ಸದ್ದಿತನ ಏನು ತಿಳೀತೈತಿ ತಲಿ? ನಮ್ಮ ಗುಂಪು ನೋಡಿದರ ಎಲ್ಲಾ ಲಿಂಗಾಯತರದು. ದರಿದ್ರನಾರಾಯಣ ಪಕ್ಷ ಅಂದರ ಲಿಂಗಾಯತರ ಪಕ್ಷ ಅಂತ ಹಾರವರು ಅಪಪ್ರಚಾರ ಮಾಡಲಿಕ್ಕೆ ಅವಕಾಶ ಕೊಡಬಾರದು ಅಂತ ಆರಂಭದ ಸಭೆಗೆ ಒಬ್ಬ ಬ್ರಾಹ್ಮಣನನ್ನ ಅಧ್ಯಕ್ಷನನ್ನ ಮಾಡೋಣಂತ ನಾರಾಯಣರಾಯರನ್ನ ಹಿಡಿದೀವಿ, ತಿಳೀತೇನು? ಅವರೂ ಕಟ್ಟಾ ಕಾಂಗ್ರೆಸ್ ವಿರೋಧಿ. ಮುದುಕ ಬ್ಯಾರೆ. ಅವರು ಬಂದರೆ ನಮ್ಮ ಪಕ್ಷಕ್ಕ ಬ್ರಾಹ್ಮಣರೂ ಸಹಾಯ ಮಾಡಬಹುದು ಅಂತ ಈ ವ್ಯವಸ್ಥಾ ಮಾಡಿದ್ದು, ತಿಳೀತೇನು?"

"ತಿಳಿಯಿತು, ತಿಳಿಯಿತು," ಎಂದು ವ್ಯಂಗ್ಯವಾಗಿ ನುಡಿದು ಒಂದು ನಿಮಿಷ ಸುಮ್ಮನಿದ್ದು ಮತ್ತೆ ಹೇಳಿದ ಸದಾಶಿವ :

"ಚಲೋ ಮುತ್ಸದ್ದಿತನವೇ ನಿಮ್ಮದೂ. ಮೊದಲನೆಯ ತುತ್ತಿಗೇ ನೊಣ ಸಿಕ್ಕಂತಾಯಿತು. ಅವರನ್ನ ನೋಡಿ ಜನರೆಲ್ಲಾ ನಗುತ್ತಾರೆ, ಅಷ್ಟೆ."

"ಯಾಕೆ ನಗುತ್ತಾರೆ?"

"ಇಷ್ಟೂ ಗೊತ್ತಾಗುವದಿಲ್ಲವೇನು? ನಾರಾಯಣರಾಯರೆಂದರೆ ಪಕ್ಕಾ ಪ್ರತಿಗಾಮಿ, ಜಾತ್ಯಂಧ, ಜಮೀನ್ದಾರ ಸಂಘದ ಅಧ್ಯಕ್ಷ"

"ಆದರೇನಾಯಿತು?"

ಸದಾಶಿವನ ವಿಚಾರ ಸರಣಿಯನ್ನು ಅರ್ಥಮಾಡಿಕೊಳ್ಳುವ ಶಕ್ತಿ ಶಿವಲಿಂಗಯ್ಯನವರಿಗಿರಲಿಲ್ಲ. ಅವನ ದೃಷ್ಟಿಕೋನಕ್ಕೂ ಅವರ ದೃಷ್ಟಿಕೋನಕ್ಕೂ

ಬಹಳ ವ್ಯತ್ಯಾಸವಿತ್ತು. ಕಾಂಗ್ರೆಸ್ ವಿರೋಧಿಗಳೆಲ್ಲರ ಸಹಾಯ ಸಹಕಾರ ಪಡೆದು ಕಾಂಗ್ರೆಸ್ ವಿರೋಧಿ ಪಕ್ಷವೊಂದನ್ನು ಬಲಪಡಿಸಬೇಕೆಂದು ಅವರು ಯೋಚಿಸಿಕೊಂಡಿದ್ದರು. ಸದಾಶಿವನ ವಿರುದ್ಧ ತಾತ್ತ್ವಿಕ ದೃಷ್ಟಿಕೋನ ಅವರಿಗಿರಲಿಲ್ಲ.

ಸದಾಶಿವ ಅಭಿಪ್ರಾಯಪಟ್ಟಂತೆಯೆ ಆಯಿತು. ಆರಂಭೋತ್ಸವಕ್ಕೆ ನಾರಾಯಣರಾಯರನ್ನು ಅಧ್ಯಕ್ಷರನ್ನಾಗಿ ಗೊತ್ತುಪಡಿಸಿದ ವರ್ತಮಾನ ಎಲ್ಲೆಡೆಯಲ್ಲೂ ಅಪಹಾಸ್ಯಕ್ಕೆ ಕಾರಣವಾಯಿತು. ಜಿಲ್ಲಾ ಕಾಂಗ್ರೆಸ್ ಕಚೇರಿಯಲ್ಲಿ ನೆರೆದಿದ್ದ ಕಾಂಗ್ರೆಸ್ಸಿಗರಂತೂ ಆ ವಾರ್ತೆ ಕೇಳಿ ಬಿದ್ದು ಬಿದ್ದು ನಕ್ಕರು.

"ಕೊಳೆಗೆ ತಕ್ಕ ಕೊಳೆ ಕೂಡಿತು," ಎಂದ ಕೃಷ್ಣಾಜಿ.

"ತಮ್ಮ ಗೋರಿಯನ್ನು ತಾವೇ ಅಗಿಯುತ್ತಾರೆ, ನಮ್ಮದೇನು ಗಂಟು ಹೋಗುತ್ತದೆ, ಬಿಡಿರಿ," ಎಂದ ವೀರಭದ್ರಸೆಟ್ಟಿ. ಅವನು ಉಗ್ರಪುರ ತಾಲೂಕಿನ ಪ್ರಸಿದ್ಧ ಸಾಹುಕಾರ. ಬ್ರಿಟಿಷ್ ಸರಕಾರವಿರುವ ವರೆಗೂ ಅದರ ಏಕನಿಷ್ಠ ಸೇವಕನಂತಿದ್ದ ವೀರಭದ್ರಪ್ಪ ೧೯೪೭ರಿಂದೀಚೆಗೆ ಕಾಂಗ್ರೆಸ್ ಸೇರಿ ಸೀರಿನಂತೆ ಹಣ ಖರ್ಚುಮಾಡುತ್ತ ಬಂದು ತಾಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷಪಟ್ಟವನ್ನೂ ಸಂಪಾದಿಸಿದ್ದ; ಬರಲಿದ್ದ ಚುನಾವಣೆಯಲ್ಲಿ ಉಗ್ರಪುರ ತಾಲೂಕಿನಲ್ಲಿ ಶಾಸನಸಭೆಗೆ ಕಾಂಗ್ರೆಸ್ ಹುರಿಯಾಳಾಗಿ ನಿಲ್ಲುವ ಆಕಾಂಕ್ಷೆಯಿರಿಸಿಕೊಂಡು ಕೃಷ್ಣಾಜಿಯನ್ನು ಒಲಿಸಿಕೊಳ್ಳಲು ಯತ್ನಿಸುತ್ತಲಿದ್ದ.

ಆರಂಭೋತ್ಸವಕ್ಕಾಗಿ ಉಗ್ರಪುರದ ಸಿನಿಮಾ ಥಿಯೇಟರೊಂದನ್ನು ಗೊತ್ತುಪಡಿಸಲಾಗಿದ್ದಿತು. ರಂಗದ ಮೇಲೆ ಗುಡಾರಗಳನ್ನೂ ಜಮುಖಾನ ಗಳನ್ನೂ ಹಾಸಿ, ದಿಂಬುಗಳನ್ನಿಟ್ಟು, ಮುಖಂಡರಿಗಾಗಿ ಆಸನಗಳನ್ನು ಸಿದ್ಧ ಗೊಳಿಸಲಾಗಿದ್ದಿತು. ಹೊಸ ಪಕ್ಷದ ಆರಂಭೋತ್ಸವವಾದುದರಿಂದ ಉಗ್ರಪುರದ ಜನರೆಲ್ಲ ಕುತೂಹಲದಿಂದ ನೆರೆದಿದ್ದರಲ್ಲದೆ ಸಮೀಪದ ಹಳ್ಳಿಗಳ ಜನರೂ ಆಗ ಮಿಸಿದ್ದರು. ಥಿಯೇಟರು ಸಾಲದೆ ಹೊರಗಡೆಗೂ ಜನ ನಿಂತುಕೊಳ್ಳಬೇಕಾಗಿ ಬಂದಿತ್ತು.

ವ್ಯಾಪಾರ ವ್ಯವಹಾರಗಳಿಗೆ ಹೆಸರಾಗಿದ್ದ ಉಗ್ರಪುರದಲ್ಲಿ ವಿಶೇಷವಾಗಿ ವ್ಯಾಪಾರಿಗಳೇ ವಾಸವಾಗಿದ್ದರು. ತಮ್ಮ ವ್ಯಾಪಾರವನ್ನು ಬಿಟ್ಟರೆ ಅವರಿಗೆ ಇನ್ನಾವ ವಿಷಯಗಳಲ್ಲಿಯೂ ಹೆಚ್ಚಿನ ಆಸಕ್ತಿಯಿರಲಿಲ್ಲ. ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯುಳ್ಳ ವ್ಯಾಪಾರಿಗಳಂತೂ ವಿರಳವೆ. ಅವರಲ್ಲಿ ಕೆಲವರು ದೈನಂದಿನ ಪತ್ರಿಕೆಗಳನ್ನೋದುವ ಪರಿಪಾಠವಿಟ್ಟುಕೊಂಡಿದ್ದರಾದರೂ ರಾಜ ಕೀಯ ವರ್ತಮಾನಗಳನ್ನು ಅರಿತುಕೊಳ್ಳುವ ಹವ್ಯಾಸವೇನೂ ಅವರಿಗಿರಲಿಲ್ಲರ ಪೇಟೆಯ ಧಾರಣೆವಾಸಿಗಳನ್ನು ತಿಳಿದುಕೊಳ್ಳುವ ಏಕಮಾತ್ರ ಉದ್ದೇಶದಿಂದ ಅವರು ಪತ್ರಿಕೆಗಳನ್ನೋದುತ್ತಿದ್ದರು. ನಿಯಂತ್ರಣಗಳು ಜಾರಿಯಲ್ಲಿ ಬಂದಂದಿ ನಿಂದ ಅವರ ಸಂಪಾದನೆ ಕಡಮೆಯಾಗಿದ್ದುದರಿಂದ ನಿಯಂತ್ರಣಗಳನ್ನು ಕೊಡಲೆ ತೆಗೆದು ಹಾಕಬೇಕೆಂಬುದೊಂದೇ ಅವರ ಉಗ್ರ ಬೇಡಿಕೆಯಾಗಿತ್ತು. ಬ್ರಿಟಿಷರು ಹೋಗಿ ಕಾಂಗ್ರೆಸ್ಸಿಗರೇ ಅಧಿಕಾರಕ್ಕೆ ಬಂದ ಮೇಲೂ ನಿಯಂತ್ರಣ ಗಳು ಹಾಗೆಯೆ ಉಳಿದಿದ್ದುದರಿಂದ ವ್ಯಾಪಾರಿ ವರ್ಗ ಕಾಂಗ್ರೆಸ್ ಸರಕಾರದ ಬಗ್ಗೆ ಅಸಮಾಧಾನ ತಳೆದಿತ್ತು. ಅವರ ಕಾಂಗ್ರೆಸ್ ವಿರೋಧಕ್ಕೆ ಇದಕ್ಕಿಂತ

ಹೆಚ್ಚು ಅರ್ಥವಿರಲಿಲ್ಲ.

ವ್ಯಾಪಾರಿಗಳ ಹಾಗೇ ರೈತರಿಗೂ ಕೂಡ ನಿಯಂತ್ರಣಗಳ ಬಗ್ಗೆ ಬಲು ಬೇಸರವಾಗಿತ್ತು. ಅವರು ಬೆಳೆದ ಸಾಮಾನುಗಳಿಗೆ ಮುಕ್ತ ಪೇಟೆಯಿರಲಿಲ್ಲ ವಾದ್ದರಿಂದ ಅವರ ಕೈ ಕಟ್ಟಿದಂತಾಗಿತ್ತು. ಅವರಿಗೆ ಅವಶ್ಯವಿರುವ ಕಬ್ಬಿಣದ ಸಾಮುಗ್ರಿಗಳು ಯೋಗ್ಯ ಬೆಲೆಗೆ ಸಕಾಲದಲ್ಲಿ ಸಿಕ್ಕುವಂತಿರಲಿಲ್ಲ. "ಕಂಟ್ರೋಲ್ ಅಂದರೆ ಕುತ್ತಿಗೆಗೆ ಉರುಲು" ಎಂಬ ಅಭಿಪ್ರಾಯ ಸರ್ವಸಾಮಾನ್ಯವಾದುದಾಗಿತ್ತು. ನಿಯಂತ್ರಣಗಳ ನೆಪದಿಂದ ಸರಕಾರದ ಬೇರೆ ಬೇರೆ ಶಾಖೆಗಳ ಅಧಿಕಾರಿಗಳು ರೈತರನ್ನು ಸುಲಿಯುವುದು ಅವ್ಯಾಹತವಾಗಿ ನಡೆದು ಬಂದಿತ್ತು. "ಗಾಂಧೀ ಸರಕಾರ ಬಂದರೂ ನಮುಗ ದುಃಖ ತಪ್ಪಲಿಲ್ಲ. ಈ ಹಾಳು ಕಂಟ್ರೋಲ್ ಯಾವಾಗ ಹೋಗುತ್ತೈತ್ಯೋ ದೇವರೇ!" ಎಂದು ಆಕ್ರೋಶ ಮಾಡುತ್ತಿದ್ದರು ರೈತರು. ತಮ್ಮ ಸಂಕಷ್ಟಗಳಿಗೆಲ್ಲ ಕಾರಣವಾದ ಕಾಂಗ್ರೆಸ್ ಸರಕಾರ ಹಾಳಾಗಿ ಹೋಗಬೇಕೆಂದು ಬಯಸುತ್ತಿದ್ದವರಿಗೂ ಕೊರತೆಯಿರಲಿಲ್ಲ. ವಿಶಾಲಪ್ಪನವರ ಮುಂದಾಳತ್ವದಲ್ಲಿ ಕಾಂಗ್ರೆಸ್ ವಿರೋಧಿ ಪಕ್ಷವೊಂದು ಸ್ಥಾಪಿತವಾಗುವುದೆಂಬ ವಾರ್ತೆಯನ್ನು ಕೇಳಿ ಸಂತೋಷಭರಿತರಾಗಿ, ಚಕ್ಕಡಿ ಹೂಡಿಕೊಂಡು ಅನೇಕ ರೈತರು ಉಗ್ರಪುರಕ್ಕೆ ಬಂದಿದ್ದರು. ಅರ್ಥಾತ್, ಅವರಿಗೆ ಥಿಯೇಟರಿನಲ್ಲಿ ಸ್ಥಳ ಸಿಕ್ಕದೆ ಅವರೆಲ್ಲ ಹೊರಗೇ ನಿಂತುಕೊಳ್ಳಬೇಕಾಗಿ ಬಂತು.

ವೃದ್ಧಾಪ್ಯದಿಂದ ತುಂಬಾ ನಿಶ್ಶಕ್ತರಾಗಿದ್ದ ನಾರಾಯಣರಾಯರನ್ನು ಕಾರಿನಿಂದಿಳಿಸಿದ ಬಳಿಕ ಮೂವರು ಸೇರಿ ಹೊತ್ತುಕೊಂಡು ಬಂದರು ವೇದಿಕೆಯವರೆಗೆ.

ಬಾಗಿಲಲ್ಲಿ ನಿಂತಿದ್ದ ರೈತರು ತಮ್ಮ ತಮ್ಮಲ್ಲಿ ಮಾತನಾಡಿಕೊಂಡರು.

"ಯಾರಪಾ ಇವ ಮುದುಕ? ಇವ ಯಾತಕ್ಕ ಬಂದಾನು?"

ಅವರ ಮಾತು ಕೇಳಿಸಿಕೊಂಡ ವಿದ್ಯಾರ್ಥಿಯೊಬ್ಬ ವ್ಯಂಗ್ಯವಾಗಿ ಹೇಳಿದ: "ಯಾತಕ್ಕೆ ಅಂದರೆ ಸಭಾ ನಡಸುವುದಕ್ಕೆ. ಇವನೇ ಅಧ್ಯಕ್ಷ ಇವತ್ತು."

ಅಧ್ಯಕ್ಷನೆಂದರೆ ಏನು ಎನ್ನುವುದನ್ನೂ ಅರಿಯದಿದ್ದ ಆ ರೈತರು ಮತ್ತೆ ತುಟಿ ಬಿಚ್ಚುವ ಗೊಡವೆಗೆ ಹೋಗದೆ ಸುಮ್ಮನೆ ನಿಂತುಕೊಂಡರು.

ಸ್ವಾಗತಗೀತೆ, ಸ್ವಾಗತಭಾಷಣ, ಪ್ರಾಸ್ತಾವಿಕ ಭಾಷಣಗಳ ತರುವಾಯ ನಾರಾಯಣರಾಯರು ಕುಳಿತುಕೊಂಡೇ ಮಾತನಾಡಿ ಪಕ್ಷವನ್ನು ಆಶೀರ್ವದಿಸಿದರು. "ನನಗೂ ನಿಮಗೂ ಬಹಳ ಭಿನ್ನಾಭಿಪ್ರಾಯ ಇದ್ದರೂ ನನ್ನ ಕರಕೊಂಡು ಬಂದು ಮರ್ಯಾದೆ ಮಾಡೀರಿ. ಅದಕ್ಕ ಆಭಾರಿಯಾಗಿದ್ದೀನಿ. ಕಾಂಗ್ರೆಸ್ ರಾಜ್ಯದಿಂದ ಯಾರಿಗೂ ಸುಖಾ ಇಲ್ಲ. ಜಮೀನ್ದಾರರಿಗೂ ರೈತರಿಗೂ ಮೊದಲು ಬಹಳ ಪ್ರೀತಿ ಇತ್ತು. ಟೆನನ್ಸಿ ಆಕ್ಟ್ ಮಾಡಿ ಸರಕಾರವೇ ರೈತರಿಗೂ ಮಾಲೀಕರಿಗೂ ಜಗಳ ಹಚ್ಚಿತು. ದರಿದ್ರನಾರಾಯಣ ಪಕ್ಷ ಹೀಗೆ ಮಾಡದಿರಲಿ. ದರಿದ್ರರು ಮತ್ತು ನಾರಾಯಣರು ಕೂಡಿಕೊಂಡೇ ಹೋಗುವ ಹಾಗೆ ವಾತಾವರಣ ಉಂಟುಮಾಡಬೇಕು. ನಮ್ಮ ಹಿಂದೂ ಸಂಸ್ಕೃತಿ ಬಹಳ ಪ್ರಾಚೀನ ಕಾಲದ್ದು. ಅದನ್ನು ಕಾಪಾಡಿಕೊಂಡು ಹೋಗಬೇಕು."

ಬಾಗಿಲಲ್ಲಿ ನಿಂತಿದ್ದ ರೈತರಿಗೆ ಅವರ ಎಲ್ಲ ಮಾತುಗಳೂ ಅರ್ಥವಾಗಲಿಲ್ಲ. ಹೊಲ ಸಾಗುವಳಿ ಕಾನೂನನ್ನು ಅವರು ಟೀಕಿಸಿದುದನ್ನು ಮಾತ್ರ ರೈತರು ಅರ್ಥಮಾಡಿಕೊಂಡರು. ರೈತರಿಗೆ ಸ್ವಲ್ಪ ಮಟ್ಟಿಗಾದರೂ ಪ್ರಯೋಜನಕಾರಿಯಾಗಿದ್ದ ಆ ಕಾನೂನನ್ನು ಈ ಮುದುಕ ಟೀಕಿಸಲು ಕಾರಣವೇನೆಂಬುದು ಅವರಿಗೆ ತಿಳಿಯಲಿಲ್ಲ.

ನಾರಾಯಣರಾಯರ ತರುವಾಯ ವಿಶಾಲಪ್ಪನವರೂ ವೀರಣ್ಣ ಮೊದಲಾದವರೂ ಮಾತನಾಡಿದರು. ನಾಲ್ಕು ಗಂಟೆಗಳ ಕಾಲ ಒಂದೇ ಸವನೆ ಭಾಷಣಗಳ ಮಳೆ ಸುರಿಯುತ್ತಿತ್ತು. ಮೊದಲನೆಯ ಪ್ರದರ್ಶನದ ಸಮಯವಾಗಿದ್ದುದರಿಂದ ಸಭೆಯನ್ನು ಬೇಗ ಮುಗಿಸಿ ಥಿಯೆಟರನ್ನು ಖಾಲಿ ಮಾಡಿಕೊಡಬೇಕೆಂದು ಥಿಯೆಟರ್ 'ಮಾಲೀಕ ಸಭೆಯ ಸಂಚಾಲಕರನ್ನು ಕಾಡಿಸತೊಡಗಿದ್ದ. ಭಾಷಣಕಾರರಿಗೆ ಮಾತ್ರ ಆ ಸಮಸ್ಯೆಯ ಅರಿವೇ ಇರಲಿಲ್ಲ. ಜಿಲ್ಲೆಯ ಎಲ್ಲ ತಾಲೂಕುಗಳಿಂದಲೂ ಹಳ್ಳಿಗಳಿಂದಲೂ ಬಂದಿದ್ದ ಚಿಕ್ಕ ದೊಡ್ಡ ಪುಢಾರಿಗಳು ತಮ್ಮ ವಕ್ತೃತ್ವ ಕಲೆಯನ್ನು ಪ್ರದರ್ಶಿಸುವ ಆ ಸುವರ್ಣಸಂಧಿಯನ್ನು ಕಳೆದುಕೊಳ್ಳಲಾರದೆ ಒಬ್ಬರ ಹಿಂದೊಬ್ಬರು ಎದ್ದು ಅಹಮಹಮಿಕೆಯಿಂದ ಜಿಗಿಜಿಗಿದು ಮಾತನಾಡುತ್ತಿದ್ದರು. ನಾರಾಯಣರಾಯರಿಗೆ ನಿದ್ರೆ ಬರತೊಡಗಿತ್ತು. ಅಂಗಡಿಗಳನ್ನು ಬಿಟ್ಟು ಬಂದಿದ್ದ ವ್ಯಾಪಾರಿಗಳಿಗೂ ಬೇಗ

ಹೊರಡುವ ಆತುರ. ಅಶಿಕ್ಷಿತ ಹಾಗೂ ಅಸಂಸ್ಕೃತ ಕಾರ್ಯಕರ್ತರ ಭಾಷಣ ಕೇಳುವ ಇಷ್ಟವಿಲ್ಲದೆ ವಿದ್ಯಾರ್ಥಿಗಳಂತೂ ಯಾವಾಗಲೊ ಹೊರಟುಹೋಗಿದ್ದರು. ಥಿಯೇಟರು ಬರಿಯದಾಗುತ್ತ ಬಂದರೂ ಭಾಷಣಕಾರರ ಉತ್ಸಾಹವೇನೂ ಕಡಮೆಯಾಗಲಿಲ್ಲ. "ಬ್ಯಾಟರಿ ತೀರಿತು," ಎಂದು ಧ್ವನಿವರ್ಧಕ ಯಂತ್ರದವನು ಎಚ್ಚರಿಸಿದಾಗಲೆ ಸೋಮಶೇಖರಪ್ಪ ಮುಂದೆ ಬಂದು ಭಾಷಣಗಳನ್ನು ನಿಲ್ಲಿಸಿದರು. ವಿಶಾಲಪ್ಪನವರನ್ನು ಪಕ್ಷದ ಅಧ್ಯಕ್ಷರನ್ನಾಗಿ ಆರಿಸಿ ಕಾರ್ಯಸಮಿತಿಯನ್ನು ನೇಮಿಸುವ ಅಧಿಕಾರವನ್ನು ಅವರಿಗೊಪ್ಪಿಸುವ ಶಾಸ್ತ್ರ ಮುಗಿಯಿತು. ಉಗ್ರಪುರದ ದೊಡ್ಡ ಸಾಹುಕಾರನೊಬ್ಬ ವಂದನಾರ್ಪಣೆ ಮಾಡಿ 'ದರಿದ್ರನಾರಾಯಣ ಪಕ್ಷ'ದ ಆರಂಭೋತ್ಸವಕ್ಕೆ ಭರತವಾಕ್ಯ ನುಡಿದ.

"ಇದೇನೋ ಬಡವರ ಪಕ್ಷ ಅಂತ ನಾವು ತಿಳಕೊಂಡಿದ್ದಿವಿ. ಇದರಾಗೂ ಎಲ್ಲಾ ಸಾವುಕಾರರೇ ತುಂಬಿದ್ದಾರಲ್ಲೋ!" ಎಂದನೊಬ್ಬ ರೈತ.

"ಸಾವುಕಾರರಿರದೆ ಏನು ನಿನ್ನಂಥಾ ದರಿದ್ರ ಇರಬೇಕೇನೋ? ಬಾರೋ ಮಳ್ಳs!" ಎಂದನಿನ್ನೊಬ್ಬ ರೈತ.

ಸಭೆ ಕೊನೆಗೊಂಡ ಬಳಿಕ, ಸ್ವಾಗತಸಮಿತಿಯ ಅಧ್ಯಕ್ಷ ಸಾಹುಕಾರ್ ಮಹಾಲಿಂಗಪ್ಪನ ಮನೆಯಲ್ಲಿ ಉಪಾಹಾರಕ್ಕಾಗಿ ಮುಖಂಡರೆಲ್ಲಾ ಸೇರಿದರು. ಸದಾಶಿವನ ಜತೆಗೆ ಬಂದಿದ್ದ ಹಣಮಣ್ಣ ಅವನನ್ನು ಬಿಟ್ಟು, ವಿಶಾಲಪ್ಪನವರ ಬೆನ್ನು ಹಿಡಿದು ತಾನೂ ಉಪಾಹಾರಕ್ಕೆ ನುಗ್ಗಿದ. ಗದ್ದಲದಲ್ಲಿ ಚೆನ್ನಬಸಪ್ಪನೂ ಕಾಣಿಸುವಂತಿರಲಿಲ್ಲ. ತನ್ನೊಡನೆ ಬಂದಿದ್ದ ಕಾಡಪ್ಪನನ್ನು ಕರೆದುಕೊಂಡು ಥಿಯೆಟರಿನ ಬಳಿಯಲ್ಲಿದ್ದ ಬಯಲಿಗೆ ಬಂದು ಕುಳಿತ ಸದಾಶಿವ.

"ನೀನೂ ಹೋಗಿಬಾರಲ್ಲ ಫಳಾರಕ್ಕೆ ಸದಾಶಿವಣ್ಣಾ," ಎಂದ ಕಾಡಪ್ಪ.

"ಏನೂ ಬೇಡ ಕಾಡಪ್ಪ. ನಿನಗೆ ಹಸಿವಾಗಿದ್ದರೆ ಬುತ್ತಿ ಬಿಚ್ಚು."

ಕಾಡಪ್ಪ ಗಂಟು ಬಿಚ್ಚಿದ. ರೊಟ್ಟಿ, ನುಚ್ಚು, ಪಲ್ಯ ಕೈಗೆತ್ತಿಕೊಂಡು ತಿನ್ನತೊಡಗಿದರು.

"ಯಾಕ ಸದಾಶಿವಣ್ಣಾ, ಮಾರಿ ಯಾಕೋ ಇಳದೈತಲ್ಲ ಇಂದು?" ಎಂದ ಕಾಡಪ್ಪ.

" ಏನಿಲ್ಲ. ಏನಿಲ್ಲ," ಎನ್ನುತ್ತಾ ಸದಾಶಿವ ಎದ್ದುಬಿಟ್ಟ. ರೊಟ್ಟಿ ಇಳಿಯುವಂತಿರಲಿಲ್ಲ ಅವನ ಗಂಟಲಲ್ಲಿ.

ನಾಲ್ಕು ದಿನಗಳ ತರುವಾಯ ವಿಶಾಲಪ್ಪನವರ ಬಂಗಲೆಯಲ್ಲಿ ಮತ್ತೆ ಪಕ್ಷದ ಸಭೆ ಸೇರಿತು. ಟೋಪಿ ಶಾಂತಣ್ಣ ಎಷ್ಟೋ ಯತ್ನಿಸಿದ್ದನಾದರೂ ಅವನನ್ನು ಅಷ್ಟು ಬೇಗ ಪ್ರಧಾನ ಕಾರ್ಯದರ್ಶಿಯಾಗಿ ನೇಮಿಸಲು ವಿಶಾಲಪ್ಪನವರಿಗೆ ಧೈರ್ಯವಾಗಲಿಲ್ಲ.

" ಕಾರ್ಯಸಮಿತಿ ನೇಮಿಸಿಕೊಳ್ಳುವ ಅಧಿಕಾರವನ್ನಂತೂ ನಿಮ್ಮ ಕೈಯೊಳಗೇ ಕೊಟ್ಟಿದ್ದಾರಲ್ಲರೀ ? ನೀವು ಯಾರನ್ನ ನೇಮಿಸಿದರೂ ಯಾರೂ ಪಿಟ್ಟಂತ ಮಾತಾಡುವ ಹಾಂಗಿಲ್ಲವಲ್ಲ ? " ಎಂದು ವಾದಿಸಿದ್ದ ಶಾಂತಣ್ಣ.

" ಛೆ. ಛೆ. ನಿನಗೆ ತಿಳಿಯುವದಿಲ್ಲ ಶಾಂತಣ್ಣಾ. ಹೀಗೆ ಒಮ್ಮಿಂದೊಮ್ಮೆಲೇ ನಿನ್ನ ನೇಮಿಸಿಕೊಂಡುಬಿಟ್ಟರೆ ಬೇರೆಯವರಿಗೆ ಸಂಶಯ ಬರುತ್ತದೆ. ನೀನು ನಮ್ಮ ಆಪ್ತ ಬೇರೆ. ಎಲ್ಲಾ ಅಧಿಕಾರ ನಮ್ಮ ಕೈಯೊಳಗೇ ಹಿಡಿದುಕೊಳ್ಳಲಿಕ್ಕೆ ಹೊಂಚು ಹಾಕಿದ್ದೇವೆ ಅಂತ ಸೋಮಪ್ಪ ಪ್ರಚಾರ ಮಾಡದೆ ಬಿಡುವದಿಲ್ಲ. ಅದಕ್ಕೇ ಈಗ ಸೋಮಪ್ಪನನ್ನೇ ಪ್ರಧಾನಕಾರ್ಯದರ್ಶಿ ಮಾಡುತ್ತೇನೆ. ಅವನು ನಾಲ್ಕೈದು ತಿಂಗಳು ತಿರುಗಿ ಪಕ್ಷಕ್ಕೆ ಹಣ ಕೂಡಿಸಲಿ. ಮುಂದೆ ಉಪಾಯದಿಂದ ನಿನ್ನನ್ನು ಸೆಕ್ರೆಟರಿಯನ್ನಾಗಿ ಮಾಡುತ್ತೇನೆ, " ಎಂದು ಉತ್ತರವಿತ್ತು ಅವನನ್ನು ಶಾಂತಗೊಳಿಸಿದ್ದರು ವಿಶಾಲಪ್ಪ.

ಭೀಮರಾಯಪ್ಪನ ಕಾಟವನ್ನು ಮಾತ್ರ ಅಷ್ಟು ಸುಲಭವಾಗಿ ನಿವಾರಿಸಿಕೊಳ್ಳಲು ಸಾಧ್ಯವಾಗಲಿಲ್ಲ ಸೋಮಶೇಖರಪ್ಪನವರನ್ನು ಪ್ರಧಾನ ಕಾರ್ಯದರ್ಶಿಯನ್ನಾಗಿ ಮಾಡಿ ಭೀಮರಾಯಪ್ಪನನ್ನು ಸಹಕಾರ್ಯದರ್ಶಿಯನ್ನಾಗಿ ಮಾಡಬೇಕೆಂದು ಗೊತ್ತಾಯಿತು.

" ಜಿಲ್ಲೆಯಲ್ಲೆಲ್ಲಾ ತಿರುಗಾಡಿ ತಾಲೂಕು ಸಮಿತಿ, ಗ್ರಾಮ ಸಮಿತಿ ಸ್ಥಾಪಿಸಿ ಪಕ್ಷಕ್ಕೆ ಸದಸ್ಯರನ್ನು ಮಾಡಬೇಕಾದ್ದು ಮೊದಲನೆಯ ಕೆಲಸ. ತಿರುಗಾಡುವದು ನನ್ನಿಂದಾಗುವದಿಲ್ಲ. ನಿಮ್ಮಿಂದಾಗುತ್ತದೇನ್ರೀ ಸೋಮಣ್ಣನವರೆ ? " ಎಂದರು.

" ನಮ್ಮ ಮನೆಯವರಿಗೆ ನೆಟ್ಟಗಿಲ್ಲ. ಪ್ರವಾಸ ಮಾಡುವದು ನನ್ನಿಂದಲೂ ಆಗುವದಿಲ್ಲ."

" ಇದನ್ನೆಲ್ಲಾ ವಿಚಾರ ಮಾಡಿಯೇ ನಾನು ಭೀಮರಾಯನನ್ನೆ ನೇಮಿಸಿದ್ದು. ಹೊರಗಡೆ ತಿರುಗಾಡುವ ಕೆಲಸ ಅವನು ಮಾಡುತ್ತಾನೆ. ಪತ್ರವ್ಯವಹಾರ ಮುಂತಾದ್ದನ್ನು ಸೋಮಣ್ಣನವರು ನೋಡಿಕೊಳ್ಳುತ್ತಾರೆ."

" ಪಕ್ಷದ ಆಫೀಸ್ ಎಲ್ಲಿರಬೇಕು ? " ಎಂದ ಚೆನ್ನಬಸಪ್ಪ.

" ಸೋಮಣ್ಣನವರ ಮನೆಯಲ್ಲೇ ಇರಲಿ."

" ಅಧ್ಯಕ್ಷರಿದ್ದ ಕಡೆ ಇರುವದು ಒಳ್ಳೆಯದು," ಎಂದ ಸಿದ್ಧರಾಮಪ್ಪ.

" ನಮಲ್ಲೆಲ್ಲಿ ಸ್ಥಳವಿದೆಯಪ್ಪ ? " ಎಂದು ಬೇಕೆಂದೇ ಮಾತನಾಡಿದರು ವಿಶಾಲಪ್ಪ.

" ಈ ರೂಮಿನಲ್ಲೇ ಮಾಡಬಹುದಲ್ಲ ? ಇದೂ ಖಾಲೀನೇ ಇರುತ್ತೈತಿ ಯಾವಾಗಲೂ. ನೀವೇನು ಪುಕ್ಕಟೆ ಕೊಡಬ್ಯಾಡ್ರಿ. ಇಪ್ಪತ್ತು ಮೂವತ್ತು ರೂಪಾಯಿ ಬಾಡಿಗೆಯನ್ನೂ ಖರ್ಚು ಹಾಕಬಹುದು ಪಕ್ಷದ ಹೆಸರಿಗೆ."

ವಿಶಾಲಪ್ಪನವರೂ ಅಂಥ ಉತ್ತರವನ್ನೆ ಅಪೇಕ್ಷಿಸಿದ್ದರು. " ಆಗಲಿ, ಆಗಲಿ. ನೀವೆಲ್ಲಾ ಒತ್ತಾಯ ಮಾಡಿದ ಮೇಲೆ ಇಲ್ಲ ಅನ್ನಲಿಕ್ಕೆ ಬರುತ್ತದೇನು ? " ಎಂದು ಅವರು ಬಹಳ ಉದಾರವಾಗಿ ಹೇಳಿದರು. " ಆಫೀಸು ಆಯಿತಲ್ಲ. ಇನ್ನು ಅದಕ್ಕೊಬ್ಬ ಕಾರಕೂನ ಬೇಕು, ಒಬ್ಬ ಟೈಪಿಸ್ಟ್ ಬೇಕು, ಒಬ್ಬ ಸ್ಟೆನೋಗ್ರಾಫರ್ ಬೇಕು."

" ಈಗಲೇ ಯಾತಕ್ಕೆ ಅವರೆಲ್ಲಾ? " ಎಂದು ಒಬ್ಬರು ಆಕ್ಷೇಪಿಸಿದರು.

ವಿಶಾಲಪ್ಪ ಕಣ್ಣು ಕೆಂಪಗೆ ಮಾಡಿ ಉತ್ತರವಿತ್ತರು :

" ನಿಮಗೆಲ್ಲಾ ಏನು ಗೊತ್ತು ಪಾರ್ಟಿಯ ಕೆಲಸ ಅಂದರೆ ! ಕಾಂಗ್ರೆಸ್ಸಿಗರು ಮಾಡಿದ ಹಾಗಲ್ಲ ನಾವು ಮಾಡುವದು. ಎಲ್ಲಾ ಜೋರಾಗಿ, ಜನರ ಮೇಲೆ ಪ್ರಭಾವ ಬೀಳುವ ಹಾಗೆ ಮಾಡಬೇಕಾಗುತ್ತದೆ. ಅಲ್ಲದೆ ನನಗೆ ಕನ್ನಡದಲ್ಲಿ ಪತ್ರವ್ಯವಹಾರ ಮಾಡಿ ಅಭ್ಯಾಸವಿಲ್ಲ. ಎಲ್ಲಾ ಇಂಗ್ಲಿಷಿನಲ್ಲೇ ಮಾಡಬೇಕಾಗುತ್ತದೆ. ಸ್ಟೆನೋಗ್ರಾಫರ್ ಅವಶ್ಯವಾಗಿ ಬೇಕು."

" ತಗೊಳ್ಳಿರಿ, ತಗೊಳ್ಳಿರಿ ಅಣ್ಣಾವರೆ. ನಿಮಗೆಷ್ಟು ಜನರು ಬೇಕೋ

ಅಷ್ಟು ಜನರನ್ನ ನೇಮಿಸಿಕೊಳ್ಳಿರಿ," ಎಂದ ಸಿದ್ಧರಾಮಪ್ಪ. ಅವನ ಮಾತಿಗೆ ಪ್ರತಿಯಾಗಿ ಯಾರೂ ಮಾತನಾಡುವಂತಿರಲಿಲ್ಲ. ಪಕ್ಷದ ಬಗ್ಗೆ ಆಸಕ್ತಿಯನ್ನೆ ಕಳೆದುಕೊಂಡಿದ್ದ ಸದಾಶಿವನೂ ಮೌನವಾಗಿದ್ದ. ಕಾರ್ಯಸಮಿತಿಯಲ್ಲಿ ಅವನೂ ಇರಬೇಕೆಂದು ಚೆನ್ನಬಸಪ್ಪ ಸೂಚಿಸಿದಾಗ ಸದಾಶಿವನೇ ಬೇಡವೆಂದು ಹೇಳಿ ಬಿಟ್ಟ. ಸಾಧ್ಯವಾದ ಮಟ್ಟಿಗೂ ಪಕ್ಷದಿಂದ ದೂರದಲ್ಲೇ ಇರುವುದೆಂದು ಅವನು ಸಂಕಲ್ಪಿಸಿಕೊಂಡಿದ್ದ. ಅವನ ಧೋರಣೆಯನ್ನು ಚೆನ್ನಬಸಪ್ಪ ಒಪ್ಪುತ್ತಿರ ಲಿಲ್ಲ. "ಎಲ್ಲರೂ ಕೂಡಿ ಮಾಡಿದ್ದಾಯಿತು. ಚುನಾವಣೆ ಮುಗಿಯುವ ತನಕ ಏನೇ ಆದರೂ ಎಲ್ಲಾ ಒಂದಾಗೇ ಇರಬೇಕು." ಎಂದು ಅವನ ಅಭಿಪ್ರಾಯ.

ಪಕ್ಷದ ಆರಂಭದ ಆವಶ್ಯಕತೆಗಳಿಗಾಗಿ ಹಣ ಕೂಡಿಸುವ ಪ್ರಸ್ತಾಪ ಹೊರಟಿತು. "ಎಲ್ಲಕ್ಕೂ ಮೊದಲು ಇಲ್ಲಿ ಕೂಡಿರುವ ಶ್ರೀಮಂತರೆಲ್ಲಾ ತಮ್ಮ ತಮ್ಮ ಕಾಣಿಕೆ ಸಲ್ಲಿಸಿಬಿಡಲಿ. ಮುಂದೆ ಬೇರೆಯವರನ್ನು ಕೇಳುವ ಮಾತು," ಎಂದರು ವಿಶಾಲಪ್ಪ.

ಕೂಡಿದ ಜನರಲ್ಲೆಲ್ಲ ದೊಡ್ಡ ಸಾಹುಕಾರನಾಗಿದ್ದವನೆಂದರೆ ಉಗ್ರಪುರದ ಮಹಾಲಿಂಗಪ್ಪ. ಉಗ್ರಪುರದಲ್ಲಿ ಅವನದು ದೊಡ್ಡ ವ್ಯವಹಾರ. ದಲ್ಲಾಳಿ ಅಂಗಡಿ, ಸರಾಫ್ ಅಂಗಡಿ, ಸ್ಟೇಶನರಿ ಅಂಗಡಿ, ಎಣ್ಣೆಯ ಗಿರಣಿಗಳನ್ನಲ್ಲದೆ, ಲೇವಾದೇವಿ ವ್ಯವಹಾರವನ್ನೂ ನಡಸುತ್ತ ಲಕ್ಷಾಧೀಶನೆನಿಸಿಕೊಂಡಿದ್ದವನು ಮಹಾಲಿಂಗಪ್ಪ. ತಮ್ಮ ಪಕ್ಷಕ್ಕೆ ಅಂಥವನ ಸಹಾಯವಿದ್ದರೆ ಒಳ್ಳೆಯದೆಂಬ ದೂರಾಲೋಚನೆಯಿಂದಲೇ ವಿಶಾಲಪ್ಪ ಅವನನ್ನು ಬುಟ್ಟಿಗೆ ಬೀಳಿಸಿದ್ದರು. ಉಗ್ರಪುರ ಮತದಾರಕ್ಷೇತ್ರದಿಂದ ಅವನನ್ನೇ ಹುರಿಯಾಳಾಗಿ ನಿಲ್ಲಿಸುವ ಭರವಸೆಯನ್ನೂ ಕೊಟ್ಟುಬಿಟ್ಟಿದ್ದರು. ನಗರಸಭೆ, ಬ್ಯಾಂಕು, ಸಹಕಾರಸಂಘಗಳ ಅಧ್ಯಕ್ಷನಾಗಿ, ಜಿಲ್ಲಾ ಬೋರ್ಡಿನ ಸದಸ್ಯನಾಗಿ ಮೆರೆದಿದ್ದ ಮಹಾಲಿಂಗಪ್ಪ. ಅಸೆಂಬ್ಲಿ ಸದಸ್ಯನಾಗಿ ಮೆರೆಯುವ ಕನಸು ಕಾಣುತ್ತ ದರಿದ್ರನಾರಾಯಣ ಪಕ್ಷದ ಬಾಲಕ್ಕಂಟಿಕೊಂಡಿದ್ದ. ಅದಕ್ಕಾಗಿ ಹತ್ತಿಪ್ಪತ್ತು ಸಾವಿರ ಖರ್ಚು ಮಾಡಬೇಕಾಗುವುದೆಂಬ ವಿಷಯವನ್ನಾತ ತಿಳಿದಿದ್ದನಾದರೂ "ಇದಕ್ಕೆ ಖರ್ಚು ಮಾಡದಿದ್ದರಿನ್ಯಾತಕ್ಕೆ ಮಾಡೂದು ?" ಎಂದು ಹೇಳಿಕೊಂಡು ಕೈ ಸಡಿಲು ಬಿಟ್ಟು ಖರ್ಚು ಮಾಡಲು ಸಿದ್ಧನಾಗಿದ್ದ.

" ಮೊದಲು ಸಾಹುಕಾರರಿಂದಲೇ ಸುರುವಾಗಲಿ," ಎಂದು ನಗುತ್ತಾ ಹೇಳಿದ ಟೋಪಿ ಶಾಂತಣ್ಣ. ಧನಿಕರನ್ನು ಓಲೈಸುತ್ತಾ ಅವರಿಂದ ಹಣ ಬಿಚ್ಚಿಸುವ ವಿದ್ಯೆಯಲ್ಲಿ ಅವನು ನಿಷ್ಣಾತನಾಗಿದ್ದನು.

" ಈಗ ೧೦೧ ರೂ. ಬರೆದುಕೊಂಡು ಬಿಡಿರಿ. ಮುಂದೆ ಮತ್ತೆ ನೋಡೋಣ," ಎಂದ ಮಹಾಲಿಂಗಪ್ಪ.

" ನೀವೇ ಹೀಗಂದರೆ ಹ್ಯಾಗೆ ಸಾಹುಕಾರರೆ? ಒಬ್ಬ ಟೈಪಿಸ್ಟ್‌ಗೇ ನೂರು ರೂಪಾಯಿ ಸಂಬಳ ಕೊಡಬೇಕಾಗುತ್ತದೆ. ಇನ್ನು ಕಾರಕೂನನ ಸಂಬಳ, ಸ್ಟೆನೋಗ್ರಾಫರ್ ಸಂಬಳ, ಕಾರ್ಯದರ್ಶಿಯ ಸಂಬಳ...."

" ಕಾರ್ಯದರ್ಶಿಗೂ ಸಂಬಳ ಕೊಡಬೇಕಾಗುವದೇನು ?"

" ಸಂಬಳ ಅಂತ ಅಲ್ಲದಿದ್ದರೂ ಅವರ ಖರ್ಚಿಗಾದರೂ ಕೊಡಬೇಕಾಗು ತ್ತದಲ್ಲ. ತಮ್ಮ ಮನೇಕೆಲಸ ಎಲ್ಲಾ ಬಿಟ್ಟು ಪಕ್ಷದ ಕೆಲಸಕ್ಕೇ ನಿಲ್ಲುತ್ತಾರ ವರು. ಪ್ರವಾಸದ ಖರ್ಚೂ ಬಹಳ. ನಾನೂ ಆಗಾಗ ಮುಂಬಯಿ, ಪುಣೆ, ದಿಲ್ಲಿಗಳಿಗೆ ಹೋಗಬೇಕಾಗುವದು-ದೀನದಯಾಳ ಮೊದಲಾದವರನ್ನು ನೋಡು ವದಕ್ಕೆ. ಈಗಲೇ ಹೇಳಿ ಬಿಡುತ್ತೇನೆ. ಮೊದಲಿನಿಂದಲೂ ಫಸ್ಟ್‌ಕ್ಲಾಸಿನಲ್ಲೇ ಪ್ರವಾಸ ಮಾಡುತ್ತ ಬಂದು ಅದೇ ರೂಢಿಯಾಗಿದೆ ನನಗೆ...." ಎಂದರು ವಿಶಾಲಪ್ಪ.

" ಅದನ್ನೆಲ್ಲಾ ಏನು ಹೇಳೂದು ಬಿಡ್ರಿ. ನೀವು ಯಾವ ಕ್ಲಾಸಿನಲ್ಲಿ ಬೇಕಾದರೂ ಹೋಗಬಹುದು. ಬೇಕಾದರೆ ವಿಮಾನದಲ್ಲಿ ಹೋಗಿ ವಿಮಾನದಲ್ಲಿ ಬರಬಹುದು ಯಾರು ಬ್ಯಾಡಂತಾರೆ ನಿಮಗೆ ? " ಎಂದ ಸಿದ್ಧರಾಮಪ್ಪ.

" ಆದರೂ ಮೊದಲೇ ಇದನ್ನೆಲ್ಲಾ ಹೇಳಿ ಬಿಡುವದು ಚಲೋದಪ್ಪಾ. ಮುಂದೆ ಯಾರೂ ಕುರು ಕುರು ಮಾಡಬಾರದು. ಇನ್ನೇನು ಚುನಾವಣೆ ಹತ್ತಿರವೇ ಬಂತು. ಕರ್ನಾಟಕದ ತುಂಬೆಲ್ಲಾ ಸಂಚಾರ ಮಾಡಬೇಕಾಗುತ್ತದೆ. ಪಕ್ಷಕ್ಕೊಂದು ಮೋಟರೂ ಬೇಕಾಗುತ್ತದೆ. "

" ಹೌದೌದು ಮೋಟರು ಜರೂರು ಬೇಕು " ಎಂದು ಸಿದ್ಧರಾಮಪ್ಪನೂ ದನಿಗೂಡಿಸಿದ.

" ಅದಕ್ಕೆಲ್ಲಾ ರೊಕ್ಕ ಬೇಕಲ್ಲಾ ? ಈಗಿಂದೀಗ ಇಪ್ಪತ್ತು ಸಾವಿರವಾದರೂ ಕೂಡಬೇಕು ಕಡುಗಲಿ ! "

" ಹೌದ್ರೀ. ಕೂಡದಿದ್ದರೆ ಕೆಲಸ ನಡೀಬೇಕು ಹ್ಯಾಂಗ? ಏನ್ರೀ ಸಾವುಕಾರರೆ, ಏನಂದಿರಿ ? ನೀವು ಮೊದಲನೇ ಕಂತು ಅಂತ ಸಾವಿರ ರೂಪಾಯಿ ಆದರೂ ಕೊಡಬೇಕು ನೋಡ್ರಿ. "

" ಮಾರಾಯಾ. ಈಗ ನನ್ನ ಹತ್ತರ ಹೆಚ್ಚು ಹಣವಿಲ್ಲ. ಶೇಂಗಾ ಧಾರಣೆ ಬಿದ್ದು ಹೋಗಿ ಈ ವರ್ಷ ಬಹಳ ನಷ್ಟವಾಯಿತು.... "

" ಅರ್ಬನ್ ಬ್ಯಾಂಕೇ ನಿಮ್ಮ ಕೈಯಾಗೈತಿ ಬಿಡಿರಿ. "

" ಬ್ಯಾಂಕಿದ್ದರೇನಾಯಿತೋ. ಅದೇನು ನನ್ನ ಸ್ವಂತದ್ದಲ್ಲ. ಈಗ ಐನೂರು ತಗೊಂಡು ಬಿಡಿರಪ್ಪಾ. ಮುಂದೆ ಚುನಾವಣೆಯ ಕಾಲಕ್ಕೆ ನೋಡೋಣ. "

" ನೀವು ಶಿವಲಿಂಗಯ್ಯನವರೆ ? "

" ನನ್ನದೊಂದು ನೂರು ಬರಕೊಳ್ಳಿರಿ. "

" ನೀವು ಸಾವುಕಾರರೆಲ್ಲಾ ಹೀಂಗ ಮಾಡಿದರ ಹ್ಯಾಂಗ? " ಎಂದು ಏರಿಸಿದ ಧ್ವನಿಯಲ್ಲಿ ನುಡಿದ ಸಿದ್ಧರಾಮಪ್ಪ.

" ಮೆಲ್ಲಕ ಮಾತಾಡು. ನಲವತ್ತೆರಡರ ದರ್ಪ ತೋರಿಸಲು ಬರಬ್ಯಾಡ " ಎಂದು ಶಿವಲಿಂಗಯ್ಯ ಅವನಿಗೆ ಹೇಳಬೇಕಾಗಿ ಬಂದಿತು.

" ಬ್ರಿಟಿಷ್ ಸರಕಾರ ಓಡಿಸೂದಕ್ಕ ಸ್ಟೇಶನ್ ಲೂಟಿ ಮಾಡಿದ ಹಾಂಗ ಕಾಂಗ್ರೆಸ್ ಸರಕಾರ ಓಡಿಸೂದಕ್ಕೂ ಮಾಡೂದಾಗಿದ್ದರ ರೊಕ್ಕದ ಚಿಂತೀನs ಇರುತಿರಲಿಲ್ಲ " ಎಂದು ಒಬ್ಬರು ನಗುತ್ತ ನುಡಿದರು.

ಐವತ್ತು ಅರುವತ್ತು ಜನ ಸೇರಿದ್ದ ಸಭೆಯಲ್ಲಿ ಆ ಕ್ಷಣಕ್ಕೆ ಎಂಟುನೂರು ರೂಪಾಯಿಗಳಷ್ಟು ಹಣ ಕೂಡಿತು. ಮತ್ತೆ ಎರಡು ಸಾವಿರ ವಾಗ್ದಾನ ದೊರೆತುದಾಯಿತು. ಹಣವನ್ನು ಕೋಟಿನ ಜೇಬಿಗೆ ಸೇರಿಸಿ ವಿಶಾಲಪ್ಪ ಉಪಾಹಾರಕ್ಕೆ ಹೇಳಿ ಕಳಿಸಿದರು.

" ಏನು ಮಾಡಿಸೀರಿ ಅಣ್ಣಾವರೆ ? " ಎಂದು ಸಿದ್ಧರಾಮಪ್ಪ ಧ್ವನಿಯೆತ್ತಿದ.

" ಮನೆಯಲ್ಲಿ ಯಾರೂ ಇಲ್ಲಪ್ಪ. ಹೋಟಲಿಗೆ ಹೇಳಿದ್ದೇನೆ. "

" ಹೋಟಲಿಗೆ ಹೇಳುವದಾದರೆ ಏನಾದರೂ ಸೀ ಹೇಳಿರಲ್ಲ! ಬಹಳ ದಣಿವಾಗ್ಯೆತಿ ನನಗೆ. "

" ಏನು ಬೇಕೋ ನಿನಗೆ ಕಡುಗಲಿ ? " ಎಂದು ಕೇಳಿದ ಭೀಮರಾಯಪ್ಪ.

" ಏನಾದರೂ ತರಿಸಿಬಿಡೋ. ಉಂಡಿ, ಮೈಸೂರ್ ಪಾಕು, ಬಾಳೇಹಣ್ಣು, ಪೂರಿಪಲ್ಯ ತರಿಸು. ಎಂಟುನೂರು ರೂಪಾಯಿ ಕೂಡಿದ್ದಾವೆ. ಇಪ್ಪತ್ತು ರೂಪಾಯಿ ಫಳಾರಕ್ಕ ಖರ್ಚು ಮಾಡೂದೇನು ದೊಡ್ಡದಲ್ಲ. "

ಸದಾಶಿವನಿಗೆ ಅಲ್ಲಿ ಕುಳಿತುಕೊಳ್ಳಲು ಮನಸ್ಸಾಗಲಿಲ್ಲ, ಅವನು ಎದ್ದು ಹೊರಡುತ್ತಲೂ ಭೀಮರಾಯಪ್ಪ,

" ಯಾಕ್ರೀ, ಎಲ್ಲಿಗೆ ಹೊರಟಿರಿ ? ಚಾ ಕುಡಿದು ಹೋಗಿರಲ್ಲ ? " ಎಂದ.

" ಇಲ್ಲ. ನಾನು ಚಹ ಕುಡಿಯುವದಿಲ್ಲ. "

" ಚಹ ಬೇಡವಾದರೆ ಬೇಡ. ಫಳಾರ ಮಾಡಬಹುದಲ್ಲ ? "

" ಅದೂ ಬೇಡ " ಎಂದು ನುಡಿದವನೆ ಸದಾಶಿವ ಅಲ್ಲಿ ನಿಲ್ಲದೆ ಹೊರಟು ಬಿಟ್ಟ. ಹಣಮಣ್ಣನೇನೂ ಅವನ ಹಿಂದೆ ಹೊರಡಲಿಲ್ಲ ಬಿಟ್ಟಿ ತಿಂಡಿ ಸಿಗುವಾಗ ಅದನ್ನು ಬಿಟ್ಟು ಹೊರಡುವುದು ದಡ್ಡತನವೆಂದೇ ಅವನು ಭಾವಿಸಿದ್ದ.

ಸದಾಶಿವ ಹೋದ ಬಳಿಕ ವಿಶಾಲಪ್ಪ ಸೋಮಶೇಖರಪ್ಪನವರನ್ನು ಕುರಿತು ಕೇಳಿದರು :

" ನಿಮ್ಮ ಹುಡುಗ ಹೀಗ್ಯಾಕೆ ಮಾಡುತ್ತಾನೆ ? "

" ಅವನು ಮೊದಲಿಂದಲೂ ಹಾಗೇ. "

" ಬಹಾಳ ತತ್ವನಿಷ್ಠ ! " ಎಂದು ಭೀಮರಾಯಪ್ಪ ಅಣಕವಾಡಿದ.

" ಫಳಾರಕ್ಕೂ ಅಡ್ಡ ಬರುತ್ತದೇನು ತತ್ವ ? " ಎಂದ ಶಾಂತಣ್ಣ.

ಸಾಯಂಕಾಲದ ರೈಲಿನಲ್ಲಿ ಊರಿಗೆ ಹೋಗುತ್ತಿದ್ದಾಗ ಚೆನ್ನಬಸಪ್ಪ ಕೇಳಿದ :

" ನೀವು ಹಾಗ್ಯಾಕೆ ಎದ್ದು ಹೋದಿರಿ ಸದಾಶಿವ ? ಎಲ್ಲರಿಗೂ ಬಹಳ ಅಸಹ್ಯವಾಯಿತು. "

" ಅಲ್ಲಿ ಕೂಡಲಿಕ್ಕೂ ನನಗೆ ಅಸಹ್ಯವಾಗಿತ್ತು. ಅಲ್ಲರೀ, ಹೆಸರು ದರಿದ್ರನಾರಾಯಣ ಪಕ್ಷ, ಹೇಳುವದು ರೈತ ಕೂಲಿಕಾರರ ಹೆಸರನ್ನು. ಮೈಸೂರ್‌ಪಾಕು ಉಂಡಿ ಬಾಳೇಹಣ್ಣುಗಳಿಗಾಗಿ ಹಣ ಹಾಳು ಮಾಡಬೇಕೇ? "

" ಯಾರೋ ಹಣ ಕೊಡ್ತಾರೆ, ಯಾರೋ ಹಾಳು ಮಾಡ್ತಾರೆ. ರೈತ ಕೂಲಿಕಾರರೇನು ಕೊಟ್ಟಿಲ್ಲವಲ್ಲರೀ ? ನಿಮಗ್ಯಾಕೆ ಇಷ್ಟು ಸಿಟ್ಟು ? "

" ಅಂತೂ ನನಗೆ ಇಂಥದೆಲ್ಲ ಸರಿಬರುವದಿಲ್ಲ. ರೈತ ಕೂಲಿಕಾರರಿಗೆ ಎರಡು ಹೊತ್ತು ಹೊಟ್ಟೆ ತುಂಬುವಷ್ಟು ರೊಟ್ಟಿ ಅಂಬಲಿ ಕೂಡಾ ಸಿಗುವದಿಲ್ಲ. ಅವರ ಹೆಸರು ಹೇಳುವ ನಾವು ಮೈಸೂರ್‌ಪಾಕು ತಿನ್ನುವದು....ಛೀ... ಛೀ...." ಎಂದ ಸದಾಶಿವ.

ಶಿವಲಿಂಗಯ್ಯನವರು ನಡುವೆ ಬಾಯಿ ಹಾಕಿ ಹೇಳಿದರು :

" ರೈತ ಕೂಲಿಕಾರರು ಏನೇನು ತಿನ್ನುತ್ತಾರನ್ನೂದು ನಿಮಗ ನೆಟ್ಟಗ ಗೊತ್ತಿಲ್ಲ. ಒಬ್ಬೊಬ್ಬ ರೈತ ಕೂಲಿಕಾರ ಚಹಾದಂಗಡಿಯೊಳಗ ನೂರಿನ್ನೂರು ರೂಪಾಯಿ ಸಾಲಾ ಮಾಡಿರುತಾನ. "

" ಒಬ್ಬಿಬ್ಬರ ಮಾತು ಹೇಳಬೇಡಿರಿ. "

" ಒಬ್ಬಿಬ್ಬರ ಮಾತ್ಯಾಕ ? ಊರಿಗೆ ಹೋಗಿ ಎಲ್ಲಾ ರೈತರನ್ನೂ ಕೇಳಿ ನೋಡಿರಿ. ಚಹಾದಂಗಡಿಗೆ ಹೋಗದಿರುವವನೊಬ್ಬನೂ ಸಿಗಾಕಿಲ್ಲ ನಿಮಗ. "

ಆ ಮಾತು ಸ್ವಲ್ಪಮಟ್ಟಿಗೆ ನಿಜವೆಂಬುದನ್ನು ಅಲ್ಲಗಳೆಯುವಂತಿರಲಿಲ್ಲ ಸದಾಶಿವ. ಬೆಳಗಿನಿಂದ ಸಂಜೆಯ ವರೆಗೆ ಚಹಾದಂಗಡಿಗಳಲ್ಲಿಯೆ ಕುಳಿತು, ಇಸ್ಪೀಟಾಡುತ್ತಾ ಚಹಾ ಕುಡಿಯುತ್ತಾ ಸೋಮಾರಿಗಳಾಗಿ ಕಾಲಹರಣ ಮಾಡುತ್ತಿದ್ದ ರೈತರನೇಕರನ್ನು ಅವನೂ ಕಂಡಿದ್ದ, ಕಂಡು ಬೇಸರಪಟ್ಟುಕೊಂಡಿದ್ದ. ಅವರಲ್ಲಿ ನವಚೇತನ ತುಂಬಿ ರೈತಸಂಘಟನೆಯನ್ನು ರೂಪಿಸಲು ಅವನು ಪರಿಶ್ರಮ ಪಟ್ಟದ್ದೆಲ್ಲ ವ್ಯರ್ಥವಾಗಿ ಪರಿಣಮಿಸಿತ್ತು. ತಮ್ಮ ದುಃಸ್ಥಿತಿಯನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಹೋರಾಡಬೇಕೆಂಬ ವಿಚಾರ ಅವರಲ್ಲಾರಿಗೂ ಇರಲಿಲ್ಲ. ಎಂಟು ಹತ್ತು ಎಕರೆ ಭೂಮಿಯನ್ನುಳ್ಳ ಸಣ್ಣ ರೈತರಂತೂ ದೊಡ್ಡ ಜಮೀನ್ದಾರರ ಹಾಗೆಯೆ ನಟಿಸುತ್ತಿದ್ದರು. " ರೈತ ಸಂಘ ಮಾಡಬೇಕು "

ಎಂದು ಸದಾಶಿವ ಹೇಳಿದಾಗ ಆ ರೈತರು ಮುಖ ಹೊರಳಿಸಿ, ಕಣ್ಣಗೊಂಬೆಗಳ ನ್ನೇರಿಸಿ ಬಿಂಕದಿಂದ ಉತ್ತರವೀಯುತ್ತಿದ್ದರು : "ಈ ಸಂಘಾ ಗಿಂಘಾ ತಗೊಂಡು ನಾವೇನು ಮಾಡೂಣು ಬಿಡಪ್ಪಾ. ದೇವರು ಏನು ಕಡಮಿ ಮಾಡಿದಾನ ನಮಗ ? " ಕೋಟ್ಯಧೀಶರನ್ನೂ ನಾಚಿಸುವ ರೀತಿಯಲ್ಲಿ ಮಾತನಾಡುತ್ತಿದ್ದ ಆ ರೈತರನ್ನು ಕಂಡು ಸದಾಶಿವನಿಗೆ ಜುಗುಪ್ಸೆಯೆನ್ನಿಸುವುದರ ಜತೆಗೆ ರೋಷವೂ ಉಕ್ಕಿಬರುತ್ತಿತ್ತು. ಇಂಥ ಜನರಿಗಾಗಿ ತನ್ನ ಸಮಯವನ್ನೂ ಶಕ್ತಿಯನ್ನೂ ವ್ಯಯಿಸುವ ತಾನೊಬ್ಬ ಮೂರ್ಖ ಎಂದೂ ಅವನಿಗೆನ್ನಿಸಿದ್ದುದು ಅನೇಕ ಬಾರಿ. ಆದರಾ ಅನಿಸಿಕೆ ಬಹುಕಾಲ ಉಳಿಯುತ್ತಿರಲಿಲ್ಲ ಅವರು ಹಾಗೆ ವರ್ತಿಸಲು ಅಜ್ಞಾನವೇ ಕಾರಣವೆಂಬ ಅರಿವುಂಟಾದೊಡನೆ ಅವರ ವಿಚಾರವಾಗಿ ಸದಾಶಿವನಿಗೆ ಕನಿಕರವುಂಟಾಗುತ್ತಿತ್ತು. ಆ ಅಜ್ಞಾನವನ್ನು ಕಂಡು ಕೋಪಿಸಿಕೊಳ್ಳುವುದು ತರವಲ್ಲವೆಂದುಕೊಂಡು ಆತ ಮತ್ತೆ ತನ್ನ ಕರ್ತವ್ಯದ ಹಾದಿಯಲ್ಲಿ ನಡೆಯುತ್ತಿದ್ದ.

೧೬

ಆಗಸ್ಟ್ ತಿಂಗಳು ಮುಗಿಯುತ್ತ ಬಂದಿತ್ತು. ಇನ್ನು ನಾಲ್ಕು ತಿಂಗಳಲ್ಲಿಯೆ ಚುನಾವಣೆ ನಡೆಯಬೇಕು. ಅದನ್ನು ಹೋರಾಡುವುದು ಹೇಗೆ ಎಂಬುದೇ ಒಂದು ಸಮಸ್ಯೆಯಾಗಿತ್ತು ಸೋಮಶೇಖರಪ್ಪನವರಿಗೆ. ಕರ್ನಾಟಕದ ನಾಲ್ಕು ಜಿಲ್ಲೆಗಳ ವಿಚಾರ ಹಾಗಿರಲಿ, ಕಳ್ಳೇಕಾಯಿ ಜಿಲ್ಲೆಯೊಂದರಲ್ಲಿಯೆ ಸರಿಯಾಗಿ ಸಂಘಟನೆ ಮಾಡುವುದಕ್ಕೂ ಸಾಧ್ಯವಾಗಿರಲಿಲ್ಲ. ಹೆಸರಿಗೆ ಮಾತ್ರ ಅವರು ಪ್ರಧಾನ ಕಾರ್ಯದರ್ಶಿಯಾಗಿದ್ದರು. ಅಧಿಕಾರವೆಲ್ಲವೂ ವಿಶಾಲಪ್ಪನವರ ಕೈಯಲ್ಲಿತ್ತು. ಪಕ್ಷದ ಸಂಘಟನೆಗಾಗಿ ಸೋಮಶೇಖರಪ್ಪ ಮುಂದೆ ಮಾಡುತ್ತಿದ್ದ ಸೂಚನೆಗಳನ್ನು ಕೃತಿಗಿಳಿಸಲು ಯಾರೂ ಯತ್ನಿಸುತ್ತಿರಲಿಲ್ಲ. ತಾಲೂಕು ಸಮಿತಿ, ಗ್ರಾಮ ಸಮಿತಿಗಳನ್ನು ರಚಿಸಿ ಸದಸ್ಯರನ್ನು ಕಲೆಹಾಕಬೇಕೆಂದು ನಾಲ್ಕು ತಿಂಗಳ ಹಿಂದೆಯೆ ಗೊತ್ತಾಗಿದ್ದಿತಾದರೂ ಆ ನಿಟ್ಟಿನಲ್ಲಿ ಅದುವರೆಗೂ ಕೊಂಚವೂ ಕಾರ್ಯವಾಗಿರಲಿಲ್ಲ. ಕಾರ್ಯಕರ್ತರೆಲ್ಲ ಮುಖಂಡರಾಗಿ ಮೆರೆಯಲು ಯತ್ನಿಸುತ್ತಿದ್ದರೇ ವಿನಾ ಕಾರ್ಯ ಮಾಡಲು ಶ್ರಮಿಸುತ್ತಿರಲಿಲ್ಲ. ಭೀಮರಾಯಪ್ಪನೂ ಅಷ್ಟೆ. "ಶಂಕರವಿಲಾಸ ಭೋಜನಾಲಯ" ದಲ್ಲಿ ಊಟ ಹೊಡೆಯುತ್ತ "ರಮಾವಿಲಾಸ" ದಲ್ಲಿ ಚಹ ಸೇವಿಸುತ್ತ ವಿಶಾಲಪ್ಪನವರ ಬಂಗಲೆಯಲ್ಲಿ ಸುಖವಾಗಿ ಕಾಲ ಕಳೆಯುತ್ತಿದ್ದ.

ಆಗಾಗ ಅಲ್ಲಿ ಇಲ್ಲಿ ಪಕ್ಷದ ಪ್ರಚಾರ ಸಭೆ ನಡೆಯುತ್ತಿದ್ದುವು. ಪಕ್ಷದ ಕಾರ್ಯಕರ್ತರೆಲ್ಲ ಆ ಸಭೆಗಳಿಗೆ ಧಾವಿಸಿ ಬಂದು ತಮ್ಮ ವಕ್ತೃತ್ವ ಕಲೆಯನ್ನು ಪ್ರದರ್ಶಿಸಿ ಹೋಗುತ್ತಿದ್ದರು. ಮತ್ತೆ ಇನ್ನೊಂದು ಕಡೆ ಸಭೆ ಸೇರುವ ವರೆಗೂ ವ್ಯರ್ಥ ಕಾಲಹರಣವಾಗುತ್ತಿತ್ತು. ಸಭೆಗಳನ್ನು ಸೇರಿಸಿ ಭಾಷಣ ಹೊಡೆದು ಬಿಟ್ಟರೆ ಸಂಘಟನೆಯಾದಂತೆಯೆ ಎಂದು ಅವರು ತಿಳಿದುಕೊಂಡಿದ್ದರು.

“ ಸದಸ್ಯರನ್ನು ಮಾಡಿರಪ್ಪ. ಬರೀ ಭಾಷಣದಿಂದ ಉಪಯೋಗವಿಲ್ಲ” ಎಂದು ಸೋಮಶೇಖರಪ್ಪ ಹೇಳಿದಾಗಲೆಲ್ಲ ಸಿದ್ಧರಾಮಪ್ಪ ವಿಚಿತ್ರವಾಗಿ ನಕ್ಕು, “ ಭಾಷಣ ಕೇಳಿದವರೆಲ್ಲಾ ಸದಸ್ಯರಾದ ಹಾಗೇ ಅಲ್ಲೇನ್ರಿ ? ” ಎನ್ನುತ್ತಿದ್ದ.

ಆರಂಭದ ದಿನಗಳಲ್ಲಿ ಕೂಡಿದ ಹಣವೆಲ್ಲ ಆಗಲೆ ಖರ್ಚಾಗಿ ಹೋಗಿತ್ತು. ಒಂದೆರಡು ಊರುಗಳಲ್ಲಿ ಜನರು ಅರ್ಪಿಸಿದ್ದ ಸಾವಿರಾರು ರೂಪಾಯಿಗಳು ಏನಾದುವೆಂಬುದು ಯಾರಿಗೂ ·ಗೊತ್ತಾಗಿರಲಿಲ್ಲ. ಬಂದ ಹಣವೆಲ್ಲ ವಿಶಾಲಪ್ಪನವರ ಹತ್ತಿರವೊ ಸಿದ್ಧರಾಮಪ್ಪನ ಹತ್ತಿರವೊ ಇರುತ್ತಿತ್ತು. ಖರ್ಚುವೆಚ್ಚಗಳ ಲೆಕ್ಕವನ್ನಿಡುವ ಅಭ್ಯಾಸ ಅವರಿಬ್ಬರಿಗೂ ಇರಲಿಲ್ಲ. ಲೆಕ್ಕ ಪತ್ರಗಳನ್ನಿಡುವುದೊಳ್ಳೆಯದೆಂದು ಒಂದು ಬಾರಿ ಸೋಮಶೇಖರಪ್ಪ ಅಂಜುತ್ತಂಜುತ್ತ ಹೇಳಿದಾಗ ಸಿದ್ಧರಾಮಪ್ಪ ಕೆರಳಿ, “ ಲೆಕ್ಕ ಲೆಕ್ಕ ಅಂತ ಯಾಕ ಬಡಕೋಶೀರಿ ? ಕೂಡಿದ ಹಣವಾದರೂ ಎಷ್ಟು ? ಏನೋ ಲಕ್ಷಾಂತರ ಕೂಡಿದ್ದರೆ ಮಾತು ಬ್ಯಾರೆ. ನೂರಿನ್ನೂರು ರೂಪಾಯಿಗೆ ಏನು ತಲೆ ಇಡೂದು ಲೆಕ್ಕ ? ” ಎಂದು ಗದರಿಸಿಕೊಳ್ಳುತ್ತಿದ್ದ. ಸಭ್ಯರಾದ ಸೋಮಶೇಖರಪ್ಪ ಅಷ್ಟಕ್ಕೇ ಮೌನ ತಳೆದು ಬಿಡುತ್ತಿದ್ದರು.

ಕೈಯಲ್ಲಿದ್ದ ಕಾಸೆಲ್ಲ ಮುಗಿಯುವ ವರೆಗೂ ವಿಶಾಲಪ್ಪ ಹಣ ಕೂಡಿಸಲು ಹೊರಡದೆ ಸುಮ್ಮನಿದ್ದರು. ಮುಂದೆ ಮಳೆಗಾಲಕ್ಕಾರಂಭವಾಗಿ ಪ್ರವಾಸ ಕಷ್ಟದಾಯಕವಾಗಲು ಮತ್ತೆ ಮೂರು ತಿಂಗಳು ಕಳೆದು ಹೋದುವು. ಚುನಾವಣೆ ಹತ್ತಿರ ಬಂದಿತೆನ್ನುವಾಗ ವಿಶಾಲಪ್ಪ ದಿಗಿಲುಗೊಂಡು ಹಣ ಶೇಖರಿಸಲು ಓಡಾಡಬೇಕಾಯಿತು. “ ಒಮ್ಮೆ ಜಿಲ್ಲೆಯನ್ನೆಲ್ಲ ಸುತ್ತಿ ಬಂದರೆ ಲಕ್ಷರೂಪಾಯಿ ಸುಲಭವಾಗಿ ಕೂಡುವವು” ಎಂದು ಅನೇಕ ಬಾರಿ ಜಂಬ ಕೊಚ್ಚಿಕೊಂಡಿದ್ದ ವಿಶಾಲಪ್ಪನವರಿಗೆ ವಾಸ್ತವವಾಗಿ ದೊರೆತ ಅನುಭವ ತುಂಬಾ ಕಟುವಾದುದಾಗಿತ್ತು. ಹಣ ಕೂಡಬೇಕಾಗಿದ್ದುದು ವ್ಯಾಪಾರಿಗಳಿಂದ. “ ಏನು ಮಾಡೂದು ಅಣ್ಣಾವರೆ. ವ್ಯಾಪಾರ ಎಲ್ಲಾ ಮಂದಿಯಾಗ್ಯೈತಿ ” ಎಂದು ನೆಪ ಹೇಳಿ ಅವರು ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಹತ್ತಿಪ್ಪತ್ತು ರೂಪಾಯಿ ಕೊಟ್ಟು ಕೈಮುಗಿಯುತ್ತಿದ್ದರು. ಸಾವಿರ ರೂಪಾಯಿ ಕೊಡಲು ಸಮರ್ಥನಾದ ವ್ಯಾಪಾರಿಯೂ ಐವತ್ತು ರೂಪಾಯಿಗಳಲ್ಲಿಯೆ ಮುಗಿಸುತ್ತಿದ್ದ. ಒಂದೆರಡು ಊರುಗಳಲ್ಲಿ ಅಂಥ ಅನುಭವ

ಬರುತ್ತಲೂ ವಿಶಾಲಪ್ಪನವರಿಗೆ ಬಲು ಬೇಸರಕ್ಕಿಟ್ಟುಕೊಂಡಿತು. ಭೀಮರಾಯಪ್ಪನೊಡನೆ ಮಾತನಾಡುತ್ತಾ, " ನಮ್ಮಂಥ ಮುಖಂಡರು ಹೋಗಿ ಹತ್ತಿಪ್ಪತ್ತು ರೂಪಾಯಿಗೆ ಕೈಯೊಡ್ಡುವದು ಮಾನಗೇಡಿತನ ಅಲ್ಲವೇ ? " ಈ ಜನರಿಗೆ ನಮ್ಮ ಕಿಮ್ಮತ್ತು ಏನು ಗೊತ್ತಾದೀತು ? " ಎಂದು ಗೊಣಗಿಕೊಂಡರು.

" ಗೆದ್ದೆತ್ತಿನ ಬಾಲ ಹಿಡಿಯುವ ಜಾತಿ ಇದು ವ್ಯಾಪಾರಿಗಳದು. ನಮಗ ಹತ್ತು ರೂಪಾಯಿ ಕೊಡುವ ಇವೇ ವ್ಯಾಪಾರಿಗಳೇ ಕಾಂಗ್ರೆಸ್ಸಿಗರು ಬಂದಾಗ ಸಾವಿರಾರು ರೂಪಾಯಿ ಕೊಡುತ್ತಿದ್ದಾರಂತೆ. "

" ಕಂಟ್ರೋಲು ತೆಗೆದು ಹಾಕುತೇವೆ ಅಂತ ಕಾಂಗ್ರೆಸ್ಸಿಗರೂ ವಚನ ಕೊಡುತ್ತಿದ್ದಾರಲ್ಲ. ಈ ಬಣಜಿಗರಿಗೆ ಅಷ್ಟಾದರೆ ಸಾಕಾಯಿತು. ಕಾಂಗ್ರೆಸ್ಸನ್ನು ಬಾಯಿಗೆ ಬಂದ ಹಾಗೆ ಬಯ್ಯುತ್ತಿದ್ದವರೇ ಇಂದು ಮತ್ತೆ ಅವರಿಗೇ ಹಣ ಕೊಡುತ್ತಿದ್ದಾರೆ. ನಾಚಿಕೆಯಿಲ್ಲದ ಭಂಡರು ! ಇಂಥವರನ್ನು ನಂಬಿಕೊಂಡು ನಾನು ಪಕ್ಷ ಮಾಡಿದ್ದೇ ದೊಡ್ಡ ತಪ್ಪಾಯಿತು. "

ಸಾಮಾನ್ಯ ಜನತೆಯನ್ನು ನಂಬಿ, ಅವರನ್ನು ಸಂಘಟಿಸಿ ಪಕ್ಷವನ್ನು ಬಲಪಡಿಸಬೇಕೆಂಬ ಬುದ್ಧಿ ಆಗಲೂ ಬರಲಿಲ್ಲ ವಿಶಾಲಪ್ಪನವರಿಗೆ. ತಮ್ಮ ದೈವವನ್ನು ಶಪಿಸುತ್ತ ಅವರು ಬಂಗಲೆಯಲ್ಲಿ ಕುಳಿತುಕೊಂಡರು. ಹಣ ದೊರಕಿಸಲು ಸುಲಭವಾದ ಉಪಾಯಗಳನ್ನು ಯೋಚಿಸುವುದು ಅಗತ್ಯವಾಯಿತು. ಇನ್ನು ಹಣ ಸಿಕ್ಕುವುದಾದರೆ ಹುರಿಯಾಳುಗಳಿಂದ ಸಿಕ್ಕಬೇಕು. ಪ್ರತಿಯೊಂದು ಮತದಾರ ಕ್ಷೇತ್ರಕ್ಕೂ ಸಾಹುಕಾರರನ್ನೆ ನಿಲ್ಲಿಸುವುದು, ಚುನಾವಣೆಯ ಖರ್ಚಿಗಾಗಿ ಅವರಿಂದ ಕಾಣಿಕೆ ಎತ್ತುವುದು, ಅದನ್ನೆಲ್ಲ ಉಳಿಸಿಕೊಂಡು ತನ್ನ ಖರ್ಚು ಸಾಗಿಸುವುದು. ಅದನ್ನು ಬಿಟ್ಟರೆ ಬೇರೆ ಮಾರ್ಗವಿರಲಿಲ್ಲ. ತನ್ನೊಬ್ಬನ ಚುನಾವಣೆಯ ಖರ್ಚಿಗೇ ಏಳೆಂಟು ಸಾವಿರ ಬೇಕಾಗುವುದು. ತನ್ನ ಹತ್ತಿರ ಒಡಕು ಕವಡೆಯೂ ಇಲ್ಲ. ಆದುದರಿಂದ....

ಧನಿಕ ಆಸಾಮಿಗಳನ್ನು ಬಲೆಗೆ ಬೀಳಿಸಿಕೊಳ್ಳುವ ಕಾಯಕ ಅಂದಿನಿಂದ ಮೊದಲಾಯಿತು. ಕಾಂಗ್ರೆಸ್ ಚೀಟಿಯನ್ನು ದೊರಕಿಸಲಾರದ ಸಿರಿವಂತರೆಲ್ಲ ದರಿದ್ರನಾರಾಯಣ ಪಕ್ಷದ ಚೀಟಿಗಾಗಿ ಹಾತೊರೆಯತೊಡಗಿದರು. ವಿಶಾಲಪ್ಪನವರ ಬಂಗಲೆಯ ಮುಂದೆ ಕಾರುಗಳ ಓಡಾಟಕ್ಕಾರಂಭವಾಯಿತು. ಭೀಮ

ರಾಯಪ್ಪ, ಶಾಂತಣ್ಣ ಮೊದಲಾದವರು ಉತ್ಸಾಹದಿಂದ ಎದೆಯುಬ್ಬಿಸಿಕೊಂಡು ಅಲೆಯತೊಡಗಿದರು. ಹುರಿಯಾಳುಗಳಾಗ ಬಯಸುತ್ತಿದ್ದವರಿಂದ ಹಣ ಸೆಳೆಯುವ ಮಹಾ ಕಾರ್ಯಕ್ಕಾರಂಭವಾಯಿತು. ಈ ವಿಷಯದಲ್ಲಿ ಕಾರ್ಯ ಸಮಿತಿಯ ಸಲಹೆ ಪಡೆಯುವ ಗೊಡವೆಗೆ ಹೋಗದೆ ವಿಶಾಲಪ್ಪನವರು, ಹೆಚ್ಚು ಹಣ ಕೊಡಲು ಸಿದ್ಧರಾದ ಹುರಿಯಾಳುಗಳನ್ನು ಚುನಾವಣೆಗೆ ನಿಲ್ಲಿಸುವ ಎತ್ತುಗಡೆ ಮಾಡತೊಡಗಿದರು.

ಸಾಮಾನ್ಯ ಜನತೆಯ ತಿರಸ್ಕಾರಕ್ಕೆ ಪಾತ್ರರಾಗಿದ್ದ ಹಣವಂತರನ್ನು ಚುನಾವಣೆಗೆ ನಿಲ್ಲಿಸಿದರೆ ಪಕ್ಷದ ಹೆಸರು ಕೆಡುವುದೆಂಬುದೂ, ಅಪಜಯ ಪ್ರಾಪ್ತವಾಗುವುದು ಖಂಡಿತವೆಂಬುದೂ ಸೋಮಶೇಖರಪ್ಪನವರಿಗೆ ಚೆನ್ನಾಗಿಯೆ ಗೊತ್ತಿದ್ದಿತು. ತನ್ನನ್ನು ಒಂದು ಬಾರಿಯೂ ಕೇಳದೆ ವಿಶಾಲಪ್ಪ, ಅನರ್ಹರನ್ನೂ ಅಯೋಗ್ಯರನ್ನೂ ಹುರಿಯಾಳುಗಳನ್ನಾಗಿ ನಿಲ್ಲಿಸುವ ಯತ್ನದಲ್ಲಿದ್ದುದನ್ನು ಕಂಡು ಬಲು ಬೇಸರಗೊಂಡ ಸೋಮಶೇಖರಪ್ಪನವರು ಪಕ್ಷದ ಕಾರ್ಯದರ್ಶಿ ಪದಕ್ಕೆ ರಾಜೀನಾಮೆ ಕೊಟ್ಟು ಕೈಕಟ್ಟಿಕೊಂಡು ಕುಳಿತುಬಿಟ್ಟರು. ವಿಶಾಲಪ್ಪನವರೇನೂ ಹೆದರಲಿಲ್ಲ ಕಾರ್ಯದರ್ಶಿ ಪದಕ್ಕಾಗಿ ನಾಲಗೆ ತೆಗೆದು ಕಾದು ಕುಳಿತಿದ್ದ ಶಾಂತಣ್ಣನನ್ನು ಸೋಮಶೇಖರಪ್ಪನವರ ಬದಲು ನೇಮಿಸಿಕೊಂಡು ತಮ್ಮ ಕಾಯಕವನ್ನು ಮುಂದುವರೆಸಿದರು.

ಸೋಮಶೇಖರಪ್ಪ ರಾಜೀನಾಮೆಯಿತ್ತುದು ಶಿವಲಿಂಗಯ್ಯನವರಿಗೆ ಸರಿಬರಲಿಲ್ಲ.

" ಇನ್ನೂ ಚುನಾವಣೆ ಮುಗಿದಿಲ್ಲ. ಈಗಲೇ ಪಕ್ಷದಾಗ ಒಡಕು ಹುಟ್ಟಿಬಿಟ್ಟಿತಂತ ಕಾಂಗ್ರೆಸಿನವರು ಅಪಪ್ರಚಾರ ಮಾಡೂದಕ್ಕ ಹಾದಿ ಮಾಡಿಕೊಟ್ಟಿರಲ್ಲ! " ಎಂದು ಅವರು ಆಕ್ಷೇಪಿಸಿದರು.

" ವಿಶಾಲಪ್ಪ ಎಲ್ಲಾ ಕೆಡಿಸಿ ರಾಡಿ ಮಾಡುತ್ತಿದ್ದಾರೆ. ನಾಳೆ ಅಪಯಶ ಬರುವದು ಖಂಡಿತ. ಅದಕ್ಕೆ ನಾನೂ ಯಾಕೆ ಹೊಣೆಗಾರನಾಗಬೇಕು ? "

" ಏನು ಮಾಡೂದು ವಕೀಲರೆ! ವಿಶಾಲಪ್ಪನ ಸ್ವಭಾವವೇ ಹಾಂಗೈತಿ. ಯಾರು ಹೇಳಿದರೂ ಕೇಳೂದಿಲ್ಲ ಅವ. ನಾವಾದರೂ ಸಹಿಸಿಕೊಂಡು ಹೋಗಬೇಕಲ್ಲ. ಪಕ್ಷ ಹಾಳಾಗಬಾರದು ಅಂತ. "

ಪಕ್ಷದ ಕಾರ್ಯದರ್ಶಿ ಪದಕ್ಕೆ ಸೋಮಶೇಖರಪ್ಪ ರಾಜೀನಾಮೆಯಿತ್ತ ವಿಷಯವನ್ನು ಕಾಂಗ್ರೆಸ್ ಪಕ್ಷಪಾತಿ ಪತ್ರಿಕೆಗಳು ದಪ್ಪಕ್ಷರಗಳಲ್ಲಿ ಪ್ರಕಟಿಸಿದುವು. "ದರಿದ್ರನಾರಾಯಣ ಪಕ್ಷ ಈಗಾಗಲೆ ಒಡೆದು ಇಬ್ಭಾಗವಾಗಿದೆ. ಸೋಮಶೇಖರಪ್ಪನವರು ಪಕ್ಷಕ್ಕೇ ರಾಜೀನಾಮೆ ಕೊಟ್ಟು ಮತ್ತೆ ಕಾಂಗ್ರೆಸ್ ಸೇರಿಕೊಂಡು ಕಾಂಗ್ರೆಸ್ಸಿನ ಪರವಾಗಿಯೆ ಚುನಾವಣೆಗೆ ನಿಲ್ಲುವ ವಿಚಾರದಲ್ಲಿರುವರೆಂದೂ ವದಂತಿಯಿದೆ" ಎಂದೂ ಬರೆಯಿತು ಒಂದು ಪತ್ರಿಕೆ.

ಅದನ್ನೋದಿದ ವಿಶಾಲಪ್ಪ ಕುತ್ಸಿತ ನಗು ಬೀರುತ್ತ ನುಡಿದರು:

"ಸೋಮಪ್ಪ, ಹಾಗೆ ಮಾಡಿದರೂ ಮಾಡುವವನೇ. ಅಲ್ಲವೇನೋ ಭೀಮರಾಯಿ?"

"ಅವ ಮೊದಲಿಂದಲೂ ಹಾಗೇ. ಬಹಳ ಚಂಚಲ ಬುದ್ಧಿಯವನು. ಅಂಥವ ಏನು ಮಾಡಲಿಕ್ಕಿಲ್ಲ ಅಣ್ಣಾವರೆ?"

ಸೋಮಶೇಖರಪ್ಪ ಚಂಚಲ ಮನಸ್ಕರೆಂಬುದೇನೊ ವಾಸ್ತವಾಂಶವೆ ಆಗಿತ್ತು. ದರಿದ್ರನಾರಾಯಣ ಪಕ್ಷದ ಪರಲು ಹರಿದುಕೊಂಡು ಪುನಃ ಕಾಂಗ್ರೆಸ್ ಸೇರಬೇಕೆಂಬ ವಿಚಾರವೂ ಅವರ ಮನಸ್ಸಿನಲ್ಲಿ ಅನೇಕ ಬಾರಿ ಸುಳಿದು ಹೋಗಿತ್ತು. ಆದರೆ, ಅಂಥ ಹೆಜ್ಜೆಯಿಡಲು ಆವಶ್ಯಕವಾದ ಮನೋಧೈರ್ಯ ಅವರಲ್ಲಿರಲಿಲ್ಲ. ಜನರಲ್ಲಿ ನಗೆಪಾಟಲಾಗಬಹುದಲ್ಲಾ ಎಂಬ ಭೀತಿ. ಇಪ್ಪತ್ತೈದು ವರ್ಷಗಳ ಸೇವೆಯಿಂದ ಗಳಿಸಿದ ಕೀರ್ತಿಯನ್ನು ಒಂದು ವರ್ಷದಲ್ಲಿ ಕಳೆದುಕೊಳ್ಳಬಾರದು. ಯಾವುದೋ ವಿಷಗಳಿಗೆಯಲ್ಲಿ ಕಾಂಗ್ರೆಸ್ ತ್ಯಜಿಸಿದ್ದಾಯಿತು, ದರಿದ್ರನಾರಾಯಣ ಪಕ್ಷ ಹೂಡಿದ್ದಾಯಿತು. ವಿಶಾಲಪ್ಪ ಬಂದು ಸೇರಿಕೊಳ್ಳದಿದ್ದಲ್ಲಿ ಎಲ್ಲವೂ ಸರಿಯಾಗಿಯೆ ನಡೆಯಬಹುದಾಗಿತ್ತು. ಅವನು ಪಿಶಾಚದಂತೆ ಬಂದು ಎಲ್ಲವನ್ನೂ ತನ್ನ ಮುಷ್ಟಿಯಲ್ಲಿ ಹಿಡಿದುಕೊಂಡು ಪಕ್ಷವನ್ನು ಕೆಡಿಸಿಬಿಟ್ಟ. ಆದುದು ಆಗಿಹೋಯಿತು. ಚುನಾವಣೆ ಮುಗಿಯುವವರೆಗಂತೂ ತಾನು ಮೂಗು ಕಟ್ಟಿಕೊಂಡು ಸುಮ್ಮನಿರಬೇಕು.

ನೀಲಮ್ಮನವರ ಕಾಹಿಲೆ ತೊಲಗುವ ಚಿಹ್ನೆಗಳೂ ಕಾಣಿಸುತ್ತಿರಲಿಲ್ಲ. ಪಕ್ಷದ ಚಟುವಟಿಕೆಗಳಲ್ಲಿ ತೊಡಗಿಕೊಂಡಂದಿನಿಂದ ವಕೀಲಿ ವೃತ್ತಿಯ ಸಂಪಾದನೆಗೂ ಸೊನ್ನೆ ಬಿದ್ದಿತ್ತು. ಖರ್ಚುಗಳು ಮಾತ್ರ ದಿನದಿಂದ ದಿನಕ್ಕೆ ಬೆಳೆಯು

ತ್ತಿದ್ದವು. ಮತ್ತೊಂದು ಹೊಲವನ್ನು ಆಧಾರವಾಗಿರಿಸಿ ಸಾಲ ಮಾಡಬೇಕಾಗಿ ಬಂದಿತ್ತು.

" ಹಾಳು ಪಕ್ಷವನ್ನಂತೂ ಮಾಡಿದ್ದಾಯ್ತಲ್ಲ ನೀಲಾ. ಇನ್ನು ಚುನಾವಣೆಯ ಖರ್ಚು ಬೇರೆ. ಅದರಲ್ಲಿ ಏನಾಗುತ್ತದೋ ಯಾರಿಗೆ ಗೊತ್ತು. ಚುನಾವಣೆಗೆ ನಾನು ನಿಲ್ಲಬಾರದೆಂದೇ ವಿಚಾರ ಮಾಡುತ್ತಿದ್ದೇನೆ " ಎಂದು ಅವರೊಮ್ಮೆ ಹೇಳಿದಾಗ ನೀಲಮ್ಮನವರು,

" ಇದೇನು ಹೀಗೆ ಆಡುತ್ತೀರಿ ? ಆರಿಸಿ ಬರುವ ಬಗ್ಗೆ ಸಂಶಯವೇ ? ನೀವು ಆರಿಸಿ ಬರದಿದ್ದರಿನ್ನಾರು ಬಂದಾರು ? ಎಷ್ಟೇ ಖರ್ಚಾಗಲಿ, ಚುನಾವಣೆಗೆ ನಿಲ್ಲುವ ವಿಚಾರ ಮಾತ್ರ ಬಿಡಕೂಡದು " ಎಂದು ಹೇಳಿದ್ದಳು.

# ೧೭

ತನ್ನ ರೈತ ಸಂಘಕ್ಕಿಂತ ದರಿದ್ರನಾರಾಯಣ ಪಕ್ಷದ ಗದ್ದಲವೇ ಹೆಚ್ಚಾಗುತ್ತಲೂ ಮೂರುಸಾವಿರಪ್ಪನಿಗೆ ತಳಮಳವಾಗತೊಡಗಿತು. ಅವನು ಹೋದ ಕಡೆಗಳಲ್ಲೆಲ್ಲ, ಭೀಮರಾಯಪ್ಪ, ವೀರಣ್ಣರ ವಕ್ತೃತ್ವ ಕಲೆಯನ್ನು ಕುರಿತಾದ ಪ್ರಶಂಸೆಯನ್ನೆ ಕೇಳಬೇಕಾಗಿ ಬರುತ್ತಿತ್ತು.

“ ಭೀಮರಾಯಪ್ಪನ್ನ ಮೀರಿಸುವ ಭಾಷಣಕಾರರೇ ಇಲ್ಲ ಬಿಡಪ್ಪಾ ನಮ್ಮ ನಾಡಿನಾಗ ” ಎಂದು ಹೊಗಳುತ್ತಿದ್ದರು ಜನ.

ಮೂರುಸಾವಿರಪ್ಪ ಅಸಹನೆಯಿಂದ ಮೂಗು ಮುರಿದು ಎದ್ದು ಬರುತ್ತಿದ್ದ.

ದರಿದ್ರನಾರಾಯಣ ಪಕ್ಷದ ಪ್ರಾಬಲ್ಯ ಹೀಗೇ ಹೆಚ್ಚುತ್ತ ಹೋದಲ್ಲಿ ತನ್ನ ಮುಖಂಡತ್ವ ಉಳಿಯಲಾರದು, ಚುನಾವಣೆಯಲ್ಲಿ ತಾನು ಗೆದ್ದು ಬರಲೂ ಸಾಧ್ಯವಾಗಲಾರದು ಎಂದು ಮನವರಿಕೆಯಾಗುತ್ತಲೂ ಮೂರುಸಾವಿರಪ್ಪ ಕಳ್ಳೀಕಾಯಿಗೆ ಧಾವಿಸಿ ಬಂದು ‘ ಲಿಂಗವೀರ ’ ವಾರ ಪತ್ರಿಕೆಯ ಗಂಗಾಧರ ಶಾಸ್ತ್ರಿಯ ಸಲಹೆ ಕೋರಿದ.

“ ನನ್ನ ಪೇಪರಿರುವ ತನಕ ನೀವ್ಯಾಕ ಕಾಳಜೀ ಮಾಡ್ತೀರಿ ಬಿಡಿರೀ ” ಎಂದು ನಗುತ್ತಾ ಹೇಳಿದ ಶಾಸ್ತ್ರಿ.

“ ನೀವಿಲ್ಲಿ ವೋಟರ್‌ಲಿಸ್ಟ್ ಪ್ರಿಂಟ್ ಮಾಡುತ್ತಾ ಕುಂತುಬಿಟ್ಟರಿ. ಅತ್ತ ಆ ಪಕ್ಷದ ಹಾವಳಿ ನಡದೈತಿ. ”

“ ಸ್ವಲ್ಪ ಸಮಾಧಾನ ತಾಳಪ್ಪಾ. ಇನ್ನೊಂದೆರಡು ವಾರದ ಕೆಲಸವಷ್ಟೆ. ಈ ವೋಟರ್ ಲಿಸ್ಟು ಮುಗೀತು ಅಂದರೆ ಖಾಲಿ ಆಗಿಬಿಡ್ತೇನೆ. ಆ ಮ್ಯಾಲ ಕೈತೊಳಕೊಂಡು ಬೆನ್ನು ಹತ್ತಿದರಾಯ್ತು ವಿಶಾಲಪ್ಪಗ. ”

ಮತದಾರರ ಯಾದಿಯ ಮುದ್ರಣದ ನಿಮಿತ್ತವಾಗಿ ಎರಡು ವಾರ ಪತ್ರಿಕೆಗೆ ರಜ ಕೊಟ್ಟುಬಿಟ್ಟಿದ್ದ ಗಂಗಾಧರಶಾಸ್ತ್ರಿ. ಚುನಾವಣೆಯ ಕಾಲಕ್ಕೆ ಪತ್ರಿಕೆಗಳ ವೈರ ಕಟ್ಟಿಕೊಳ್ಳುವುದು ಮುತ್ಸದ್ದಿತನವಲ್ಲವೆಂಬ ವಿಚಾರದಿಂದ ಕಾಂಗ್ರೆಸ್ ನಾಯಕರೊಬ್ಬರು ಸಂಧಾನ ನಡಸಿ, ಗಂಗಾಧರಶಾಸ್ತ್ರಿಯ ಮುದ್ರಣಾಲಯಕ್ಕೂ ಮತದಾರರ ಯಾದಿಯ ಮುದ್ರಣ ಕಾರ್ಯ ಕೊಡಿಸಿದ್ದರು. ಒಂದೇ ಒಂದು ತಿಂಗಳಿನಲ್ಲಿ ಮುಗಿಯುವ ಆ ಕೆಲಸದಿಂದ ಶಾಸ್ತ್ರಿಗೆ ಒಂದು ಒಂದೂವರೆ ಸಾವಿರ ರೂಪಾಯಿ ಲಾಭ ಬರುವಂತಿದ್ದಿತು. “ ಕಾಂಗ್ರೆಸ್ಸನ್ನು ಟೀಕಿಸದಿದ್ದರೆ ಇನ್ನೂ ಸಾವಿರ ರೂಪಾಯಿಗಳ ಕೆಲಸ ಕೊಡಿಸುತ್ತೇನೆ. ಹುರಿಯಾಳುಗಳಿಂದಲೂ ಸಹಾಯ ಮಾಡಿಸುತ್ತೇನೆ ” ಎಂದು ಹೇಳಿ ಶಾಸ್ತ್ರಿಗೆ ಆಸೆ ತೋರಿಸಿದ್ದರು ಆ ನಾಯಕರು. ಕಾಸೆಂದರೆ ಬಾಯಿ ಬಾಯಿ ಬಿಡುವುದು ಶಾಸ್ತ್ರಿಯ ಸ್ವಭಾವ. ಅಂತೆಯೆ, ಕೆಲದಿನಗಳಿಂದ ‘ ಲಿಂಗವೀರ ’ ದಲ್ಲಿ ಕಾಂಗ್ರೆಸ್ಸಿನ ವಿರುದ್ಧವಾಗಿ ಒಂದು ಶಬ್ದವೂ ಕಾಣಿಸದಂತಾಗಿತ್ತು.

“ ಯಾಕ್ರೀ, ಇತ್ತಿತ್ತಲಾಗಿ ಕೃಷ್ಣಾಜಿಯ ಮ್ಯಾಲೂ ಏನೂ ಬರೆದಿಲ್ಲವಲ್ಲ ನೀವು ? ” ಎಂದು ಕೇಳಿದ ಮೂರುಸಾವಿರಪ್ಪ.

ಗಂಗಾಧರಶಾಸ್ತ್ರಿ ದೇಶಾವಾರದ ನಗು ಬೀರುತ್ತಾ ಹೇಳಿದ :

“ ಸ್ವಲ್ಪ ತಾಳಿರಿ ಮೂರುಸಾವಿರಪ್ಪ, ಸ್ವಲ್ಪ ತಾಳಿರಿ. ಮೊದಲು ಈ ಕೆಲಸ ಮುಗಿಸಿ ಉಸಿರಾಡಿಸಿಕೊಳ್ತೇನೆ. ”

“ ಕೃಷ್ಣಾಜಿ, ವಿಶಾಲಪ್ಪ, ಮಹಾಲಿಂಗಪ್ಪ ಎಲ್ಲಾರನ್ನೂ ಹೆಣಾ ಹಾಕಬೇಕು ನೋಡಿರಿ. ವೋಟು ಕೇಳುವದಕ್ಕೆ ಅವರು ಹೋದಲ್ಲೆಲ್ಲಾ ಅವರ ವ್ಯಾಲ ಕೋಳೀಕತ್ತಿ ಬೀಳುವ ಹಾಂಗಾಗಬೇಕು. ”

“ ಹಾಗೇ ಮಾಡೂಣು, ಹಾಗೇ ಮಾಡೂಣು ” ಎಂದ ಶಾಸ್ತ್ರಿ.

ಶಾಸ್ತ್ರಿಯ ಜತೆಗೆ ಅರ್ಧ ಗಂಟೆ ಹರಟೆ ಕೊಚ್ಚಿಯಾದ ಬಳಿಕ ಮುದಿಯಪ್ಪನ ಮನೆಗೆ ಬಂದ ಮೂರುಸಾವಿರಪ್ಪ. ಮುದಿಯಪ್ಪ ಇನ್ನೂ ಕೋರ್ಟಿನಿಂದ ಬಂದಿರಲಿಲ್ಲ. ಅವನ ಹೆಂಡತಿ ತಾರಾಬಾಯಿ ಮೂರುಸಾವಿರಪ್ಪನನ್ನು ಬರಮಾಡಿಕೊಂಡು ಕುರ್ಚಿಯಲ್ಲಿ ಕೂಡಿಸಿ, ತಾನೂ ಬಳಿಯಲ್ಲಿ ಕುಳಿತುಕೊಂಡು ಮಾತನಾಡಿದಳು.

" ಯಾಕ್ರೀ, ಬಹಳ ದಿನದಿಂದ ಇತ್ತ ಬರಲಿಲ್ಲ ? "

" ಸವುಡೇ ಇಲ್ಲರಿ. ಚುನಾವಣೆ ಬ್ಯಾರೆ ಹತ್ತರ ಬಂತಲ್ಲ? ಒಂದೇ ಎರಡೇ ಕೆಲಸ? ಎಲ್ಲಾ ನಾನೊಬ್ಬನೇ ಮಾಡಬೇಕಾಗ್ಯೆತಿ. ಇತ್ತಿತ್ತಲಾಗಿ ನಿಮ್ಮವರೂ ಬಂದಿಲ್ಲ ಭಾಷಣಕ್ಕ. "

" ಬರೀ ಭಾಷಣ ಕುಟ್ಟುತ್ತಾ ತಿರುಗಹತ್ತಿದರೆ ಹೊಟ್ಟೆಗೇನು ಹೇಳು ವದು ಮೂರುಸಾವಿರಪ್ಪ? ನಿಮಗೇನೋ ಹೊಲ ಇದಾವೆ, ಅರಾಮ ಇದೀರಿ. ನಮ್ಮವರು ಪಕ್ಷಗಾರರನ್ನು ಕಟ್ಟಿಕೊಂಡು ಕೋರ್ಟು ಸುತ್ತದಿದ್ದರೆ ಮನೆಯಲ್ಲಿ ಅಡಿಗೆ ಕಟ್ಟಾಗುತ್ತದೆ. "

" ಬಿಡಿಬಿಡಿರೀ. ನಿಮಗೇನು ಕಡಮೆ ಮಾಡಿದಾನ ದೇವರು ? "

ಮೂರುಸಾವಿರಪ್ಪನ ಬಾಯಿಯಿಂದ ಆ ಮಾತು ಬರುತ್ತಲೂ ಹೆಮ್ಮೆ ಯಿಂದ ತಾರಾಬಾಯಿಯ ಮುಖಕ್ಕೆ ರಕ್ತವೇರಿತು.

" ಏನೋ ನಮ್ಮ ತಂದೆಯವರು ಸಹಾಯ ಮಾಡುತ್ತಾರೆಂದು ನಮ್ಮ ರಥ ನಡೆದಿದೆ. ಇಲ್ಲದಿದ್ದರೆ ದೇವರೇ ಗತಿಯಾಗುತಿತ್ತು. " ತನ್ನ ತಂದೆಯ ಸಿರಿ ವಂತಿಕೆಯನ್ನು ಎಷ್ಟೋ ಜನರೆದುರಿಗೆ ಎಷ್ಟೋ ಬಾರಿ ಬಣ್ಣಿಸಿದರೂ ತೃಪ್ತಿ ಯಾಗುತ್ತಿರಲಿಲ್ಲ ತಾರಾಬಾಯಿಗೆ. ಅವಳು ಅಶಿಕ್ಷಿತ ಹೆಂಗಸೇನೂ ಅಲ್ಲ-ಮ್ಯಾಟ್ರಿಕ್ ವರೆಗೂ ಓದಿದವಳು. ಸುಶಿಕ್ಷಿತ ಮಹಿಳೆಯರ ಧೈರ್ಯ, ದಿಟ್ಟತನ ಗಳು ತಾರಾಬಾಯಿಯಲ್ಲೂ ಒಡಮೂಡಿದ್ದುವಾದರೂ ಶಿಕ್ಷಣದಿಂದ ಲಭಿಸುವ ಸಂಸ್ಕೃತಿಯ ನಯ ಮಾತ್ರ ಅವಳ ಬಳಿ ಸುಳಿದಿರಲಿಲ್ಲ. ಅವಳ ಆಧುನಿಕತೆ ಅನೇಕ ಬಾರಿ ಶಿಷ್ಟಾಚಾರದ ಮೇರೆಯನ್ನು ದಾಟಿ ಹೋಗುತ್ತಿತ್ತು. ಗಂಡ ಮನೆಯಲ್ಲಿಲ್ಲದ ವೇಳೆಯಲ್ಲಿ ಮನೆಗೆ ಬಂದ ಗಂಡಸರೊಡನೆ ಗಂಟೆಗಳ ಕಾಲ ಹರಟುತ್ತಾ ಕುಳಿತುಕೊಳ್ಳುವುದು ಅವಳ ಪದ್ಧತಿಯಾಗಿತ್ತು. ತಾರಾಬಾಯಿ ಸ್ವಲ್ಪಮಟ್ಟಿಗೆ ಚೆಲುವೆ. ಗೌರವರ್ಣ. ತೆಳ್ಳನೆಯ ದೇಹ. ಸ್ವಚ್ಛಂದ ನಡೆ ವಳಿಕೆ. ಮನೆಯಲ್ಲೆಲ್ಲ ಅವಳೊಬ್ಬಳೆ ಇರುತ್ತಿದ್ದುದರಿಂದ, ಮುದಿಯಪ್ಪನಿಲ್ಲದ ಸಮಯ ಸಾಧಿಸಿಕೊಂಡೇ ಅಲ್ಲಿಗೆ ಬಂದು ಅವಳೊಡನೆ ಹರಟುತ್ತ ಕೂಡುತ್ತಿ ದ್ದವರಿಗೂ ಕೊರತೆಯಿರಲಿಲ್ಲ. ಅಂಥ ರಸಿಕರಲ್ಲಿ ಮೂರುಸಾವಿರಪ್ಪನೂ ಒಬ್ಬ ನಾಗಿದ್ದ. ತಾರಾಬಾಯಿಯ ಸಮೀಪದಲ್ಲಿ ಕುಳಿತು ಹರಟುವುದೆಂದರೆ

ಅದೊಂದು ಸ್ವರ್ಗೀಯ ಅನುಭವವೆಂದೇ ಅವನಿಗೆನ್ನಿಸುತ್ತಿತ್ತು. ತಾರಾಬಾಯಿಗಾದರೋ ಅದೂ ಒಂದು ಮೋಜಿನ ವಿಷಯವಾಗಿತ್ತು. ಹರಟೆಗಿಂತ ಹೆಚ್ಚಿನ ಸಲುಗೆಗೆ ಮಾತ್ರ ಅವಳು ಅವಕಾಶನೀಯುತ್ತಿರಲಿಲ್ಲ.

" ವಕೀಲರು ಚುನಾವಣೆಗೆ ನಿಲ್ಲೂದು ಖಾತ್ರಿ ಹೌದಲ್ಲರೀ ? " ಎಂದು ಕೇಳಿದ ಮೂರುಸಾವಿರಪ್ಪ.

" ಏನು, ನೀವೇ ಹೀಗೆ ಕೇಳಿದರೆ ಹ್ಯಾಗೆ ? ಚುನಾವಣೆಗೆ ನಿಲ್ಲುವ ಹುಚ್ಚನ್ನ ಅವರ ತಲೆಯೊಳಗೆ ಹಾಕಿದವರೇ ನೀವಲ್ಲವೇನು ? "

" ಹೌದೌದು. ಆದರೂ ... "

" ನನಗೇನೋ, ಈಗಲೇ ಇಂಥಾದಕ್ಕೆಲ್ಲಾ ಇವರು ಬೀಳಬಾರದು ಅಂತನ್ನಿಸುತದೆ. ಹತ್ತು ಹದಿನೈದು ವರ್ಷ ಆದರೂ ಪ್ರಾಕ್ಟೀಸ್ ಮಾಡಿದ ಬಳಿಕ ಅಸೆಂಬ್ಲಿ ಪಾರ್ಲಿಮೆಂಟ್ ಅಂತ ಓಡಾಡಲಿಕ್ಕೆ ಅಡ್ಡಿಯಿಲ್ಲ. ಈಗಲೇ ಏನವಸರವೋ ನನಗಂತೂ ತಿಳಿಯುವದಿಲ್ಲ ರಾಜಕಾರಣದ ಹುಚ್ಚು ಹಿಡಿದವರಾರೂ ಉದ್ಧಾರಾಗಿಲ್ಲ. ಕೈಯಲ್ಲಿ ನಾಕಷ್ಟು ಹಣವಿದ್ದರೆ ಆ ಮಾತು ಬೇರೆ. "

" ನಿಮ್ಮ ಹತ್ತರ ಏನು ಕಡಿಮಿಯಾಗೈತಿ ಅಕ್ಕಾವರೆ ? "

" ತವರು ಮನೆಯಿಂದ ತಂದು ಎಷ್ಟು ದಿವಸ ಅಂತ ಚೈನಿ ಮಾಡುವದು ಮೂರುಸಾವಿರಪ್ಪ ? "

" ವಕೀಲರು ಎಂ. ಎಲ್. ಎ. ಆದರಂದರ ಸಂಬಳ ಸುರುವಾಗುತೈತಿ ಬಿಡಿರಿ. ಆ ಮ್ಯಾಲ ನಿಮಗೇನು ಕಡಮಿ ? "

" ಅದು ಸರಿಯಪ್ಪ, ಮೊದಲು ಎಲೆಕ್ಶನ್ನಿಗೆ ಎಂಟು ಹತ್ತು ಸಾವಿರ ಖರ್ಚು ಮಾಡಬೇಕಲ್ಲ ? ಎಲ್ಲಿಂದ ತರುವದು ಅಷ್ಟೊಂದು ಹಣ ? ನಿಮ್ಮ ರೈತ ಸಂಘದವರೇ ಫಂಡು ಕೂಡಿಸಿಕೊಟ್ಟರೆ ಇವರು ಎಲೆಕ್ಶನ್ನಿಗೆ ನಿಲ್ಲಲೂ ಆದೀತು. ಇಲ್ಲದಿದ್ದರೆ...."

" ರೈತರೆಲ್ಲಿಂದ ಫಂಡು ಕೊಟ್ಟಾರು ಅಕ್ಕಾವರೆ ? ಅವರಿಗೇ ತಿನ್ನುವದಕ್ಕ ಕೂಳಿಲ್ಲ. "

" ನಿಮ್ಮ ಕೈಯಲ್ಲಿ ಎಂಟು ಹತ್ತು ಸಾವಿರ ರೈತರಾದರೂ ಇರಬೇಕಲ್ಲ ಮೂರುಸಾವಿರಪ್ಪ ? ಒಬ್ಬೊಬ್ಬ ಒಂದೊಂದು ರೂಪಾಯಿ ಹಾಕಿದರೆ ಸಹಜ

ವಾಗಿ ಎಂಟು ಸಾವಿರದ ವರೆಗೂ ಕೊಡಬಹುದಲ್ಲ ? ”

ಮೂರುಸಾವಿರಪ್ಪನಿಗೆ ಒಳಗೊಳಗೇ ನಗೆಯುಕ್ಕಿ ಬಂದಿತು. ಎಂಟು ಹತ್ತು ಸಾವಿರ ಜನರ ಮಾತಿರಲಿ, ಎಂಟು ಹತ್ತು ಜನ ಕೂಡ ತನ್ನ ಮಾತು ಕೇಳುವುದಿಲ್ಲ. ಕೆಲವರಂತೂ ತನ್ನನ್ನು ಹೊಡೆಯುವುದಕ್ಕೇ ಸಮಯ ಕಾಯು ತ್ತಿದ್ದಾರೆ. ದೊಡ್ಡ ದೊಡ್ಡ ಮುಖಂಡರನ್ನು ಹಿಡಿದುಕೊಂಡು ಹೋಗಿ ಸಭೆ ಸೇರಿಸಿದರೆ ಭಾಷಣ ಕೇಳಲು ಜನ ನೆರೆಯುವುದೇನೊ ನಿಜ. ಆ ಸಭೆಗಳಿಂದ ತನಗಾವ ಉಪಯೋಗವೂ ಆಗುವುದಿಲ್ಲ ಹಿಂಬಾಲಕರಿಗೆ ಚಹಾ ತಿಂಡಿ ಕೊಟ್ಟು ಊಟಕ್ಕಿಟ್ಟು ತನ್ನ ಕೈಲಿದ್ದ ಅಲ್ಪ ಸ್ವಲ್ಪ ಹಣವೂ ತೀರಿಹೋಯಿತು. ಗಂಗಾ ಧರಶಾಸ್ತ್ರಿಗೆ ಇನ್ನೂ ಹಣ ಕೊಡಬೇಕು. ಅದನ್ನೆಲ್ಲಿಂದ ತರುವುದೆಂಬುದೇ ಸಮ ಸ್ಯೆಯಾಗಿದೆ. ಏನಾದರೂ ಸಾಹಸ ಮಾಡಿ ತಾನೇ ಚುನಾವಣೆಗೆ ನಿಲ್ಲಬೇಕೆಂಬ ವಿಚಾರವಿದೆ. ಆ ವಿಚಾರವನ್ನು ತ್ಯಜಿಸಿ, ಎಂಟು ಹತ್ತು ಸಾವಿರ ಕೂಡಿಸಿ ಕೊಟ್ಟು ಮುದಿಯಪ್ಪನನ್ನು ನಿಲ್ಲಿಸಬೇಕಂತೆ ! ತನಗೇನು ಹುಚ್ಚೇ ? ಈ ಹೆಣ್ಣು ಮಗಳು ಬಹಳ ಧೂರ್ತಳಾಗಿರುವುದಂತೂ ಸ್ಪಷ್ಟವಿದೆ. ಎಂಥವರನ್ನಾದರೂ ಮರುಳು ಮಾಡಿ ಮೂಗಿಗೆ ದಾರ ಕಟ್ಟಿ ಕುಣಿಸುವ ಕಲೆಯಲ್ಲಿ ಪಳಗಿದ್ದಾಳೆ. ತನ್ನನ್ನೂ ಇಷ್ಟ ಬಂದ ಹಾಗೆ ಕುಣಿಸಬಹುದೆಂದು ಭಾವಿಸಿಕೊಂಡಿರಬೇಕು ಈಕೆ. ಇಂಥ ಹೆಣ್ಣುಗಳಿಗೆಲ್ಲ ಮೋಸ ಹೋಗುವ ಬೆಪ್ಪನೇ ಈ ಮೂರು ಸಾವಿರಪ್ಪ !

ಹಾಗೆ ಯೋಚಿಸುತ್ತಾ ಅವನು ಹೇಳಿದ :

“ ಅದೆಲ್ಲಾ ಆಗುವ ಮಾತಲ್ಲ ಅಕ್ಕಾವರೆ. ಜನರಿಂದ ರೊಕ್ಕ ಕೇಳುವದಿ ರಲಿ, ಅವರಿಗೇ ನಾವು ಕೊಡಬೇಕಾಗುತ್ತೈತಿ, ವೋಟು ಬೇಕಾಗಿದ್ದರೆ ಕಾಂಗ್ರೆ ಸಿನವರೂ ದೊಡ್ಡ ಸಾವುಕಾರನ್ನ ನಿಲ್ಲಿಸುವವರಿದ್ದಾರೆ, ದರಿದ್ರನಾರಾಯಣ ಪಕ್ಷ ದವರಂತೂ ನಮ್ಮ ಜಿಲ್ಲಾಕ್ಕೆಲ್ಲಾ ದೊಡ್ಡ ಸಾವುಕಾರನಾದ ಮಹಾಲಿಂಗಪ್ಪನ್ನ ನಿಲ್ಲಿಸುವವರಿದ್ದಾರೆ ಇನ್ನೊಬ್ಬ ಜಮೀನ್ದಾರರು ಸ್ವತಂತ್ರವಾಗಿ ನಿಲ್ಲುವವರಿ ದ್ದಾರಂತ ಸುದ್ದಿ ಐತಿ. ಇನ್ನೂ ಎಷ್ಟು ಮಂದಿ ನಿಲ್ಲುತಾರೋ ಯಾರಿಗೆ ಗೊತ್ತು. ಇವರೆಲ್ಲರ ವಿರುದ್ಧ ನಿಂತು ಗೆಲ್ಲುದಂದರೆ ಸುಲಭ ಅಲ್ಲ. ನೀರಿನ ಹಾಂಗ ರೊಕ್ಕ ಖರ್ಚು ಮಾಡಬೇಕಾಗುತ್ತೈತಿ. ಒಂದು ವೋಟಿಗೆ ಐದೈದು ರೂಪಾಯಿ

ಕೊಡುವ ಪರಸಂಗ ಬಂದರೂ ಬಂದೀತು. ಮತದಾರರೂ ರೂಪಾಯಿ ಕೊಟ್ಟವರಿಗೇ ವೋಟು ಹಾಕುವ ತಯಾರಿಯೊಳಗಿದ್ದಾರೆ. ಹೀಂಗಿರುವಾಗ ನಾವು ಅವರ ಹತ್ತರ ರೂಪಾಯಿ ಕೇಳೂದು ಯಾವ ಮಾರಿಯಿಂದ, ನೀವೇ ಹೇಳ್ರಿ "

ಆ ವೇಳೆಗೆ ಮನೆಯಲ್ಲಿ ಅಡಿಯಿರಿಸಿದ ಮುದಿಯಪ್ಪ, ಕೋಟು ಕಳಚಿ ಗೂಟಕ್ಕೆ ಹಾಕಿ, ಪ್ಯಾಂಟನ್ನು ಮೇಲೆಳೆದುಕೊಳ್ಳುತ್ತಾ ಕುರ್ಚಿಯಲ್ಲಿ ಕುಳಿತು, ಪತ್ರಿಕೆಯಿಂದ ಗಾಳಿ ಹಾಕಿಕೊಳ್ಳುತ್ತ ಕೇಳಿದ:

" ಏನಪಾ, ಏನು ನಡೆದಿದೆ ? "

" ಏನಿಲ್ಲರಿ. ಚುನಾವಣೆಯ ಮಾತೇ. "

" ಚುನಾವಣೆ ಅಂದಿಯಾ ? ನೆನಪಾಯ್ತು ಈಗ. ಮೊನ್ನೆ ನನ್ನ ಹತ್ತರ ಲೋಕವಿನಾಶ ಪಕ್ಷದ ಕಾರ್ಯದರ್ಶಿ ಬಂದಿದ್ದ. ಅವರ ಪಕ್ಷದ ವತಿಯಿಂದ ಹುರಿಯಾಳಾಗಿ ನಿಲ್ಲುವದಕ್ಕೆ ಕೇಳುತ್ತಿದಾನೆ. "

" ನನಗೆ ಹೇಳಲೇ ಇಲ್ಲವಲ್ರೀ ಇಷ್ಟು ದಿವಸ ? " ಎಂದು ನಸುಮುನಿಸಿನಿಂದ ಕೇಳಿದಳು ತಾರಾಬಾಯಿ.

" ಹೇಳೋಣಂತ ಬಂದೆ, ಮರೆತು ಹೋಯ್ತು. ನನ್ನನ್ನು ಖಂಡಿತವಾಗಿ ಆರಿಸಿ ತರುತ್ತೀವಿ ಅಂತ ಗ್ಯಾರಂಟಿ ಕೊಡುತ್ತಾನವ. "

ಲೋಕವಿನಾಶ ಪಕ್ಷದ ಹೆಸರನ್ನೆ ಅದುವರೆಗೆ ಕೇಳಿರಲಿಲ್ಲ ಮೂರು ಸಾವಿರಪ್ಪ.

" ಇದ್ಯಾವ ಪಕ್ಷ ಬಂತ್ರೀ ವಕೀಲರೆ ? ಯಾವಾಗ ಸ್ಥಾಪನಾ ಆತು ? " ಮುದಿಯಪ್ಪ ನಗುತ್ತ ಹೇಳಿದ:

" ಅದೊಂದೂ ಕೇಳಬೇಡಪ್ಪ ; ಮಳೆಗಾಲದಲ್ಲಿ ನಾಯಿಕೊಡೆ ಹುಟ್ಟುವದೂ ಚುನಾವಣೆಯ ಕಾಲಕ್ಕೆ ಪಕ್ಷಗಳು ಹುಟ್ಟುವದೂ ಎಲ್ಲಾ ಒಂದೇ. "

" ಕಾರ್ಯದರ್ಶಿ ಅಂದಿರಲ್ಲಾ, ಯಾರು ಅವ ? "

" ಹಿಂದೆ ಹಿಂದೂ ಮಹಾಸಭೆಯಲ್ಲಿದ್ದನಲ್ಲ, ಭಯಂಕರರಾವ್ ಅಂತ.... "

" ಓ, ಅವನೇ ! ಆರ್. ಎಸ್. ಎಸ್. ಗದ್ದಲದಾಗ ಜೇಲಿಗೆ ಹೋಗಿ ಬಂದನಲ್ಲ, ಅವನೇ ಅಲ್ಲೇನು ? ಉಗ್ರಪುರದಾಗ ಮಂದಿಯಿಂದ ಮೊಟ್ಟೆಯ

ಹೊಡೆತ ತಿಂದಿದ್ದ. ಛೀ, ಬಿಡ್ರೀ ವಕೀಲರೆ. ಅಂಥವನ ಸಂಗ ಯಾಕ ನಿಮಗ? ಹಳೀ ನಾಯಿಗಿರುವಷ್ಟು ಕಿಮ್ಮತ್ತು ಕೂಡಾ ಇಲ್ಲ ಅವರಿಗೆ ಕರ್ನಾಟಕದಾಗ. ಅವರನ್ನ ಯಾರು ಮಾತಾಡಿಸ್ತಾರೆ?"

"ದೊಡ್ಡ ದೊಡ್ಡ ಜಮೀನ್ದಾರರು, ಸಂಸ್ಥಾನಿಕರು, ಸಾವುಕಾರರು ಅವರ ಕಡೆ ಇದ್ದಾರಪ್ಪಾ. ರೊಕ್ಕಕ್ಕೆ ಏನೂ ಕೊರತೆಯಿಲ್ಲ ನೋಡು ಲೋಕವಿನಾಶ ಪಕ್ಷಕ್ಕೆ. ಇವತ್ತೇ ಬೇಕು ಅಂದರೆ ಕೇಳಿದಷ್ಟು ಕೊಡಲಿಕ್ಕೆ ತಯಾರಿದ್ದಾರೆ."

ತಾರಾಬಾಯಿಯ ಬಾಯಲ್ಲಿ ನೀರೂರಿತು. ಅವಳು ಕುತೂಹಲದಿಂದ ಕೇಳಿದಳು:

"ಅದೇನ್ರಿ, ಅವರು ನಿಮ್ಮ ಮೇಲೇ ಇಷ್ಟೊಂದು ಭಕ್ತಿ? ಬೇರೆ ಯಾರೂ ಹುರಿಯಾಳುಗಳು ಸಿಕ್ಕುವದಿಲ್ಲೇನು ಅವರಿಗೆ?"

"ಅವರ ಸಹವಾಸ ಮಾಡಲಿಕ್ಕೆ ಎಲ್ಲರೂ ಅಂಜುತ್ತಾರೆ ತಾರಾ. ಆ ಪಕ್ಷದ ಮೇಲೆ ಸರಕಾರ ಯಾವಾಗಲೂ ಒಂದು ಕಣ್ಣಿಟ್ಟಿರುತ್ತದಲ್ಲ! ಅದೂ ಅಲ್ಲದೆ ಅದರಲ್ಲಿರುವವರು ಹೆಚ್ಚಾಗಿ ಬ್ರಾಹ್ಮಣರು. ಬ್ರಾಹ್ಮಣೇತರ ಮಂದಿ ಅವರನ್ನು ನಂಬುವದಿಲ್ಲ. ಅದಕ್ಕೇ ನಮ್ಮಂಥ ಲಿಂಗಾಯತರನ್ನು ಹಿಡಿದು ಹುರಿಯಾಳುಗಳನ್ನಾಗಿ ಮಾಡಿ ಬ್ರಾಹ್ಮಣೇತರರ ಬೆಂಬಲ ದೊರಕಿಸುವ ಹೊಂಚು ಅವರದು."

"ಹಾಂಗಾದರ ನೀವು ನಿಲ್ಲುವ ವಿಚಾರ ಐತೇನು ಆ ಪಕ್ಷದಿಂದ?" ಮೂರುಸಾವಿರಪ್ಪ ಕೇಳಿದ

"ಅವರ ಕಾಟ ತಪ್ಪಿಸುವದಕ್ಕೇ ಆಗದಂತಿದೆಯಪ್ಪ."

ಊಟ ತೀರಿಸಿಕೊಂಡು ಮೂರುಸಾವಿರಪ್ಪ ಹೊರಟು ಹೋಗುತ್ತಲೂ ತಾರಾಬಾಯಿ ಗಂಡನನ್ನು ಕುರಿತು ಕೇಳಿದಳು:

"ಈ ಭಯಂಕರರಾವ್ ನೀವು ಕೇಳಿದಷ್ಟು ಹಣ ಕೊಡಲು ನಿಜವಾಗಿ ತಯಾರಿದ್ದಾರೇನು?"

"ಕೇಳಿದರೆ ಕೊಡುವ ಹಾಗಿದ್ದಾರೆ."

"ಹಾಗಿದ್ದರೆ ಈ ಸಂಧಿಯನ್ನು ಬಿಡಬಾರದು" ಎಂದಳು ತಾರಾಬಾಯಿ.

ಗಡ್ಡದ ಕೂದಲುಗಳನ್ನು ಕಿತ್ತುಕೊಳ್ಳುತ್ತಾ ಮುದಿಯಪ್ಪ ಹೇಳಿದ:

"ಆದರೆ ಆ ಮಂದಿಯ ಸಹವಾಸ ಕಷ್ಟ ತಾರಾ. ಅವರೊಡನೆ ಸೇರುವದರಿಂದ ನನ್ನ ಹೆಸರೂ ಕೆಡಬಹುದು."

ತಾರಾಬಾಯಿ ಕೈ ತಿರುವುತ್ತಾ ಹೇಳಿದಳು:

"ಅಹಾಹಾ! ಏನು ಮಾತು ಅಂದರೆ, ನಿಮ್ಮದೂ! ಅಂತೆ, ಹೆಸರು ಕೆಡಬಹುದಂತೆ! ಬಹಳ ಹೆಸರು ಗಳಿಸಿದವರ ಹಾಗೇ ಮಾತಾಡುತ್ತೀರಲ್ಲಾ? ಇನ್ನೂ ಪಕ್ಷಕಾರರಿಗೆ ಕೂಡಾ ನೆಟ್ಟಗೆ ಗೊತ್ತಾಗಿಲ್ಲವಂತೆ ನಿಮ್ಮ ಹೆಸರು. ಏನೋ ಒಂದೆರಡು ಹಳ್ಳಿಗಳಲ್ಲಿ ಭಾಷಣ ಕುಟ್ಟಿ ಬಂದಿರೆಂದು ದೊಡ್ಡ ಮುಖಂಡರಾದಿರೆಂದು ತಿಳಿದಿದ್ದೀರೇನು? ನನಗೆ ಗೊತ್ತಿಲ್ಲವೇನು ನಿಮ್ಮ ಕೀರ್ತಿ? ನನ್ನ ಮುಂದೆಯೂ ಜಂಬ ಕೊಚ್ಚುತ್ತೀರಲ್ಲಾ?"

ಮುದಿಯಪ್ಪ ಬೇಸರದಿಂದ ಹಾಸಿಗೆಯ ಮೇಲೆ ದೇಹವನ್ನೊರಗಿಸಿ, ಕಣ್ಣು ಮುಚ್ಚಿಕೊಂಡ. ಹೆಂಡತಿಯೊಡನೆ ವಾದವಿವಾದವೆಂದರೆ ಅವನ ಮೈ ಮೇಲೆ ಮುಳ್ಳು ಏಳುತ್ತಿತ್ತು.

ತಾರಾಬಾಯಿ ಮಾತ್ರ ಅವನನ್ನು ಬಿಡಲಿಲ್ಲ. ಧ್ವನಿಯನ್ನೇರಿಸಿ ಕೇಳಿದಳು:

"ಯಾಕೆ ಸುಮ್ಮನಾದಿರಿ? ಭಯಂಕರರಾವ್‌ಗೆ ಏನು ಹೇಳುವವರು?"

"ಏನು ಹೇಳಬೇಕು ಅನ್ನುತ್ತೀ ನೀನು?"

"ಮತ್ತೇನು ಹೇಳುವದು? ಚುನಾವಣೆಗೆ ನಿಲ್ಲುತ್ತೇನಂತ ಒಪ್ಪಿಕೊಂಡು ಬಿಡಿರಿ. ಈಗ ಎರಡು ಮೂರು ಸಾವಿರವಾದರೂ ಅಡ್ವಾನ್ಸ್ ಕೊಡಬಹುದಲ್ಲ ಅವರು?"

"ರೂಪಾಯಿ ಯಾತಕ್ಕೆ ಬೇಕು ಅಂತ ಕೇಳಿದರೇನು ಹೇಳುವದು?"

"ಅದನ್ನೂ ನಾನೇ ಹೇಳಿಕೊಡಬೇಕೇನು? ಇಷ್ಟು ಕೂಡಾ ಬುದ್ಧಿಯಿಲ್ಲದವರು ನೀವು ಬಿ. ಎ. ಹ್ಯಾಗೆ ಪಾಸಾದಿರೋ, ಎಲೆಲ್.ಬಿ. ಹ್ಯಾಗೇ ಮಾಡಿದಿರೋ ದೇವರಿಗೇ ಗೊತ್ತು. ಚುನಾವಣೆ ಅಂದ ಮೇಲೆ ಪ್ರಚಾರಕ್ಕೊಂದು ಮೋಟರು ಬೇಕಲ್ಲ? ಮೊದಲು ಮೋಟರು ತೆಗೆದುಕೊಳ್ಳುವದೇ ಒಳ್ಳೆಯದೆಂದು ಹೇಳಿರಲ್ಲ ಅವರಿಗೆ?"

" ಅವರ ಪಕ್ಷದ್ದೇ ಒಂದು ಮೋಟರು ಇದೆ ತಾರಾ. ಅದನ್ನೇ ಉಪ ಯೋಗಿಸಿಕೊಳ್ಳಿರಿ ಅಂದರೆ ? "

" ಒಂದು ಮೋಟರಿನಿಂದ ಏನಾದೀತು? ನಿಮಗೇ ಒಂದು ಸ್ವತಂತ್ರ ಮೋಟರಿದ್ದರೆ ಪ್ರಚಾರಕ್ಕೆ ಅನುಕೂಲ ಅಂತ ಹೇಳಿರಿ. "

" ಆಯಿತಲ್ಲ. ಕೇಳಿ ನೋಡುತ್ತೇನೆ " ಎಂದು ನುಡಿದು ಮುದಿಯಪ್ಪ ಹೊದ್ದಿಕೆಯನ್ನು ಮೈಮೇಲೆಳೆದುಕೊಂಡು ಗೋಡೆಯ ಕಡೆ ಹೊರಳಿ ಮಲಗಿ ಕೊಂಡ.

ಆಗಲೂ ತಾರಾಬಾಯಿ ಸುಮ್ಮನಾಗಲಿಲ್ಲ. ತನಗೆ ನಿದ್ದೆ ಬರುವ ವರೆಗೂ ಗಂಡನನ್ನು ಪೀಡಿಸುತ್ತಿರುವುದು ಅವಳಿಗಂಟಿಕೊಂಡ ಅಭ್ಯಾಸ ವಾಗಿತ್ತು.

" ಆ ಭಯಂಕರರಾವ್ ಈಗ ಇಲ್ಲೇ ಇದ್ದಾರೇನು ? "

" ಹೂಂ. "

" ಮೊದಲು ಅವರ ದೋಸ್ತಿ ಮಾಡಿಕೊಳ್ಳಿರಿ ಚೆನ್ನಾಗಿ. ನಾಳೆ ಅವರನ್ನು ಊಟಕ್ಕೇ ಕರೆದುಬಿಡಿರಿ. "

" ಅವರು ಹಾಗೆಲ್ಲ ಬೇರೆ ಜಾತಿಯವರಲ್ಲಿ ಊಟ ಮಾಡುವದಿಲ್ಲ ತಾರಾ. "

" ಹಾ ! ಅಷ್ಟು ಸನಾತನಿಗಳೇನು ? "

" ಬೇರೆ ಜಾತಿಯ ಜನರಲ್ಲಿ ನೀರು ಕೂಡಾ ಮುಟ್ಟುವದಿಲ್ಲ ಅವರು. "

" ಅಬ್ಬಬ್ಬಾ ! ಹೀಗಿದ್ದರೆ ಕಷ್ಟವೇ ಆಯಿತಲ್ಲ ? ಮನೆಗೆ ಕರೆದು ಹೋಳಿಗೆ ಊಟ ಹಾಕಿ ಉಬ್ಬಿಸೋಣ ಅಂತ ನನ್ನ ವಿಚಾರ ಇತ್ತು. "

" ಅವರು ಹಾಗೆಲ್ಲ ಉಬ್ಬುವ ಮಂದಿಯಲ್ಲ. ಧೈರ್ಯದಿಂದ ಎದುರಿಗೆ ಕೂತು ಮಾತಾಡುವ ಹೆಂಗಸರನ್ನು ಕಂಡರೂ ಆಗುವದಿಲ್ಲ ಅವರಿಗೆ. ಹೆಂಗಸು ಅಡಿಗೆ ಮನೆಯಲ್ಲಿರುವದೇ ಹಿಂದೂ ಸಂಸ್ಕೃತಿ ಅಂತ ಅನ್ನುತ್ತಾರೆ. "

" ಪಕ್ಕಾ ಸನಾತನಿ ಆದಂತಾಯಿತಲ್ಲ. ಹಾಗಾದರೆ ಅವರು ಮನೆಗೆ ಬರು ವದೇ ಬೇಡ. ನೀವೇ ಹೊರಗೇ ಮಾತಾಡಿ ಚುನಾವಣೆಯದು ಗಟ್ಟಿಮಾಡಿ ಬಿಡಿರಿ. "

ಮೂರನೆಯ ದಿನ ಭಯಂಕರರಾಯನನ್ನು ಕಂಡು, ಮುದಿಯಪ್ಪ ಮೋಟರಿನ ಪ್ರಸ್ತಾಪವೆತ್ತುತ್ತಲೂ ಮೀಸೆಯನ್ನು ಹುರಿಗೊಳಿಸುತ್ತ ಭಯಂಕರರಾಯ ಹೇಳಿದ :

" ಮೋಟರು ? ಅದೇನು ದೊಡ್ಡ ಮಾತು ಬಿಡಿರಿ. ಒಂದೆರಡು ತಿಂಗಳಲ್ಲಿ ಕೊಡಿಸುತ್ತೇವೆ. ಮೊದಲು ನಮ್ಮ ಪಕ್ಷದ ಪ್ರತಿಜ್ಞಾ ಪತ್ರಕ್ಕೆ ಸಹಿ ಹಾಕಿ ಬಿಡಿರಿ. ನಮ್ಮ ಸಭೆಗಳಿಗೂ ಬಂದು ಹೋಗುತ್ತಾ ಇರಿ. ಉಮೇದುವಾರ ಅಂದ ಮೇಲೆ ಮೊದಲು ಜನರು ನಿಮ್ಮನ್ನು ನೋಡಬೇಕಲ್ಲ ? "

ಮುದಿಯಪ್ಪ ಹೆಚ್ಚು ಮಾತನಾಡದೆ ಮನೆಗೆ ಬಂದು ಹೆಂಡತಿಯ ಹತ್ತಿರ, ನಡೆದುದನ್ನು ವರದಿಯೊಪ್ಪಿಸಿದ.

" ಪ್ರತಿಜ್ಞಾ ಪತ್ರಕ್ಕೆ ಸಹಿ ಹಾಕುವದೆಂದರೆ ಅವರ ಬಲೆಗೆ ಸಿಕ್ಕುಬಿದ್ದ ಹಾಗೇ. ಮುಂದೆ ತಪ್ಪಿಸಿಕೊಳ್ಳಲು ಬರಲಿಕ್ಕಿಲ್ಲ. ಎರಡು ತಿಂಗಳು ಬಿಟ್ಟು ಮೋಟರು ಕೊಡಿಸುತ್ತೇನೆ ಅಂತಾನೆ. ಅವನ ಮಾತನ್ನು ನಂಬುವದಾದರೂ ಹ್ಯಾಗೆ ? "

" ಭಯಂಕರರಾವ್ ಬಹಳ ಪಕ್ಕಾ ಇದ್ದ ಹಾಗೆ ಕಾಣುತದೆ. ನೀವು ಬಹಳ ಭೋಳೇ ಸ್ವಭಾವದವರು, ನಿಮ್ಮನ್ನು ಸುಲಭವಾಗಿ ಮೋಸಗೊಳಿಸ ಬಹುದು ಅಂತ ತಿಳಿದಿರಬೇಕು ಅವ. ಅವನಿಗಿಂತ ಪಕ್ಕಾ ಇರುವ ನನ್ನ ಸಂಗತಿ ಅವನಿಗೆ ಗೊತ್ತಿರಲಿಕ್ಕಿಲ್ಲ. " ಸ್ವಲ್ಪ ತಡೆದು ತಾರಾಬಾಯಿ ಮತ್ತೆ ಹೇಳಿದಳು : " ಭಯಂಕರರಾಯನಿಂದ ಏನಾದರೂ ಮಾಡಿ ರೂಪಾಯಿ ಬಿಚ್ಚಿಸೋಣ. ಅದಕ್ಕೊಂದು ಯುಕ್ತಿ ಮಾಡಬೇಕು. ಪುರೋಗಾಮಿ ಪಕ್ಷದ ರಾಮಣ್ಣನೂ ಈ ಭಯಂಕರರಾಯನೂ ಗೆಳೆಯರೇನು ? "

" ಅವನಿಗೂ ಇವನಿಗೂ ಯಾವಾಗಲೂ ಜಗಳ. ಹಾದಿಯಲ್ಲಿ ರಾಮಣ್ಣ ಕಾಣಿಸಿದರೆ ಭಯಂಕರರಾವ್ ಮುಖ ತಿರುವಿಕೊಂಡು ಹೋಗುತ್ತಾನೆ. "

" ಆಯಿತಲ್ಲ. ಪುರೋಗಾಮಿ ಪಕ್ಷದ ವತಿಯಿಂದ ಹುರಿಯಾಳಾಗಿ ನಿಲ್ಲಬೇಕು ಅಂತ ರಾಮಣ್ಣ ಒತ್ತಾಯ ಮಾಡುತ್ತಿದಾನಂತ ಹೇಳಿರಿ ಭಯಂಕರರಾವ್‌ಗೆ. "

" ರಾಮಣ್ಣ ಹಾಗೆಂದೂ ನನ್ನನ್ನು ಕೇಳಿಲ್ಲವಲ್ಲ ತಾರಾ ? "

“ ಅವನು ಕೇಳುವದಾದರೂ ಏನು ಅಗತ್ಯ? ಚುನಾವಣೆಯ ಕಾಲ. ಈಗಲೇ ಏನಾದರೂ ಮಾಡಿ ರೊಕ್ಕ ಮಾಡಿಕೊಳ್ಳಬೇಕು. ಹೋದ ಸಲದ ಚುನಾವಣೆಯಲ್ಲಿ ಹೀಗೆ ಎಷ್ಟೋ ಮಂದಿ ಮಾಡಿದ್ದಾರೆ. ನಿಮಗೆ ಗೊತ್ತಿಲ್ಲೇನು? ಹೂಂ. ನಿಮಗೆ ಗೊತ್ತಿರುವದಾದರೂ ಏನು? ಹೋಗಲಿ ಬಿಡಿರಿ. ಭಯಂಕರರಾವ್‌ಗೆ ಹೀಗೆ ಹೇಳಿ ನೋಡಿರಿ. ಅವ ಹಾದಿಗೆ ಬರಬಹುದು. ”

ಭಯಂಕರರಾಯ ತನ್ನ ನಿಲುವೆಯಿಂದ ಕದಲಲಿಲ್ಲ. ಮೀಸೆಯನ್ನು ಹುರಿಗೊಳಿಸುತ್ತ ಆತ ಮುದಿಯಪ್ಪನೆದುರಿಗೊಂದು ಭಾಷಣವನ್ನೇ ಬಿಗಿದ.

“ ಪುರೋಗಾಮಿ ಪಕ್ಷ ಅಂದರೆ ಪ್ರತಿಗಾಮಿ ಪಕ್ಷ. ಕಮ್ಯುನಿಸ್ಟರೂ ಅವರೂ ಎಲ್ಲಾ ಒಂದೆ. ಅಂಥಾ ಪಕ್ಷದ ಉಮೇದುವಾರನಾಗಿ ನಿಲ್ಲುವದೆಂದರೆ ಮಾನಗೇಡಿತನದ ಕೆಲಸ. ನಮ್ಮ ಪಕ್ಷದ ವತಿಯಿಂದ ಚುನಾವಣೆಗೆ ನಿಂತರೆ ನಿಮಗೆ ಹಿಂದೂ ಇತಿಹಾಸದಲ್ಲಿ ಅಮರ ಸ್ಥಾನ ಸಿಕ್ಕುತ್ತದೆ. ಸುಮ್ಮನೆ ಹಣಕ್ಕೆ ಆಸೆ ಮಾಡಿ ಕೆಡಬೇಡಿರಿ. ನಾವು ಭಾರತೀಯ ಸಂಸ್ಕೃತಿಯ ಆರಾಧಕರು. ಕೊಟ್ಟ ಮಾತಿಗೆಂದೂ ತಪ್ಪುವವರಲ್ಲ. ಎರಡು ತಿಂಗಳಲ್ಲಿ ನಿಮಗೆ ವೋಟರು ಕೊಡಿಸುತ್ತೇವೆ. ಆ ಚಿಂತೆಯನ್ನೇ ಬಿಟ್ಟು ನಮ್ಮ ಪ್ರತಿಜ್ಞಾ ಪತ್ರಕ್ಕೆ ಸಹಿ ಮಾಡಿರಿ. ”

ಮುದಿಯಪ್ಪ ಆ ವಿಚಾರವನ್ನು ಹೆಂಡತಿಗೆ ವರದಿಯೊಪ್ಪಿಸುತ್ತಲೂ ಅವಳೆಂದಳು :

“ ಏನು ಹೇಳಿದಿರಿ ನೀವು? ”

“ ನಿನ್ನನ್ನು ಕೇಳದೆ ನಾನೇ ಏನು ಹೇಳುವದೇ ಮಹಾರಾಯಿತಿ? ” ವಿಚಾರ ಮಾಡಿ ತಿಳಿಸುತ್ತೇನೆಂತ ಹೇಳಿ ಬಂದೆ. ”

ಗಂಡನ ಮೇಲೆ ತನಗಿದ್ದ ವರ್ಚಸ್ವವನ್ನು ಕಂಡು ಉಬ್ಬಿದ ತಾರಾಬಾಯಿ ನಗುನಗುತ್ತಾ ಹೇಳಿದಳು :

“ ಚಲೋ ಕೆಲಸ ಮಾಡಿದಿರಿ. ನಾನಿರದಿದ್ದರೆ ನಿಮ್ಮ ಬಾಳ್ವೆ ಹ್ಯಾಗಾಗುತ್ತಿತ್ತೊ ಏನೊ. ವೋಟರು ಕೊಡಿಸಿದ ಮೇಲೆ ಪ್ರತಿಜ್ಞಾ ಪತ್ರಕ್ಕೆ ಸಹಿ ಹಾಕುತ್ತೇನೆ ಅಂತ ಹೇಳಿರಿ ಭಯಂಕರರಾವ್‌ಗೆ. ”

ಮೂರನೆಯ ದಿನ ಮುದಿಯಪ್ಪ ಆ ಮಾತು ಹೇಳುತ್ತಲೂ ಭಯಂಕರ

ರಾಯ ಮೀಸೆ ಹುರಿಗೊಳಿಸುವುದನ್ನೂ ಮರೆತು ತಲೆ ಕೆರೆದುಕೊಳ್ಳುತ್ತ ಕೇಳಿದ :

" ನಿಮ್ಮ ಮನೆಯಲ್ಲಿ ಯಾರಾದರೂ ಹಿರಿಯರಿದ್ದಾರೇನ್ರಿ ವಕೀಲರೆ ? "

" ನನ್ನ ಹೆಂಡತಿಯಿದ್ದಾಳೆ " ಎಂದ ಮುದಿಯಪ್ಪ.

" ನಮ್ಮನ್ನು ಮೀರಿಸುವ ಮುತ್ಸದ್ದಿಯೇ ಇರಬೇಕು ಆಕೆ " ಎಂದು ತನ್ನಲ್ಲಿಯೆ ಹೇಳಿಕೊಂಡು ಭಯಂಕರರಾಯ ಮತ್ತೆ ಮೀಸೆ ಹುರಿಮಾಡ ತೊಡಗಿದ.

೧೮

ಉಗ್ರಪುರ ತಾಲೂಕು ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ವೀರಭದ್ರಸೆಟ್ಟಿಗೂ ಗಂಗಾಧರ ಶಾಸ್ತ್ರಿಗೂ ಬಹಳ ವರ್ಷಗಳ ಪರಿಚಯ. ಬ್ರಿಟಿಷ್ ಸರಕಾರ ವಿರುವ ವರೆಗೂ ಅವರಿಬ್ಬರೂ ಕೂಡಿಯೆ ಕಾಂಗ್ರೆಸ್ಸಿಗೆ ವಿರೋಧ ಮಾಡುತ್ತ ಬಂದಿದ್ದರು. ಮುಂದೆ ಸೆಟ್ಟಿಯೇನೋ ಕಾಂಗ್ರೆಸ್ ಸೇರಿ ಖಾದಿ ಹಾಕಿಕೊಂಡು ಹೊಸ ದೇಶ ಭಕ್ತರ ಸಾಲಿಗೆ ಸೇರಿದನಾದರೂ ಶಾಸ್ತ್ರಿ ತನ್ನ ಮೊದಲಿನ ಸಿಲು ಮೆಗೇ ಅಂಟಿಕೊಂಡು ಕಾಂಗ್ರೆಸ್ಸನ್ನು ಟೀಕಿಸುವ ಕಾಯಕವನ್ನು ಮುಂದುವರಿಸಿಕೊಂಡು ಬಂದಿದ್ದ. ಆದರಿಂದಾಗಿ ವೀರಭದ್ರಸೆಟ್ಟಿಯ ಮತ್ತು ಶಾಸ್ತ್ರಿಯ ಸ್ನೇಹಕ್ಕೆ ಆತಂಕವೇನೂ ಉಂಟಾಗಿರಲಿಲ್ಲ. ಕಳ್ಳೀಕಾಯಿಗೆ ಬಂದಾಗಲೆಲ್ಲ ಸೆಟ್ಟಿ 'ಲಿಂಗವೀರ' ಕಾರ್ಯಾಲಯಕ್ಕೆ ಬಂದು ಶಾಸ್ತ್ರಿಯನ್ನು ಕಂಡು ಲೋಕಾಭಿರಾಮವಾಗಿ ಮಾತನಾಡಿಕೊಂಡು ಹೋಗದಿರುತ್ತಿರಲಿಲ್ಲ. ಕಾಂಗ್ರೆಸ್ ಸಂಘಟನೆಯ ಆಂತರಿಕ ರಹಸ್ಯಗಳೆಷ್ಟೋ ಶಾಸ್ತ್ರಿಗೆ ತಿಳಿಯುತ್ತಿದ್ದುದು ಸೆಟ್ಟಿಯಿಂದಲೇ. ಪತ್ರಿಕೆಯ ಮೊದಲನೆಯ ಪುಟದ ಮೇಲೆ ದಪ್ಪಕ್ಷರಗಳ ಶೀರ್ಷಿಕೆಗಳನ್ನು ಕೊಟ್ಟು ಆ ರಹಸ್ಯಗಳನ್ನು ಹೊರಗೆಡಹುತ್ತಿದ್ದ ಶಾಸ್ತ್ರಿ. ಕಾಂಗ್ರೆಸ್ ಕಾರ್ಯಕರ್ತರನ್ನೆಲ್ಲ ಅವನು ಟೀಕಿಸುತ್ತಿದ್ದನಾದರೂ ವೀರಭದ್ರಸೆಟ್ಟಿಯೊಬ್ಬನನ್ನು ಮಾತ್ರ ಎಂದೂ ಟೀಕಿಸುತ್ತಿರಲಿಲ್ಲ. ಅವನ ಬಗ್ಗೆ ಬರೆಯುವಾಗಲೆಲ್ಲ ಎರಡು ಒಳ್ಳೆಯ ಮಾತುಗಳನ್ನೆ ಬರೆಯುತ್ತಿದ್ದ. "ವೀರಭದ್ರಸೆಟ್ಟರಂಥ ಪ್ರತಿಭಾಶಾಲಿಗಳೂ ಪ್ರಾಮಾಣಿಕರೂ ಕೆಲವರಾದರೂ ಕಾಂಗ್ರೆಸ್ಸಿನಲ್ಲಿರುವರೆಂದೇ ಅದು ಈಗಲೂ ಬದುಕಿ ಉಳಿದಿರುವುದು," ಎಂದೂ ಆಗಾಗ ಬರೆಯುತ್ತಿದ್ದ ಶಾಸ್ತ್ರಿ. ಅದನ್ನೋದಿ ಕೃಷ್ಣಾಜಿ ನಕ್ಕು ಹೇಳುತ್ತಿದ್ದ: "ಸೆಟ್ಟಿಯಂಥ ಉದಾರಿಗಳಿರುವರೆಂದು ಶಾಸ್ತ್ರಿ ಈಗಲೂ ಬದುಕಿದ್ದಾನೆ."

ಉಗ್ರಪುರ ಮತದಾರರ ಸಂಘದಿಂದ 'ತಾನು ಹುರಿಯಾಳಾಗಿ ನಿಲ್ಲುವ ವಿಷಯ ಖಚಿತವಾದೊಡನೆ ವೀರಭದ್ರಸೆಟ್ಟಿ ಗಂಗಾಧರ ಶಾಸ್ತ್ರಿಯ ಬಳಿ ಧಾವಿಸಿ ಬಂದು ಹೇಳಿದ :

"ನಾನು ನಿಲ್ಲುವದಂತೂ ಖಾತ್ರಿಯಾಯ್ತು ಶಾಸ್ತ್ರಿಗಳೇ. ನಮ್ಮ ಪ್ರಚಾರ ಖಾತೆಗೆ ನೀವೇ ಚೇರ್ಮನ್ನರಾಗಬೇಕು ನೋಡಿರಿ."

"ನೀವು ಕಾಂಗ್ರೆಸ್ ಹುರಿಯಾಳು. ನಾನು ಕಾಂಗ್ರೆಸ್ಸೇತರ ಪಕ್ಷಗಳ ಅಭಿಮಾನಿ. ನಿಮ್ಮ ಪ್ರಚಾರ ಖಾತೆಗೆ ನಾನು ? "

"ಅದಾವುದನ್ನೂ ನಾ ಕೇಳುವದಿಲ್ಲ ಶಾಸ್ತ್ರಿಗಳೆ, ನನಗಾಗಿ ನೀವು ಏನನ್ನಾದರೂ ಮಾಡಬೇಕು. ಇಂದಿನಿಂದ ಕಾಂಗ್ರೆಸ್ಸೇತರ ಪಕ್ಷಗಳ ಮೇಲೆ ಬಾಂಬುದಾಳಿ ಸುರುವಾಗಬೇಕು 'ಲಿಂಗವೀರ'ದಲ್ಲಿ. ಬಾಂಬುಗಳ ಖರ್ಚು ವೆಚ್ಚ ನಾನು ನೋಡಿಕೊಳ್ಳುತ್ತೇನೆ."

ಗಂಗಾಧರ ಶಾಸ್ತ್ರಿ ಬಹಳ ಧೂರ್ತ ಆಸಾಮಿ. ಅವನು ಒಮ್ಮೆಲೆ ಯಾವ ಮಾತಿಗೂ ಅಂಟಿಕೊಳ್ಳುವವನಲ್ಲ. ಒಂದೆರಡು ಕ್ಷಣ ಸುಮ್ಮನಿದ್ದು, ಮನಸ್ಸಿನಲ್ಲಿಯೆ ಎಣಿಸಿ ಗುಣಿಸಿ ನೋಡಿಕೊಂಡು ಹೇಳಿದ :

"ನೀವು ನನ್ನನ್ನು ಉಭಯಸಂಕಟಕ್ಕೆ ಸಿಗಿಸುತ್ತಿದ್ದೀರಿ ಸೆಟ್ಟರೇ. ತತ್ವಗಳನ್ನು ಬಿಟ್ಟು ಹೋಗುವದೆಂದರೆ ಎಷ್ಟು ಕಷ್ಟ."

"ಈಗಿನ ಕಾಲದಲ್ಲಿ ತತ್ವಗಳನ್ನು ಯಾರು ಕೇಳ್ತಾರೆ ಶಾಸ್ತ್ರಿಗಳೆ. ಕಾಂಗ್ರೆಸ್ಸನ್ನು ಕಂಡರೆ ಕೆಂಡ ಕಾರುತ್ತಿದ್ದ ನಾನೇ ಅದಕ್ಕೆ ಕೂಡಿಕೊಳ್ಳಲಿಲ್ಲೇನು ? "

"ನಿಮ್ಮ ಮಾತು ಬೇರೆ. ನನ್ನ ಮಾತು ಬೇರೆ. ನಾನು ಪತ್ರಿಕಾಕರ್ತ."

"ಎಷ್ಟು ಮಂದಿ ಪತ್ರಿಕಾಕರ್ತರು ಹೊತ್ತು ಬಂದ ಹಾಗೆ ಕೋಟು ಬದಲಿಸುವದಿಲ್ಲ ಶಾಸ್ತ್ರಿಗಳೆ ? ನೋಡಿರಿ, ನೀವು ಇಲ್ಲ ಅನ್ನಬಾರದು."

"ನಾನೇನು ಮಾಡಬೇಕೆನ್ನುತ್ತೀರಿ ಸೆಟ್ಟರೆ ? "

"ಇಂದಿನಿಂದ ದರಿದ್ರನಾರಾಯಣ ಪಕ್ಷದ ಬಗ್ಗೆ ಉಗ್ರ ಟೀಕೆಗಾರಂಭವಾಗಬೇಕು 'ಲಿಂಗವೀರ'ದಲ್ಲಿ. ಅವರು ನಮ್ಮ ಮತದಾರ ಕ್ಷೇತ್ರದಿಂದ ಮಹಾ

ಲಿಂಗಪ್ಪನನ್ನು ನಿಲ್ಲಿಸಬೇಕೆಂದು ಮಾಡಿದ್ದಾರಂತೆ. ಅವನಿಗೂ ನನಗೂ ಮೊದಲಿನಿಂದಲೂ ವೈರವಿದ್ದೇ ಅದೆಯಲ್ಲ. ನಾನು ಕಾಂಗ್ರೆಸ್ ಪರವಾಗಿ ನಿಲ್ಲುವುದು ಗೊತ್ತಾದ ಕೂಡಲೆ ಆ ವಿಶಾಲಪ್ಪ ಬೇಕೆಂದೇ ನನ್ನ ಈ ವೈರಿಯನ್ನ ನನ್ನ ವಿರುದ್ಧ ನಿಲ್ಲಿಸಬೇಕೆಂತ ಮಾಡಿದ್ದಾನೆ ವಿಶಾಲಪ್ಪ ಮಹಾಲಿಂಗಪ್ಪ ಇಬ್ಬರನ್ನೂ ಹೆಣ ಹಾಕಬೇಕು ನೀವು. ಮಹಾಲಿಂಗಪ್ಪ ಕುಡುಕ, ವ್ಯಭಿಚಾರಿ. ಇದನ್ನೆಲ್ಲಾ ಬರೆದು ಜನರಲ್ಲಿ ಅವನೆಂದರೆ ಅಸಹ್ಯ ಹುಟ್ಟುವಂತೆ ಮಾಡಬೇಕು."

"ವೈಯಕ್ತಿಕ ವಿಷಯ ಬರೆದರೆ ಖಟ್ಲೆ ಹಾಕುತ್ತಾರವರು."

"ಹಾಕಲಿ, ಹಾಕಲಿ. ನಾನಿದ್ದೀನಲ್ಲಾ. ನಿಮಗೇನು ಚಿಂತೆ? ನಿಮ್ಮ ಕೂದಲು ಕೊಂಕದ ಹಾಗೆ ನೋಡಿಕೊಂತೇನೆ. ಸುಪ್ರೀಂ ಕೋರ್ಟಿನ ವರೆಗೂ ಹೋಗಿ ಬಡಿದಾಡುವ ತಯಾರಿ ಇಟ್ಟೆದ್ದೇನೆ. ಅಂತೂ ಇಂತೂ ಮಹಾಲಿಂಗಪ್ಪ ಆರಿಸಿ ಬರಬಾರದು. ಹಾಗೆ ಮಾಡಬೇಕು."

ಅದೇ ದಿನವೇ ಐದುನೂರು ರೂಪಾಯಿಗಳನ್ನು ಶಾಸ್ತ್ರಿಗೆ ಕೊಟ್ಟು, ಮತ್ತೆ ಆಗಾಗ ಕೊಡುತ್ತಿರುವುದಾಗಿ ಹೇಳಿ, ವೀರಭದ್ರಸೆಟ್ಟಿ ವಿಜಯಿಯಂತೆ ವಿಜೃಂಭಿಸುತ್ತ ಉಗ್ರಪುರಕ್ಕೆ ಹೊರಟು ಹೋದ.

ಪ್ರತಿಸ್ಪರ್ಧಿಗಳನ್ನು ಎತ್ತಿಕಟ್ಟಿ ಲಾಭ ಹೊಡೆಯುವ ಕಲೆಯನ್ನು ಪೂರ್ಣವಾಗಿ ಹಸ್ತಗತ ಮಾಡಿಕೊಂಡ ಬುದ್ಧಿವಂತ ಗಂಗಾಧರ ಶಾಸ್ತ್ರಿ. ವೀರಭದ್ರ ಸೆಟ್ಟಿಯ ಅಸಂಸ್ಕೃತ ಮನಸ್ಸಿಗೆ ಪೂರ್ಣ ತೃಪ್ತಿಯಾಗುವಂಥ ಅಶ್ಲೀಲ ಭಾಷೆಯಲ್ಲಿ ವಿಶಾಲಪ್ಪ, ಮಹಾಲಿಂಗಪ್ಪ, ಟೋಪಿ ಶಾಂತಣ್ಣ ಮೊದಲಾದವರನ್ನು ಟೀಕಿಸಿ ಲೇಖನ ಪ್ರಕಟಿಸತೊಡಗಿದ. "ಕಾಂಗ್ರೆಸ್ಸಿನಲ್ಲಿ ಹೊಲಸೆಬ್ಬಿಸಿ ಹೊರಗೆ ಬಂದು ಈಗ ದರಿದ್ರನಾರಾಯಣ ಸೇವೆಯ ಸೋಗು ಹಾಕಿದ ವಿಶಾಲಪ್ಪ," "ದಿನದ ಇಪ್ಪತ್ನಾಲ್ಕು ತಾಸುಗಳನ್ನೂ ಹೆಣ್ಣು ಹೆಂಡಗಳ ಸಹವಾಸದಲ್ಲಿ ಕಳೆಯುತ್ತ ಬಡವರ ಸೇವೆಯ ಸೋಗು ಹಾಕಿದ ಮಹಾಲಿಂಗಪ್ಪ," "ಶರಣ ಶರಣೆಯರ ಸಂಘದ ಇಪ್ಪತ್ತು ಸಾವಿರ ರೂಪಾಯಿಗಳನ್ನು ಎತ್ತಿಹಾಕಿ ಸೂಳೆಯರಿಗಾಗಿ ಹಾಳು ಮಾಡಿ ಈಗ ರೈತಕೂಲಿಕಾರರ ಹಣ ಹಾರಿಸಲು ಮುಂದೆ ಬಂದಿರುವ, ಟೋಪಿ ಹಾಕುವ ಕಲೆಯಲ್ಲಿ ಪಳಗಿದ ಟೋಪಿ ಶಾಂತಣ್ಣ," ಎಂಬ ವರ್ಣರಂಜಿತ ಶೀರ್ಷಿಕೆಗಳಡಿಯಲ್ಲಿ ಪ್ರಕಟವಾದ ಆ ಲೇಖನಗಳು ಸಹಜ

ವಾಗಿಯೆ ಜಿಲ್ಲೆಯಲ್ಲೆಲ್ಲ ಕೋಲಾಹಲವುಂಟುಮಾಡಿದುವು. ಕಾಂಗ್ರೆಸ್ಸಿನವರಿಗೆಲ್ಲ ಅದೊಂದು ತಮಾಷೆಯಾಗಿ ಪರಿಣಮಿಸಿದರೆ ದರಿದ್ರನಾರಾಯಣ ಪಕ್ಷದವರಿಗೆ ಕಣ್ಣು ಕೆಂಪಗಾಗದಿರಲಿಲ್ಲ. "ಆ ಶಾಸ್ತ್ರಿಯನ್ನ ಒಂದು ಕೈ ನೋಡೇ ಬಿಡಬೇಕು," ಎನ್ನುತ್ತಾ ಭೀಮರಾಯಪ್ಪ ಕೋಪದಿಂದ ಕೈ ಹಿಸುಕಿಕೊಂಡು "ನಾಲ್ಕು ಮಂದಿಗೆ ಹೇಳಿ ಅವನ ಪ್ರೆಸ್ಸನ್ನೇ ಸುಡಿಸಿ ಬಿಡೋಣವೇನು ಅಣ್ಣಾವರೆ ? " ಎಂದು ವಿಶಾಲಪ್ಪನನ್ನು ಕೇಳಿದ.

ಆ ಲೇಖನಗಳನ್ನೋದಿ ವಿಶಾಲಪ್ಪನವರಿಗೂ ಸಿಟ್ಟು ಬಂದಿದ್ದಿತಾದರೂ ಅದನ್ನು ಹೊರಗೆ ತೋರಿಸದೆ ಸಮಾಧಾನದಿಂದಲೇ ಹೇಳಿದರು :

"ಈಗ ಚುನಾವಣೆಯ ಕಾಲ. ಇಂಥ ಹುಂಬತನ ಮಾಡಿದರೆ ನಮಗೇ ಕೇಡು. ನಾಗರಹಾವಿನ ದ್ವೇಷ ಕಟ್ಟಿಕೊಂಡರೂ ಕಟ್ಟಿಕೊಳ್ಳಬಹುದು, ಪತ್ರಿಕೆಯವರ ದ್ವೇಷ ಕಟ್ಟಿಕೊಳ್ಳಬಾರದು ಈಗ. ಉಪಾಯದಿಂದಲೇ ಅವರನ್ನು ಹಾದಿಗೆ ತರಬೇಕು"

ಹೊಡೆಯುವುದು, ಬಡೆಯುವುದು, ಬೆಂಕಿಯಿಡುವುದು ಇವೇ ಮೊದಲಾದ 'ಉಪಾಯ'ಗಳನ್ನು ಬಿಟ್ಟು ಬೇರೆ ಸಾಮೋಪಾಯಗಳನ್ನೇ ಅರಿತವನಲ್ಲ ಭೀಮರಾಯಪ್ಪ, ಅವನೆಂದ : "ಮಚ್ಚಿಗಾರ ದೇವರಿಗೆ ಮಚ್ಚೇಪೆಟ್ಟೇ ಬೇಕು ಅಣ್ಣಾವರೆ ? "

"ರಸ್ತೆಯಲ್ಲಿ ಶಾಸ್ತ್ರಿ ಹೋಗುವಾಗ ಯಾರಿಗಾದರೂ ಹೇಳಿ ಮೊಚ್ಚೆಯಿಂದ ಬಡಿಸಿಬಿಟ್ಟರೆ ಕೆಲಸ ಬಗೆ ಹರಿಯುತ್ತದೆ," ಎಂದ ಶಾಂತಣ್ಣ.

"ನಿಮಗೆ ಏನೇನೂ ತಿಳಿಯುವದಿಲ್ಲ. ಅಂಥಾದ್ದೇನಾದರೂ ಮಾಡ ಹೋಗಿ ಎಲ್ಲಾ ಕೆಡಿಸಿ ಬಿಟ್ಟೇರಿ, ಸುಮ್ಮನಿರಿ. ನಾನೆಲ್ಲಾ ಅವನನ್ನು ಸರಿಪಡಿಸುತ್ತೇನೆ," ಎಂದು ಸ್ಪಷ್ಟವಾಗಿ ಹೇಳಿ ವಿಶಾಲಪ್ಪ ಅವರನ್ನು ಕಳಿಸಿಕೊಟ್ಟರು.

ಮಹಾಲಿಂಗಪ್ಪನನ್ನು ಮಾತ್ರ ಅಷ್ಟು ಸುಲಭವಾಗಿ ಶಾಂತಗೊಳಿಸಲು ಸಾಧ್ಯವಾಗಲಿಲ್ಲ.

"ಈ ಶಾಸ್ತ್ರಿಯನ್ನು ಬಿಟ್ಟರೆ ನಾನು ಮೀಸೆ ಹೊತ್ತು ಏನುಪಯೋಗ ಅಣ್ಣಾವರೆ! ಕೋರ್ಟಿಗೆಳೆದು ಅವನ ಪ್ರೆಸ್ಸು ಮನಿಮಾರು ಎಲ್ಲಾ ಜಪ್ತು

ಮಾಡಿಸಿ ಬಿಟ್ಟಾಗಲೇ ನನ್ನ ಸಿಟ್ಟು ಶಾಂತವಾಗೂದು."

"ಚುನಾವಣೆಗೆ ನಿಲ್ಲುವ ವಿಚಾರ ಬಿಡುವ ಹಾಗಿದ್ದರೆ ಖಟ್ಲಿ ಹಾಕಲಿಕ್ಕೆ ಅಡ್ಡಿಯಿಲ್ಲ," ಎಂದರು ವಿಶಾಲಪ್ಪ.

ಮಹಾಲಿಂಗಪ್ಪ ವಿಸ್ಮಿತನಾಗಿ ಕೇಳಿದ:

"ಅದ್ಯಾಕೆ ಬಿಡಬೇಕ್ರೀ?"

"ಚುನಾವಣೆಗೆ ನಿಲ್ಲುವ ಉಮೇದುವಾರರು ನೀವು ಹೀಗೆ ಖಟ್ಲಿ ಗಿಟ್ಲಿ ಗಳಲ್ಲಿ ಸಿಕ್ಕಿಕೊಳ್ಳಬಾರದು. ಶಾಸ್ತ್ರಿ ಅದನ್ನೂ ದುರುಪಯೋಗ ಮಾಡಿಕೊಳ್ಳದೆ ಬಿಡುವದಿಲ್ಲ. ಖಟ್ಲೆಯ ವರದಿಯನ್ನೇ ವಾರಾ ವಾರಾ ಪ್ರಕಟಿಸುತ್ತಾ ಜನರಲ್ಲಿ ನಿಮ್ಮ ಬಗ್ಗೆ ಅಸಹ್ಯ ಹುಟ್ಟುವಂತೆ ಮಾಡಬಹುದು ಅವ. ಅದಕ್ಕೇ ನಾ ಹೇಳುವದು, ಈಗ ಸಿಟ್ಟಾಗಿ ಉಪಯೋಗವಿಲ್ಲ. ಶಾಸ್ತ್ರಿಯಂಥವನ ಬಾಯಿ ಮುಚ್ಚಿಸುವದೇನು ದೊಡ್ಡ ಕೆಲಸ? ಈ ಪತ್ರಿಕಾಸಂಪಾದಕರೆಂದರೆ ನನಗೆ ಗೊತ್ತಿಲ್ಲವೇನು? ತುಣುಕು ರೊಟ್ಟಿ ಒಗೆದರೆ ಬಾಲ ಅಲ್ಲಾಡಿಸುವ ನಾಯಿಗಳಿದ್ದ ಹಾಗೆ ಇವರು. ಇಷ್ಟು ದಿನ ಕಾಂಗ್ರೆಸ್ಸಿನ ವೈರಿಯಾಗಿದ್ದ ಶಾಸ್ತ್ರಿ ಒಮ್ಮಿಂದೊಮ್ಮೆ ಕಾಂಗ್ರೆಸ್ ಪ್ರೇಮಿಯಾಗಲೂ ಕಾರಣವಿದೆ. ವೀರಭದ್ರಸೆಟ್ಟಿ ಇವನಿಗೆ ಎರಡು ಮೂರು ಸಾವಿರವನ್ನಾದರೂ ಕೊಟ್ಟು ನಮ್ಮ ವಿರುದ್ಧ ಛೂ ಬಿಟ್ಟಿರಬೇಕು."

"ನನಗೂ ಸಂಶಯ ಬಂದಿತ್ತು ಅಣ್ಣಾವರೆ. ಆ ಸೆಟ್ಟಿ ಮೊದಲಿಂದಲೂ ನನ್ನ ಮ್ಯಾಲ ವಿಷ ಕಾರುತ್ತಾ ಬಂದಾನ. ಅವಗ ಒಮ್ಮೆ ಚಲೋ ಬುದ್ಧಿ ಕಲಿಸಬೇಕು ನೋಡ್ರಿ. ಎಂದೆಂದೂ ನನ್ನ ತಂಟೆಗೆ ಬಂದಿರಬಾರದು ಅವ. ಅಲ್ಲರೀ ಅಣ್ಣಾವರೆ, ನಮ್ಮ ಕೈಯಾಗೂ ಒಂದು ಪೇಪರಿದ್ದರೆ ಚಲೋ ಆಗುತೈತಿ ನೋಡ್ರಿ. ಆ 'ಜನಪಥ' ಪತ್ರಿಕೆ ನಮ್ಮ ಕಡೆ ಆಗಬಹುದೇನ್ರಿ?"

"ಅವನನ್ನು ನಂಬುವದಕ್ಕೇ ಸಾಧ್ಯವಿಲ್ಲ ಮಹಾಲಿಂಗಪ್ಪ. ಈ ವಾರ ನಮ್ಮ ಪಕ್ಷ ಹಿಡಿದು ಬರೆದರೆ ಮುಂದಿನ ವಾರ ಕಾಂಗ್ರೆಸ್ ಪಕ್ಷ ಹಿಡಿದು ಬರೆಯುತ್ತಾನೆ."

"ಕಾಂಗ್ರೆಸ್ಸಿನವರು ರೊಕ್ಕ ಕೊಡ್ತಾರೇನ್ರೀ ಅವಗ?"

"ರೊಕ್ಕ ಇಲ್ಲ, ಏನಿಲ್ಲ. ಅವನ ಸ್ವಭಾವವೇ ಹಾಗೆ. ಯಾರನ್ನಾದರೂ

ಬಯ್ಯದಿದ್ದರೆ ಸಮಾಧಾನವೇ ಇರುವದಿಲ್ಲ ಅವನಿಗೆ. ವಾರ ವಾರ ಬೇರೆ ಬೇರೆ ಜನರನ್ನು ಬಯ್ಯುತ್ತಿದ್ದರೆ ಬಹಳ ಆನಂದ ಅವನಿಗೆ."

"ನಾವೇ ಒಂದು ಪೇಪರು ಯಾಕೆ ಮಾಡಬಾರದು ಅಣ್ಣಾವರೆ, ಯಾವನೊಬ್ಬ ಲೇಖಕನ್ನ ಹಿಡುಕೊಂಡು ?"

"ನಾನೂ ಅದೇ ವಿಚಾರದಲ್ಲಿದೇನೆ. ಈಶ್ವರ ಅಂತ ಒಬ್ಬ ಲೇಖಕ ಇದಾನೆ ಅವನಿಗೆ ಹೇಳಿ ಕಳಿಸುತ್ತೇನೆ. ಅವನು ಒಪ್ಪಿದರೆ ಪೇಪರು ಸುರು ಮಾಡೋಣ. ಅದರೆ ಹಣ ಬಹಳ ಬೇಕಾಗುತ್ತದೆ."

"ಬಹಳ ಅಂದರೆ ಎಷ್ಟು ?"

"ಎಂಟು ಹತ್ತು ಸಾವಿರವಾದರೂ ಬೇಕು."

"ಇಷ್ಟೇ ಹೌದಲ್ಲೋ. ಅದಕ್ಯಾತಕ್ಕೆ ಚಿಂತೆ? ನಾನು ಅರ್ಧ ಕೊಡ್ತೇನೆ. ಬ್ಯಾರೆ ಉಮೇದುವಾರರು ಸ್ವಲ್ಪ ಸ್ವಲ್ಪ ಕೊಡಲಿ. ಆದಷ್ಟು ಬೇಗ ಪತ್ರಿಕೆ ಸುರು ಆದರೆ ಒಳ್ಳೇದು ನೋಡ್ರಿ. ಶಾಸ್ತ್ರಿಯಂಥವರಿಗೆ ಉತ್ತರ ಕೊಡಲಿಕ್ಕೂ ಆದೀತು."

"ಹೌದು, ಹೌದು," ಎಂದರು ವಿಶಾಲಪ್ಪ.

ತಕ್ಷಣ ಕಳ್ಳೀಕಾಯಿಗೆ ಬಂದು ತಮ್ಮನ್ನು ಕಾಣಬೇಕೆಂದು ಅದೇ ದಿನವೆ ಅವರು ಈಶ್ವರನಿಗೆ ಕಾಗದ ಹಾಕಿದರು.

ಒಂದು ವಾರ ಕಳೆದರೂ ಈಶ್ವರ ಬರಲಿಲ್ಲ.

"ಯಾಕೆ ಬರಲಿಲ್ಲವೋ ಏನೊ. ಅವನಿಗೇನೋ ಜಡ್ಡು ಅಂತ ಕೇಳಿದ್ದೆ. ಈಗ ಹ್ಯಾಗಿದೆಯೊ. ನೀನೇ ಹೋಗಿ ಮಾತಾಡಿಕೊಂಡು ಬಾ ಭೀಮರಾಯ," ಎಂದು ಹೇಳಿ ಅವನನ್ನು ಈಶ್ವರನ ಊರಿಗೆ ಕಳಿಸಿಕೊಟ್ಟರು.

ಭೀಮರಾಯಪ್ಪ ಬಂದ ದಿನ ಈಶ್ವರನ ಮೈಯಲ್ಲಿ ಜ್ವರವೇನೂ ಇರಲಿಲ್ಲ. ಮಧ್ಯಾಹ್ನದ ಊಟ ಮುಗಿಸಿಕೊಂಡು ಕಾಡಾಪುರಕ್ಕೆ ಬಂದಿದ್ದ ಸದಾಶಿವನ ಜತೆ ಮಾತನಾಡುತ್ತ ಕುಳಿತಿದ್ದ ಈಶ್ವರ ಭೀಮರಾಯಪ್ಪನನ್ನು ಹಸನ್ಮುಖದಿಂದ ಬರಮಾಡಿಕೊಂಡು,

"ಏಳಿರಿ, ಮೊದಲು ಊಟವಾಗಲಿ," ಎಂದು ಉಪಚರಿಸಿದ.

"ಕಂಠದ ವರೆಗೂ ಹೊಡೆದು ಬಂದಿದ್ದೇನೆ ಮಹಾರಾಯ. ಈಗ

ಸ್ವಲ್ಪ ಚಹ ಆದರೆ ಸಾಕು," ಎಂದು ಹೇಳುತ್ತಾ ಭೀಮರಾಯಪ್ಪ ತನ್ನ ಭೀಮ ಕಾಯವನ್ನು ಧಿಂಬಿಗೊರಗಿಸಿ ಕಾಲು ಚಾಚಿ ಬಿದ್ದುಕೊಂಡ.

ಚಹ ಕುಡಿದು, ಸುಧಾರಿಸಿಕೊಂಡ ತರುವಾಯ ಪತ್ರಿಕೆಯ ವಿಷಯವನ್ನೆತ್ತಿ ಭೀಮರಾಯಪ್ಪ ಹೇಳಿದ:

" ನಿಮ್ಮ ಮೈಯಲ್ಲಿ ನೆಟ್ಟಗಿದ್ದರೆ ಇವತ್ತೇ ಬರಲಿಕ್ಕೆ ಹೇಳಿದ್ದಾರೆ ವಿಶಾಲಪ್ಪನವರು."

" ಇವತ್ತೇನೊ ಜ್ವರ ಇಲ್ಲ ಮೈಯಲ್ಲಿ. ರಾತ್ರೆ ಬಂದರೂ ಬಂದೀತು. ಅದರ ನಿಯಮವಿಲ್ಲ."

" ಇದು ಎಂಥ ಜ್ವರ ಈಶ್ವರ ? "

" ಟಿ. ಬಿ. ಅಂತ ಡಾಕ್ಟರು ಹೇಳುತ್ತಾರೆ."

" ನೀವು ಹೀಗೆ ಸುಮ್ಮನೆ ಕೂಡುವದಕ್ಕಿಂತ ಎಲ್ಲಿಗಾದರೂ ಹೋಗಿ ಚಿಕಿತ್ಸೆ ಮಾಡಿಸಿಕೊಳ್ಳಬಾರದೇಕೆ ? "

" ಮಾಡಿಸಿಕೊಂಡೇನು. ಅದಕ್ಕೆಲ್ಲಾ ರೊಕ್ಕ ಬೇಕಲ್ಲ ಭೀಮರಾಯಪ್ಪ?"

" ನಿಮಗೇನ್ರೀ ಕಡಮೆ ಲೇಖಕರಿಗೆ ರೊಕ್ಕ? ನೀವು ಮನಸು ಮಾಡಿದರೆ ಸಾವಿರಾರು ರೂಪಾಯಿ ಗಳಿಸಬಹುದಲ್ಲಾ? "

" ಸಾವಿರಾರು ರೂಪಾಯಿ ! " ಈಶ್ವರ ವಿಷಣ್ಣ ನಗು ಬೀರಿ ಹೇಳಿದ: " ನಾನು ಲೇಖಕನಾಗಿ ಕೆಲಸ ಮಾಡುತ್ತ ಬಂದು ಹದಿನೈದು ವರ್ಷವಾಯ್ತು ಭೀಮರಾಯಪ್ಪ. ಹದಿನೈದು ರೂಪಾಯಿ ಕೂಡಾ ಉಳಿಸಲಿಕ್ಕಾಗಿಲ್ಲ. ಇನ್ನು ಸಾವಿರಾರು ರೂಪಾಯಿ...."

" ಇದು ವರೆಗೆ ಆದದ್ದು ಆಯ್ತು. ಈಗ ಬಂಗಾರದಂಥ ಸಂಧಿ ಬಂದೈತಿ. ನೀವು ನಮ್ಮ ಪೇಪರು ಮಾಡಿಕೊಟ್ಟರೆ ಮೂರು ತಿಂಗಳಲ್ಲಿ ಸಾವಿರ ರೂಪಾಯಿ ಯಾದರೂ ಸಿಕ್ಕಾವು."

ಈಶ್ವರ ಮನಸ್ಸಿನಲ್ಲಿಯೆ ಯೋಚಿಸತೊಡಗಿದ. ಔಷಧೋಪಚಾರಕ್ಕಾಗಿ ಹಣವಂತೂ ಅತ್ಯಾವಶ್ಯಕವಾಗಿತ್ತು. ಸಂಪಾದನೆ ಮಾಡಲು ಬೇರಾವ ಮಾರ್ಗವೂ ಇರಲಿಲ್ಲ. ಜ್ವರವಿರಲಿ, ಇಲ್ಲದಿರಲಿ, ಮೂರು ತಿಂಗಳ ಕಾಲ ಹೇಗಾದರೂ ಪತ್ರಿಕೆ ನಡಸಿ ಹಣ ಹೊಂದಿಸಿಕೊಳ್ಳಲೇ ಎಂದೂ ಅವನಿಗೆನ್ನಿಸಿತು.

" ನಾನು ಮಾಡಬೇಕಾದ ಕೆಲಸವೇನು ಭೀಮರಾಯಪ್ಪ? "

" ಅದನ್ನೇನು ಹೇಳಬೇಕೆ? ನಿಮಗೆಲ್ಲಾ ಗೊತ್ತೇ ಇರಬೇಕಲ್ಲ. ನಮ್ಮ ಪಕ್ಷ ಸ್ಥಾಪನಾ ಆದಂದಿನಿಂದ ಹೊಟ್ಟೆಕಿಚ್ಚು ಪಡುತ್ತಿರುವ ನಮ್ಮ ವೈರಿಗಳು ಪತ್ರಿಕೆಗಳಲ್ಲಿ ಅಲ್ಲದ ಸಲ್ಲದ ಅಪಪ್ರಚಾರ ನಡಸಿದ್ದಾರೆ. ಅದನ್ನೆಲ್ಲ ನೀವು ಖಂಡಿಸಿ ಅವರನ್ನು ಹೆಣ ಹಾಕಬೇಕಾಗುತ್ತೈತಿ. 'ಲಿಂಗವೀರ'ದೊಳಗೂ ಇತ್ತಿತ್ತಲಾಗೆ ಲೇಖ ಬರಲಿಕ್ಕೆ ಹತ್ತಿದಾವ. ನೀವೂ ನೋಡಿರಬಹುದು."

" ನೋಡಿದ್ದೇನೆ. ಕೆಲವು ಸತ್ಯ ಸಂಗತಿಗಳನ್ನೂ ಅವರು ಬರೆದಿದ್ದಾರೆ."

" ಅಂದರೆ? ನೀವೂ ಆ ಶಾಸ್ತ್ರಿಯ ಹಾಗೇ ಮಾತಾಡುತ್ತೀರಲ್ಲಾ? "

" ಶಾಸ್ತ್ರಿಯ ಹಾಗೇನೂ ಅಲ್ಲ. ಆದರೆ, ಮಹಾಲಿಂಗಪ್ಪನ ವೈಯಕ್ತಿಕ ನಡತೆ ನೆಟ್ಟಗಿಲ್ಲವೆನ್ನುವದು ಮಾತ್ರ ನನಗೆ ಗೊತ್ತಿದೆ. ಜಿಲ್ಲೆಯ ಜನರಿಗೆಲ್ಲಾ ಗೊತ್ತಿದೆ. ರೈತರನ್ನು ಮೋಸಗೊಳಿಸಿಯೇ ಅವನು ಲಕ್ಷಾಧೀಶನಾದದ್ದು. ಅಂಥವನನ್ನು ನೀವು ನಿಮ್ಮ ಪಕ್ಷದಿಂದ ಹುರಿಯಾಳಾಗಿ ನಿಲ್ಲಿಸುವದು ತಪ್ಪು. ದರಿದ್ರನಾರಾಯಣ ಪಕ್ಷ ಅಂದ ಮೇಲೆ ದರಿದ್ರರ ನಿಜವಾದ ಪ್ರತಿನಿಧಿಗಳನ್ನು ಚುನಾವಣೆಗೆ ನಿಲ್ಲಿಸಬೇಕು."

" ನೀವು ಬರೀ ಆದರ್ಶವಾದಿಯ ಹಾಗೆ ಆಡುತ್ತೀರಿ. ದರಿದ್ರರನ್ನು ಚುನಾವಣೆಗೆ ನಿಲ್ಲಿಸಿದರೆ ಖರ್ಚಿಗೆ ಹಣ ಎಲ್ಲಿಂದ ತರಬೇಕು? ಚುನಾವಣೆ ಅಂದರೆ ಸಾಧಾರಣ ಸಂಗತಿಯಲ್ಲ. ಹತ್ತಿಪ್ಪತ್ತು ಸಾವಿರ ರೂಪಾಯಿ ಬೇಕಾಗುತ್ತದೆ."

" ಹತ್ತಿಪ್ಪತ್ತು ಸಾವಿರ ಬೇಕೇ? ಯಾತಕ್ಕಾಗಿ? "

" ಚುನಾವಣೆಗಳ ವಿಷಯ ನಿಮಗೆ ಗೊತ್ತೇ ಇಲ್ಲಂತ ಕಾಣುತ್ತೈತಿ."

" ಇಲ್ಲ. ನನಗೆ ಗೊತ್ತಿಲ್ಲ."

" ಹ್ಯಾಂಡ್‌ಬಿಲ್ಲು, ವಾಲ್‌ಪೋಸ್ಟರು, ಪತ್ರಿಕೆಗಳಲ್ಲಿ ಜಾಹಿರಾತು, ಪ್ರತಿಯೊಂದು ಊರನ್ನೂ ತಿರುಗಿ ಪ್ರಚಾರ ಮಾಡಲು ಮೋಟರುಗಳ ಖರ್ಚು, ಪೆಟ್ರೋಲು, ಕಾರ್ಯಕರ್ತರಿಗೆ ಊಟ ತಿಂಡಿ ಖರ್ಚು, ವೋಟರ್ ಲಿಸ್ಟಿನ ಖರ್ಚು, ಏಜಂಟರ ಖರ್ಚು, ಮತದಾನದ ದಿನ ಚಹಾ ಫಳಾರದ ಖರ್ಚು, ಲೌಡ್‌ಸ್ಪೀಕರ್ ಮೊದಲಾದ್ದರ ಖರ್ಚು—ಹೀಗೇ ನೂರಾರು ಖರ್ಚು ಇರು

ತ್ತವೆ ಈಶ್ವರ. ಮತದಾರರಿಗೆ ಒಬ್ಬೊಬ್ಬರಿಗೂ ಐದೈದು ಹತ್ತು ಹತ್ತು ರೂಪಾಯಿ ಕೊಟ್ಟು ಮತ ದೊರಕಿಸುವ ಕೆಟ್ಟ ಪದ್ಧತಿಯನ್ನು ಹಿಂದಿನವರು ತಂದಿದ್ದಾರೆ. ನಾವೂ ಅದಕ್ಕೇ ಶರಣು ಹೋಗುವ ಪ್ರಸಂಗ ಬಂದರೂ ಬರ ಬಹುದು."

"ನೀವೂ ಹಾಗೇ ಮಾಡಬೇಕಾದರೆ ಕಾಂಗ್ರೆಸ್ಸಿನ ಬದಲು ನೀವು ಆರಿಸಿ ಬಂದರಾದರೂ ಏನುಪಯೋಗ ಜನರಿಗೆ?" ಎಂದ ಸದಾಶಿವ.

"ಜನ ಅಂದರಾದರೂ ಯಾರು ಸದಾಶಿವ? ಒಂದು ವೋಟಿಗೆ ಐದು ರೂಪಾಯಿ ಕೇಳುವ ಈ ಜನರಿಗಾಗಿ ನಾವಾದರೂ ಯಾಕೆ ಬಡಕೊಳ್ಳಬೇಕು? ನೀವು ಸುಮ್ಮನೆ ಜನ ಜನ ಅಂತ ಸಾಯ್ತೀರಿ. ಚುನಾವಣೆಯಲ್ಲಿ ಹಣ ಖರ್ಚು ಮಾಡಿಕೊಂಡು ನೀವೇನಾದರೂ ಸೋತಿರೆಂದರೆ ಇದೇ ಜನ ನಿಮ್ಮನ್ನು ನೋಡಿ ನಗುತ್ತಾರೆ ಜಗತ್ತಿನ ಅನುಭವ ಇನ್ನೂ ನಿಮಗೆ ಬಂದ ಹಾಗೆ ಕಾಣುವ ದಿಲ್ಲ," ಎಂದ ಭೀಮರಾಯಪ್ಪ. "ಅಂತೂ ಇಂತೂ ಕಾಂಗ್ರೆಸ್ಸನ್ನು ಮೊದಲು ಅಧಿಕಾರದಿಂದ ಇಳಿಸಬೇಕು. ಅದಕ್ಕೆ ಪಕ್ಷ ಮಾಡೀವಿ. ನಿಮ್ಮಂಥವರು ಸಹಾಯ ಮಾಡಿದರೆ ಯಶಸ್ಸು ಸಿಕ್ಕಬಹುದು. ನೀವೂ ಟೀಕೆ ಮಾಡುತ್ತಾ ಕೂತರೆ ನಮಗೆ ಸಹಾಯ ಮಾಡುವವರ್‍ಯಾರು?"

"ಪಕ್ಷದಲ್ಲಿ ಸರಿಯಾದ ಜನರನ್ನು ಸೇರಿಸಿದರೆ ನನ್ನಿಂದಾದಷ್ಟು ಮಾಡ ಲಿಕ್ಕೆ ನಾ ಸಿದ್ಧ."

"ಟೋಪಿ ಶಾಂತಣ್ಣನಂಥವರನ್ನು ಕಾರ್ಯದರ್ಶಿಯಾಗಿ ಮಾಡುವದು ದೊಡ್ಡ ತಪ್ಪು. ಅವನ ಬಗ್ಗೆ ಗಂಗಾಧರ ಶಾಸ್ತ್ರಿ ಬರೆದದ್ದೆಲ್ಲಾ ನಿಜವೇ ಇದೆ. ಶರಣ ಸಂಘದ ಹಣ ಅವನು ಎತ್ತಿ ಹಾಕಿದ್ದೂ ನಿಜ. ಮನೆಯಲ್ಲಿ ಹೆಂಡತಿ, ಎಂಟು ಮಕ್ಕಳು ಇದ್ದರೂ ಹೊರಗಡೆ ಇಬ್ಬರು ಸೂಳೆಯರನ್ನಿಟ್ಟದ್ದೂ ನಿಜ. ಅಂಥವರನ್ನು ಪ್ರಸಿದ್ಧ ವ್ಯಕ್ತಿಗಳನ್ನಾಗಿ ಮಾಡಲು ಪೇಪರು ಬೇಕಾಗಿವೆ ಯಲ್ಲವೇ ನಿಮಗೆ?"

"ನಿಮಗೆಷ್ಟು ಹೇಳಿದರೂ ತಿಳಿಯುವದಿಲ್ಲ," ಎಂದು ಅಕ್ಕಸದಿಂದ ನುಡಿದು ಭೀಮರಾಯಪ್ಪ ಮಾತು ಮುಗಿಸಿದ.

ಸಾಯಂಕಾಲದ ರೈಲಿಗೆ ಕಳ್ಳೀಕಾಯಿಗೆ ಹೊರಟುನಿಂತಾಗ ಅವನು

ಮತ್ತೆ ಕೇಳಿದ :

" ಏನನ್ನುತ್ತೀರಿ ಈಶ್ವರ ? ಕಡೆಯ ಮಾತು ಹೇಳಿಬಿಡಿರಿ."

" ಪತ್ರಿಕೆಯನ್ನೇನೋ ಮಾಡಬಹುದು. ಆದರೆ, ಅದನ್ನು ಪೂರ್ತಿಯಾಗಿ ನನಗೇ ಬಿಟ್ಟುಬಿಡಬೇಕು. ನನ್ನ ಮನಸ್ಸಿಗೆ ಬಂದದ್ದು ನಾನು ಬರೆಯುವವ ಹೀಗೇ ಬರೆ, ಹಾಗೇ ಬರೆ ಅಂತ ಯಾರೂ ಹೇಳಕೂಡದು."

" ಅಂದರೆ ? ನಮ್ಮ ವಿರುದ್ಧವೇ ನೀವು ಬರೆದರೂ ಸುಮ್ಮನಿರಬೇಕು ಅಂತೀರಾ ? "

" ನೀವು ತಪ್ಪು ಮಾಡಿದಾಗ ನಿಮ್ಮನ್ನೂ ಟೀಕಿಸಲೇ ಬೇಕಾಗುತ್ತದೆ. ಬರೀ ನಿಮ್ಮನ್ನು ಹೊಗಳುವದಕ್ಕಲ್ಲ ಪೇಪರ್ ಮಾಡುವದು."

ಭೀಮರಾಯಪ್ಪ ರೇಗಿ ನುಡಿದ :

" ಏನೋ, ನಿರುದ್ಯೋಗಿಯಾಗಿ ಹಳ್ಳಿಯಲ್ಲಿ ಬಿದ್ದಿದ್ದೀರಿ ಅಂತ ನಿಮಗೆ ಸ್ವಲ್ಪ ಉಪಕಾರ ಮಾಡೋಣ ಅಂತ ಪೇಪರ್ ವಿಚಾರ ತೆಗೆದೆವು. ಲೇಖಕರಿಗೇನು ಕೊರತೆ ಕರ್ನಾಟಕದೊಳಗೆ ? ಹಾದಿಗೊಬ್ಬರು ಬೀದಿಗೊಬ್ಬರು ಬಿದ್ದಿದ್ದಾರೆ. ಒಂದು ನೂರು ರೂಪಾಯಿ ಒಗೆದರೆ ಬಂದು ನಾವು ಹೇಳಿದ ಹಾಗೆ ಬರೆಯುತ್ತಾರೆ."

" ಪತ್ರಿಕೋದ್ಯೋಗಿಗಳ ಬಗ್ಗೆ ವಿಲಕ್ಷಣ ಅಭಿಪ್ರಾಯವನ್ನೆ ಇಟ್ಟುಕೊಂಡಿದ್ದೀರಿ. ಪರವಾಯಿಲ್ಲ," ಎಂದು ಶಾಂತವಾಗಿಯೆ ನುಡಿದ ಈಶ್ವರ.

ಕಾಡಾಪುರದ ಯಾತ್ರೆ ಫಲದಾಯಕವಾಗದಿದ್ದುದನ್ನು ತಿಳಿದಾಗ ವಿಶಾಲಪ್ಪನವರಿಗೂ ತಾಳ್ಮೆಯುಳಿಯಲಿಲ್ಲ.

" ಏನೋ ಸ್ವಲ್ಪ ಬರೆಯಲಿಕ್ಕೆ ಬರುತ್ತದೆ ಅಂತ ಇಷ್ಟು ಸೊಕ್ಕು ಅವನಿಗೆ. ಇರಲಿರಲಿ. ಇಂಥವರು ಸಾವಿರ ಲೇಖಕರನ್ನು ನಾನು ಕೊಂಡುಕೊಳ್ಳಬಲ್ಲೆ."

" ಲೇಖ ಬರಿಯೂದು ಅಂದರಾದರೂ ಏನು ದೊಡ್ಡದು ಬಿಡಿರೀ. ನಾನೇ ಬರೀತೇನೆ," ಎಂದ ಟೋಪಿ ಶಾಂತಣ್ಣ.

" ಪಕ್ಷಕಾರರ ಅರ್ಜಿ ಬರೆದ ಹಾಗಲ್ಲ ಲೇಖ ಬರೆಯುವದೆಂದರೆ ! " ಎಂದು ನಗುತ್ತಾ ಹೇಳಿದ ವೀರಣ್ಣ. " ಇವರ ಮಾತು ಕೇಳಿಕೊಂಡು ಪೇಪರ್ ಮಾಡಲಿಕ್ಕೆ ಹೋಗಬೇಡಿರಿ ವಿಶಾಲಪ್ಪನವರೆ. ಫಜೀತಿಯಾದೀತು ಏನಾದರೂ ಮಾಡಿ ಗಂಗಾಧರ ಶಾಸ್ತ್ರಿಯನ್ನೇ ನಮ್ಮ ಕಡೆ ಒಡೆದುಕೊಳ್ಳುವದು

ಚಲೋದು. ಪತ್ರಿಕೆಗೆ ಖರ್ಚು ಮಾಡುವ ಹಣವನ್ನು ಶಾಸ್ತ್ರಿಗೇ ಕೊಟ್ಟು ಬಿಟ್ಟರಾಯಿತು."

ಬಿಡುವಾದಾಗ ಬಂದು ವಿಶಾಲಪ್ಪನವರನ್ನು ಕಾಣಬೇಕೆಂದು ಶಾಸ್ತ್ರಿಗೆ ಕರೆ ಹೋಯಿತು. ಮೂರು ನಾಲ್ಕು ದಿನ ಕಳೆದರೂ ಶಾಸ್ತ್ರಿ ಬರಲಿಲ್ಲ. ಆ ವಾರದ 'ಲಿಂಗವೀರ'ದಲ್ಲಿ ದರಿದ್ರನಾರಾಯಣ ಪಕ್ಷದ ಬಗ್ಗೆ ಮತ್ತೊಂದು ಅತ್ಯುಗ್ರ ಲೇಖನ ಪ್ರಕಟವಾಯಿತು. ಆ ಪಕ್ಷದ ತಿರೋಗಾಮಿಸ್ವರೂಪವನ್ನು ಬಯಲಿಗೆಳೆದು ಹರಿಹರನೂ ತನ್ನ ಪತ್ರಿಕೆಯಲ್ಲಿ ಒಂದು ಲೇಖನ ಬರೆದ

ವಿಶಾಲಪ್ಪ ಗಾಬರಿಗೊಂಡು ಗಂಗಾಧರ ಶಾಸ್ತ್ರಿಯನ್ನು ಕಂಡು ಮಾತ ನಾಡಿ ಬರಲು ಭೀಮರಾಯಪ್ಪನನ್ನು ಕಳಿಸಿಕೊಟ್ಟರು. ಐದು ಸಾವಿರ ರೂಪಾ ಯಿಗಳನ್ನು ತಕ್ಷಣ ಕೊಟ್ಟರೆ ಟೀಕೆಗಳನ್ನು ನಿಲ್ಲಿಸುವುದಾಗಿ ಶಾಸ್ತ್ರಿ ಹೇಳಿದ.

ಪಕ್ಷದ ಹುರಿಯಾಳುಗಳಿಂದ ಐದು ಸಾವಿರ ರೂಪಾಯಿ ಶೇಖರಿಸುವು ದೇನೂ ಕಷ್ಟಕರವಾಗಿರಲಿಲ್ಲವಾದರೂ ಅಷ್ಟು ಹಣವನ್ನು ಶಾಸ್ತ್ರಿಗೆ ಸುರಿಯ ಬೇಕಲ್ಲಾ ಎಂದು ವಿಶಾಲಪ್ಪನವರಿಗೆ ಹೊಟ್ಟೆಯುರಿಯತೊಡಗಿತು.

"ಸದ್ಯಕ್ಕೆ ಒಂದು ಸಾವಿರ ಕೊಡಬಹುದು. ಚುನಾವಣೆ ಮುಗಿದ ಬಳಿಕ ಮತ್ತೆ ಕೊಡುತ್ತೇವೆಂದು ಹೇಳಿ ನೋಡು ಭೀಮರಾಯಪ್ಪ. ಒಪ್ಪಿದರೆ ಒಪ್ಪಿದ, ಇಲ್ಲದಿದ್ದರಿಲ್ಲ. ದೇವರಿದ್ದಾನೆ," ಎಂದು ಹೇಳಿದರು ವಿಶಾಲಪ್ಪ.

ಗಂಗಾಧರ ಶಾಸ್ತ್ರಿಗೆ ಆ ಮಾತು ಮುಟ್ಟುತ್ತಲೂ ಅವನು ಗಹಗಹಿಸಿ ನಗುತ್ತ ಹೇಳಿದ:

"ಒಂದು ಲೇಖಕ್ಕೆ ಒಂದು ಸಾವಿರ ಕೊಡುವವರಿದ್ದಾರೆ ಅಂತ ಹೇಳು ನಿಮ್ಮ ಪುಢಾರಿಗೆ. ಇದು ಎಲೆಕ್ಷನ್ ಕಾಲ. ಏನು ಹುಡುಗಾಟ ಅಂತ ತಿಳಿದಿದ್ದಾರೇನು ವಿಶಾಲಪ್ಪ ?"

ಭೀಮರಾಯಪ್ಪನ ಮೂಲಕ ಶಾಸ್ತ್ರಿಯ ಮಾತು ತಿಳಿದೊಡನೆ ವಿಶಾಲಪ್ಪ ಮನಸ್ಸಿನಲ್ಲಿಯೆ ಏನನ್ನೋ ಲೆಕ್ಕ ಹಾಕುತ್ತ ಮೌನ ವಹಿಸಿದರು.

"ಏನು ಮಾಡೋಣ ಅಣ್ಣಾವರೆ ?"

"ನೋಡೋಣ, ನೋಡೋಣ ಮೊದಲು ಉಮೇದುವಾರರನ್ನು ಆರಿಸಿ ಆಮೇಲೆ ಪತ್ರಿಕೆಯ ಬಗ್ಗೆ ನಿರ್ಧಾರ ಮಾಡೋಣ."

೧೯

ಚುನಾವಣೆಯ ದಿನಗಳು ಸಮೀಪಿಸುತ್ತ ಬಂದ ಹಾಗೆ ನಾಡಿನ ವಾತಾವರಣದಲ್ಲಿ ಬಿಸಿಯೇರತೊಡಗಿತು. ಕಾಂಗ್ರೆಸ್ ಹುರಿಯಾಳುಗಳ ಯಾದಿ ಹೊರಬೀಳುವ ವರೆಗೆ ಕಾದಿದ್ದ ಕಾಂಗ್ರೆಸ್ಸೇತರ ಪಕ್ಷಗಳವರು ತಮ್ಮ ಹುರಿಯಾಳುಗಳ ಕೊನೆಯ ಯಾದಿಯನ್ನು ಸಿದ್ಧಗೊಳಿಸತೊಡಗಿದರು. ಕಾಂಗ್ರೆಸ್ ಚೀಟಿಗಾಗಿ ಯತ್ನಿಸಿ ವಿಫಲರಾದ ಅನೇಕರು ಒಮ್ಮಿಂದೊಮ್ಮೆಲೆ ಕಾಂಗ್ರೆಸ್ಸನ್ನು ತ್ಯಜಿಸಿ, ಕಾಂಗ್ರೆಸ್ಸೇತರ ಪಕ್ಷಗಳಿಗೆ ಕೂಡಿಕೊಂಡು ಅವುಗಳ ವತಿಯಿಂದಲಾದರೂ ಚುನಾವಣೆಗೆ ನಿಲ್ಲುವ ಸಾಹಸಕ್ಕೆ ತೊಡಗಿದರು. ವಿಶಾಲಪ್ಪನವರಿಗೆ ಸುವರ್ಣ ಸಂಧಿಯೆ ಪ್ರಾಪ್ತವಾದಂತಾಯಿತು.

ಹಾಗೆ, ಕಾಂಗ್ರೆಸ್ ಚೀಟಿಗಾಗಿ ಯತ್ನಿಸಿ, ಅಯಶಸ್ವಿಯಾಗಿ, ದರಿದ್ರ ನಾರಾಯಣ ಪಕ್ಷದ ಬೆನ್ನು ಕಟ್ಟಿದವರಲ್ಲಿ ಮಡಿವಾಳ ವಕೀಲನೂ ಒಬ್ಬನಾಗಿದ್ದ. ಮೂವತ್ತು ವರ್ಷಗಳಿಂದ ಕಳ್ಳೀಕಾಯಿ ನಗರದಲ್ಲಿ ವಕೀಲಿ ವ್ಯವಸಾಯ ನಡಸುತ್ತ ಬಂದು ತಕ್ಕಮಟ್ಟಿಗೆ ಆಸ್ತಿಯನ್ನು ಮಾಡಿಟ್ಟುಕೊಂಡಿದ್ದ ಮಡಿವಾಳ. ಜಡ್ಜಿಗಳಿಗೂ ಸರಕಾರಿ ವಕೀಲರಿಗೂ ಲಂಚ ಕೊಡಿಸಿ ಖೂನಿ ಕೇಸುಗಳನ್ನು ಗೆಲ್ಲುವುದರಲ್ಲಿ ಅವನದು ಎತ್ತಿದ ಕೈಯೆಂದು ಹೆಸರಾಗಿತ್ತು. ವೃತ್ತಿಯಲ್ಲಿಯೆ ಆಗಲಿ, ವೈಯಕ್ತಿಕ ಜೀವನದಲ್ಲಿಯೆ ಆಗಲಿ ನ್ಯಾಯ, ನೀತಿಗಳಿಗೆ ಎಂದೂ ಆಸ್ಪದ ಕೊಟ್ಟವನಲ್ಲ ಮಡಿವಾಳ. ಎರಡು ನಿಮಿಷಗಳ ಕಾಲ ಅವನೊಡನೆ ಮಾತನಾಡುವುದಕ್ಕು ಸಹ ಹತ್ತು ರೂಪಾಯಿ ಫೀಜು ಕೊಡಬೇಕಾಗುತಿತ್ತು ರೈತರು. ಹಣವಿಲ್ಲದವರನ್ನು ಅತ್ಯಂತ ಹೀನ ದೃಷ್ಟಿಯಿಂದ ಕಾಣುವುದು ಅವನ ಪರಿಪಾಠವಾಗಿತ್ತು. ಎಂತಲೇ ಅವನ ಹೆಸರು ಕಿವಿಗೆ ಬೀಳುತ್ತಲೂ ಸಾಮಾನ್ಯ ಜನರು ಮೂಗು ಮುರಿಯುತ್ತಿದ್ದರು. ಅಂಥ

ಅಪ್ರಿಯ ವ್ಯಕ್ತಿಯನ್ನು ಚುನಾವಣೆಗೆ ನಿಲ್ಲಿಸಿದಲ್ಲಿ ಕಾಂಗ್ರೆಸ್ಸಿನ ಹೆಸರು ಕೆಡ ಬಹುದೆಂಬ ದೂರಾಲೋಚನೆಯಿಂದ ಅವನಿಗೆ ಚೀಟಿ ಕೊಡಲು ನಿರಾಕರಿಸಿದ್ದ ಕೃಷ್ಣಾಜಿ. ಮಡಿವಾಳ ಹಟಕ್ಕೆ ಕಟ್ಟಿ ಬಿದ್ದು, ವಿಶಾಲಪ್ಪನವರ ಬೆನ್ನು ಬಿದ್ದು ಚೀಟಿಗಾಗಿ ಅಂಗಲಾಚಿ ಕೇಳಿಕೊಂಡ. ಹತ್ತಿಪ್ಪತ್ತು ಸಾವಿರ ರೂಪಾಯಿಗಳ ವರೆಗೂ ಖರ್ಚು ಮಾಡಲು ಸಿದ್ಧನಾಗಿದ್ದ ಅಂಥ ಆಸಾಮಿಯನ್ನು ವಿಶಾಲಪ್ಪ ಬಿಟ್ಟುಕೊಡುವಂತಿರಲಿಲ್ಲ. ಸರಿ. ದರಿದ್ರನಾರಾಯಣನನ್ನು ಯಾವಾಗಲೂ ಕೇವಲ ತಿರಸ್ಕಾರದಿಂದ ನೋಡುತ್ತ ಬಂದಿದ್ದ ಮಡಿವಾಳನೂ ದರಿದ್ರನಾರಾ ಯಣ ಪಕ್ಷದ ಹುರಿಯಾಳುವಾದ!

ಸೋಮಶೇಖರಪ್ಪನವರೂ ಇನ್ನೂ ಕೆಲವರೂ ಮಡಿವಾಳನಿಗೆ ಚೀಟಿ ಕೊಡುವುದನ್ನು ಬಲವಾಗಿ ವಿರೋಧಿಸಿದರಾದರೂ ವಿಶಾಲಪ್ಪನವರ ಮುಂದೆ ಅವರ ಮಾತು ನಡೆಯುವಂತಿರಲಿಲ್ಲ. ವಿಶಾಲಪ್ಪ ರೇಗಿ ಕೂಗಿ ಆರ್ಭಟಿಸಿ ಎಲ್ಲರನ್ನೂ ಬೆದರಿಸಿ ಸುಮ್ಮನಾಗುತ್ತಿದ್ದರು. "ಈ ಹುಂಬನ ಸಂಗಡ ಏನು ವಾದ!" ಎಂದುಕೊಂಡು ಸೋಮಶೇಖರಪ್ಪನವರೂ ಮೌನ ವಹಿಸುತ್ತಿದ್ದರು. "ಏನಾಗುವುದೋ ಆಗಲಿ" ಎಂಬ ಹತಾಶಭಾವನೆ ಅವರನ್ನಾವರಿಸಿ ಕೊಂಡಿತ್ತು.

ಕಾಂಗ್ರೆಸ್ಸೇತರ ಪಕ್ಷಗಳದೊಂದು 'ಸಂಯುಕ್ತರಂಗ' ರಚಿಸಿ, ಎಲ್ಲರೂ ಸೇರಿ ಕಾಂಗ್ರೆಸ್ಸನ್ನು ಎದುರಿಸುವುದೊಳ್ಳೆಯದೆಂದು ಯೋಚಿಸಿದ ರಾಮಣ್ಣ ಆ ವಿಷಯವಾಗಿ ಆಲೋಚನೆ ಮಾಡಲು ಒಂದು ಸಭೆ ಸೇರಿಸಿದ್ದ. ವಿಶಾಲಪ್ಪನವ ರಿಗೆ 'ಸಂಯುಕ್ತರಂಗ' ದ ಮಾತೇ ಇಷ್ಟವಿರಲಿಲ್ಲ.

"ಈ ರಾಮಣ್ಣ ಕಾಮಣ್ಣಗಳನ್ನು ಯಾರು ಕೇಳ್ತಾರೆ ಜಿಲ್ಲೆಯೊಳಗೆ? ನಮ್ಮ ಸಂಗಡ ಸಂಯುಕ್ತರಂಗ ಮಾಡಿಕೊಂಡಾದರೂ ತಾವೂ ಒಬ್ಬಿಬ್ಬರು ಆರಿಸಿ ಬರಬೇಕೆಂಬ ಹೊಂಚು ಅವರದು. ನಮ್ಮ ಜನಪ್ರಿಯತೆಯ ದುರುಪ ಯೋಗ ಮಾಡಿಕೊಳ್ಳುವ ಅವರ ಧೂರ್ತತನಕ್ಕೆ ನಾವೇಕೆ ಬಲಿ ಬೀಳಬೇಕು?" ಎಂದು ಹೇಳಿ ವಿಶಾಲಪ್ಪನವರು ಆ ಸಭೆಗೆ ಹೋಗದೆ ಸುಮ್ಮನಿದ್ದುಬಿಟ್ಟರು. ಅವರ ಪ್ರತಿನಿಧಿಯಾಗಿ ಭೀಮರಾಯಪ್ಪ ಸಭೆಯಲ್ಲಿ ಉಪಸ್ಥಿತನಿದ್ದ. ಎಡ್ವರ್ಡ್, ಕೇಶವ, ವನಮಾಲಾ ಬಂದಿದ್ದರು. ಸಂಯುಕ್ತರಂಗವಾಗುವುದು ಒಳ್ಳೆಯ

ದೆಂದು ಬಗೆದು ಈಶ್ವರ ಸದಾಶಿವರೂ ಸಭೆಗೆ ಬಂದಿದ್ದರು. 'ಲೋಕವಿನಾಶ ಪಕ್ಷ' ಕ್ಕೆ ಮಾತ್ರ ಆಮಂತ್ರಣವಿರಲಿಲ್ಲ.

ಸಂಯುಕ್ತರಂಗದ ಉಪಯುಕ್ತತೆ, ಆವಶ್ಯಕತೆಗಳನ್ನು ಭೀಮರಾಯಪ್ಪನೊಬ್ಬನನ್ನುಳಿದು ಇತರರೆಲ್ಲ ಒಪ್ಪಿಕೊಂಡರು.

"ಕಾಂಗ್ರೆಸ್ಸು ಪ್ರಬಲವಾದ ಸಂಸ್ಥೆ. ಅದಕ್ಕೆ ಅರುವತ್ತು ವರ್ಷಗಳ ಇತಿಹಾಸವಿದೆ. ಅದರ ಬಗ್ಗೆ ಜನರಲ್ಲಿ ಒಂದು ಬಗೆಯ ಅಂಧಶ್ರದ್ಧೆಯೂ ಬೆಳೆದು ಬಂದಿದೆ. ಪಂ. ಜವಾಹರಲಾಲರಂಥ ನಾಯಕರಿನ್ನೂ ಅದರ ಅಧ್ಯಕ್ಷರಾಗಿ ಗಿದ್ದಾರೆ. ಈ ಎಲ್ಲ ಕಾರಣಗಳಿಂದಾಗಿ ಅದರ ಹುರಿಯಾಳುಗಳನ್ನೆದುರಿಸಿ ಗೆಲ್ಲುವದು ಬಹಳ ಕಷ್ಟವಾಗುತ್ತದೆ. ಒಂದೇ ಸೀಟಿಗಾಗಿ ನಾವು ನಾಲ್ಕೈದು ಮಂದಿ ಬಡಿದಾಡಿದರೆ ವೋಟುಗಳು ಹಂಚಿ ಹೋಗಿ ಕಾಂಗ್ರೆಸ್ಸಿಗರೇ ಗೆಲ್ಲಬಹುದು. ಅದಕ್ಕಾಗಿ ನಾವೆಲ್ಲಾ ಒಟ್ಟುಗೂಡಿ ಒಂದು ಸ್ಥಳಕ್ಕೆ ಒಬ್ಬನೇ ಹುರಿಯಾಳುವನ್ನು ನಿಲ್ಲಿಸಬೇಕು. ಅಂದರೆ ಕಾಂಗ್ರೆಸ್ಸನ್ನು ಖಂಡಿತವಾಗಿ ಸೋಲಿಸಬಹುದು" ಎಂದು ಹೇಳಿದ ರಾಮಣ್ಣ.

ಅವನ ಮಾತನ್ನು ಖಂಡಿಸುತ್ತ ಭೀಮರಾಯಪ್ಪ ಬಿಂಕದ ಧ್ವನಿಯಲ್ಲಿ ಹೇಳಿದ :

"ನಾವೂ ಕಾಂಗ್ರೆಸ್ಸಿನಲ್ಲಿದ್ದವರೇ ಅಲ್ಲೇನು? ನಾವೆಲ್ಲಾ ಅದನ್ನು ಬಿಟ್ಟು ಬಂದ ಬಳಿಕ ಅದು ಮುಸುರೆ ಎಲೆಯಂತಾಗಿ ಹೋಗೈತಿ. ಜನರು ಅದಕ್ಕೆ ಕವಡಿಯ ಕಿಮ್ಮತ್ತು ಕೊಡುವದಿಲ್ಲ. ನಮ್ಮ ದರಿದ್ರನಾರಾಯಣ ಪಕ್ಷ ಕಾಂಗ್ರೆಸ್ಸನ್ನು ಎತ್ತಿ ಒಗೆಯುವಷ್ಟು ತಯಾರೈತಿ. ಸಂಯುಕ್ತರಂಗದ ಅಗತ್ಯ ಏನೂ ಇಲ್ಲ. ಒಮ್ಮೆ ಎಲ್ಲರ ಶಕ್ತಿ ಪರೀಕ್ಷೆ ಆಗಿಹೋಗಲಿ."

"ಇಷ್ಟು ಅಹಂಕಾರ ಒಳ್ಳೆಯದಲ್ಲ ಭೀಮರಾಯಪ್ಪ" ಎಂದು ಹೇಳಿದ ಈಶ್ವರ. "ರಾಮಣ್ಣನವರ ಮಾತು ಕೇಳಿ ಎಲ್ಲರೂ ಕೂಡಿಕೊಂಡು ಹೋರಾಡಿದರೆ ಕೆಲವು ಸೀಟುಗಳಾದರೂ ಸಿಕ್ಕಾವು. ಇಲ್ಲದಿದ್ದರೆ ನೀವು ಒಬ್ಬರೂ ಆರಿಸಿ ಬರಲಿಕ್ಕಿಲ್ಲ."

"ಹಾಗೇನಾದರೂ ಆದರೆ ನನ್ನ ಕೈಯಿಂದಲೇ ನನ್ನ ಮೂಗು ಕೊಯ್ದುಕೊಳ್ತೇನಿ" ಎಂದು ನುಡಿದವನೆ ಭೀಮರಾಯಪ್ಪ ಸಭೆಯನ್ನು ತ್ಯಜಿಸಿ ಹೊರಟುಹೋದ.

" ಏನು ಮಾಡುವದು ಈಶ್ವರ! ಕರ್ನಾಟಕದಲ್ಲಿ ಇಂಥ ಬುದ್ಧಿಗೇಡಿಗಳೇ ಬಹಳ. ಆದರಿಂದಲೇ ಇಲ್ಲಿ ಯಾವ ಮಹತ್ವದ ಕೆಲಸವೂ ಆಗುವಂತಿಲ್ಲ" ಎಂದ ರಾಮಣ್ಣ.

ಸಭೆ ಅಲ್ಲಿಗೇ ಮುಕ್ತಾಯವಾಯಿತು.

ರಾಮಣ್ಣ ಪಾರ್ಲಿಮೆಂಟಿಗೆ ನಿಲ್ಲುವುದೆಂದು ಮೊದಲೇ ಗೊತ್ತಾಗಿತ್ತು. ಉಗ್ರಪುರ ಮತದಾರ ಕ್ಷೇತ್ರದಿಂದ ಕೇಶವ ಸಮಾಜವಾದಿ ಪಕ್ಷದ ಹುರಿಯಾಳಾಗಿ ನಿಂತು ಹೋರಾಡಲು ನಿರ್ಧರಿಸಿದ್ದ. ರಾಮಣ್ಣ ಕೇಶವ ಇಬ್ಬರೂ ಪರಸ್ಪರ ಸಹಕಾರದಿಂದ ಕೆಲಸ ಮಾಡುವುದೆಂದು ಗೊತ್ತಾಯಿತು.

ಕೇಶವ ಚುನಾವಣೆಗೆ ನಿಲ್ಲುವ ಸಂಗತಿ ಗೊತ್ತಾಗುತ್ತಲೂ ಈಶ್ವರನಿಗೂ ಸದಾಶಿವನಿಗೂ ಸಮಾಧಾನವಾಗದಿರಲಿಲ್ಲ. ದರಿದ್ರನಾರಾಯಣ ಪಕ್ಷದ ವಿಷಯವಾಗಿ ಅವರಿಗಿದ್ದ ಆಸ್ಥೆ, ಅಭಿಮಾನ ಯಾವಾಗಲೋ ಮಾಯವಾಗಿತ್ತು. ಮಡಿವಾಳ, ಮಹಾಲಿಂಗಪ್ಪ, ಶಾಂತಣ್ಣರಂಥವರನ್ನು ಹುರಿಯಾಳುಗಳನ್ನಾಗಿಸಿದ ಪಕ್ಷದ ಬಗ್ಗೆ ಈಶ್ವರ ಸದಾಶಿವರಂಥವರು ಆಸೆಯಿಟ್ಟುಕೊಳ್ಳುವುದು ಅಶಕ್ಯವಾಗಿತ್ತು.

" ನೀವು ಆಯ್ಕೆಗೆ ನಿಂತದ್ದು ಒಳ್ಳೆಯದಾಯ್ತು ಕೇಶವ್ " ಎಂದು ತನ್ನ ಸಂತೋಷ ಸೂಚಿಸಿದ ಸದಾಶಿವ. " ಬಡವರ ಹೆಸರಿನಲ್ಲಿ ಸಮಯ ಸಾಧಕರು ಹೂಡಿರುವ ಈ ಮೋಸದಾಟ ನೋಡಿ ನನ್ನ ತಲೆ ಕೆಟ್ಟು ಹೋಗಿತ್ತು. ನೀವಾದರೂ ಒಬ್ಬರು ಸರಿಯಾದ ಹುರಿಯಾಳು ನಿಂತುಕೊಂಡಿರಲ್ಲ, ಅಷ್ಟೇ ಸಮಾಧಾನ. "

" ನಿಲ್ಲಬೇಕೆಂತ ನನಗೂ ಇಚ್ಛೆಯಿರಲಿಲ್ಲ ಸದಾಶಿವ. ನನ್ನ ಪ್ರಕೃತಿ ಬೇರೆ ಇನ್ನೂ ಗುಣವಾಗಿಲ್ಲ ಪೂರಾ. ಮೈಯಲ್ಲಿ ಸಾಕಷ್ಟು ಶಕ್ತಿಯೂ ಇಲ್ಲ. ಕಿಸೆಯಲ್ಲಿ ಕಾಸೂ ಇಲ್ಲ. ಆದರೂ ಪಾರ್ಟಿಯವರೆಲ್ಲಾ ಒತ್ತಾಯ ಮಾಡಿ ನಾನು ನಿಲ್ಲಬೇಕೆಂದು ನಿರ್ಣಯಿಸಿದರು. ಪಾರ್ಟಿಯ ಮರ್ಯಾದೆಯೊಂದಿದೆಯಲ್ಲ. ಶಕ್ತಿಮೀರಿ ಹೋರಾಡುವದು. ಗೆದ್ದರೂ ಅಷ್ಟೆ, ಸೋತರೂ ಅಷ್ಟೆ. "

" ಇದು ನಿಜವಾದ ಸ್ಪಿರಿಟ್ ! " ಎಂದ ಈಶ್ವರ,

ವನಮಾಲಾ ಮೋಹಕವಾಗಿ ನಗುತ್ತ ನುಡಿದಳು :

" ಹೌದ್ರೀ. ಸ್ಪಿರಿಟ್ ಅನ್ನುವದು ನಿಜ. ಕಡ್ಡಿ ಕೊರೆದರೆ ಸಾಕು, ಭುಗ್ಗೆಂದು ಉರಿದು ಆರಿಹೋಗುತ್ತದೆ. "

ಎಲ್ಲರೂ ನಕ್ಕರು.

ಒಂದು ನಿಮಿಷ ಮೌನವಾಗಿದ್ದು ಅನಂತರ ಕೇಳಿದ ಕೇಶವ:

" ಹೋರಾಡಬೇಕೆಂತ ನಿರ್ಧರಿಸಿದ್ದಂತೂ ಆಯಿತಲ್ಲ ನದಾಶಿವ. ನಿಮ್ಮಂಥ ಸ್ನೇಹಿತರ ಬೆಂಬಲ ಸಿಕ್ಕರೆ ನಾನು ಗೆದ್ದು ಬರಲೂ ಶಕ್ಯವಾದೀತು. ನಿಮ್ಮಿಂದ ಮತ್ತು ಈಶ್ವರರಿಂದ ನಾನು ಸಹಾಯ ಅಪೇಕ್ಷಿಸಬಹುದಲ್ಲ ? "

" ನಾವೂ ಕಾಸಿಲ್ಲದ ಕುಚೇಲರೇ, ಕೇಶವ್ ! " ಎಂದು ನಗುತ್ತಾ ಹೇಳಿದ ಈಶ್ವರ.

" ಕಾಸಿಲ್ಲದ ಕುಚೇಲರೂ ಒಂದು ಚುನಾವಣೆಯನ್ನು ಹೋರಾಡಲು ಶಕ್ಯವಿದೆಯೋ ಇಲ್ಲವೋ ನೋಡಿ ಬಿಡೋಣ. ಬೇರೇ ಹುರಿಯಾಳುಗಳು ಮಾಡುವಂಥ ಯಾವ ಖರ್ಚನ್ನೂ ನಾನಿಟ್ಟುಕೊಳ್ಳುವದಿಲ್ಲ. ಚುನಾವಣೆಗೆ ಇನ್ನೂ ಎರಡು ತಿಂಗಳಿದೆ. ಅಷ್ಟರಲ್ಲಿ ಶಕ್ಯವಾದಷ್ಟು ಊರುಗಳನ್ನು ಸುತ್ತಿ ಜನರನ್ನು ಕಂಡು ನಮ್ಮ ಉದ್ದೇಶ ತಿಳಿಸಿ ಹೇಳುವದು .. "

" ಒಂದಾದರೂ ಮೋಟಾರು ಬೇಡವೇನು ಕೇಶವ ? "

" ಮೋಟಾರು ? ನಮ್ಮ ಕಾಲುಗಳೇ ಮೋಟಾರು ಬೇಕಾದರೆ ಬಾಡಿಗೆ ಸೈಕಲ್ ತೆಗೆದುಕೊಳ್ಳಬಹುದು. ನನಗೊಂದು. ವನಮಾಲಾಗೊಂದು, ನೀವಿಬ್ಬರೂ ಬರುವದಾದರೆ ನಿಮಗೂ ಒಂದೊಂದು. ಪಾರ್ಟಿಯ ಅನೇಕ ಸದಸ್ಯರೂ. ನಮ್ಮ ಸಂಗಡ ಬರುತ್ತಾರೆ. "

" ಸೈಕಲ್ ಪ್ರವಾಸ ಸಾಮಾನ್ಯವಲ್ಲ ಕೇಶವ. ನಿಮ್ಮ ಆರೋಗ್ಯ ಬೇರೆ ನೆಟ್ಟಗಿಲ್ಲ. ನನಗೂ ನಿಶ್ಯಕ್ತಿಯೇ " ಎಂದ ಈಶ್ವರ.

" ನೀವು ನಮ್ಮೊಡನೆ ಊರೂರು ಸುತ್ತುವ ಜರೂರಿಯಿಲ್ಲ. ಹಳ್ಳಿಯಲ್ಲೇ ಕೂತು ಲೇಖ ಬರೆದು ಪ್ರಚಾರ ಮಾಡಿದರೆ ಸಾಕು. "

" ಹಣ ಕೊಡದಿದ್ದರೆ ಲೇಖಗಳನ್ನು ಯಾರೂ ಪ್ರಕಟಿಸುವದಿಲ್ಲವಲ್ಲ ಕೇಶವ ? "

" ಇರಲಿರಲಿ. ಅದಕ್ಕೇನಾದರೂ ಉಪಾಯ ಮಾಡಿದರಾಯ್ತು. ಹಿಂದೆ

ನಾವು ಕಾಂಗ್ರೆಸ್ ಚಳುವಳಿಗಳಲ್ಲಿ ಭಾಗವಹಿಸಿದ್ದಾಗ ಕೆಲಸ ಮಾಡಿದಂತೆ ಈಗಲೂ ಮಾಡಿದರಾಯ್ತು. ಒಂದು ಸೈಕ್ಲೋಸ್ಟೈಲ್ ಮಶೀನಿದೆ. ಅದನ್ನು ಉಪಯೋಗಿಸಿಕೊಂಡು ಲೇಖನಗಳ ಪ್ರತಿ ತಯಾರಿಸಲೂ ಶಕ್ಯವಾದೀತು."

ಹಲವು ತಿಂಗಳುಗಳ ಕಾಲ ಉದಾಸವಾಗಿದ್ದ ಸದಾಶಿವನ ಮನಸ್ಸೂ ಉತ್ಸಾಹಿತವಾಯಿತು. ಆನಂದದಿಂದ ಕೇಶವನ ಬೆನ್ನು ಚಪ್ಪರಿಸಿ "ಶಹಬ್ಬಾಸ್" ಎಂದ ಸದಾಶಿವ. ಕೇಶವನ ಜತೆಯಲ್ಲಿ ಹೋರಾಟದ ರಂಗಕ್ಕೆ ಧುಮುಕಲು ಅವನ ಮನಸ್ಸು ಹಾತೊರೆಯತೊಡಗಿತು. ಸೆರೆಮನೆಯಿಂದ ಬಿಡುಗಡೆ ಹೊಂದಿ ಬಂದಂದಿನಿಂದಲೂ ಅವನಿಗೆ ಲಭಿಸದಿದ್ದ ಅವಕಾಶ ಆಗ ಹಠಾತ್ತನೆ ಎದುರಿಗೆ ಬಂದು ನಿಂತಂತಾಯಿತು.

"ಎಂದಿನಿಂದ ಸುರು ಮಾಡುವದು ಕೆಲಸವನ್ನು?" ಎಂದು ಆತ ಪ್ರಶ್ನಿಸಿದ.

"ಎಂದು ಅಂದರೇನು, ಇಂದೇ!"

"ಸರಿ. ನಾನು ತಯಾರಾಗಿದ್ದೇನೆ" ಎಂದ ಸದಾಶಿವ. "ನನಗೇನು ಬೈಸಿಕಲ್ ಬೇಕಾಗಿಲ್ಲ. ಕಲ್ಲನಗೌಡನ ಮೋಟಾರ್ ಸೈಕಲ್ ಇದೆ. ಅದನ್ನೇ ಉಪಯೋಗಿಸಿದರಾಯ್ತು."

"ವಾ! ವಾ! ಬಹಳ ಚಲೋ ಆಯ್ತಲ್ಲ! ಮೋಟರ್ ಸೈಕಲಿನ ಮುಂದೆ ಪಾರ್ಟಿಯ ಧ್ವಜ ಕಟ್ಟಬಹುದು ಹಿಂದೆ ಪೋಸ್ಟರ್ ಹಾಕಬಹುದು!" ಎಂದಳು ವನಮಾಲಾ.

"ಸೈಕಲ್ ತುಳಿಯಲು ಕೇಶವರಿಂದಾಗುವಂತಿಲ್ಲ ಅವರೂ ಮೋಟಾರ್ ಸೈಕಲ್ ಮೇಲೇ ಕೂತು ತಿರುಗಾಡಬಹುದು."

"ವಾ! ವಾ! ಛಾನ್! ಛಾನ್!*" ಎಂದಳು ವನಮಾಲಾ.

"ಮೊದಲು ನಿಮ್ಮೂರಲ್ಲೇ ಸಭೆ ಮಾಡೋಣ" ಎಂದ ಕೇಶವ.

"ಬಹಳ ಒಳ್ಳೆಯದು. ಅಲ್ಲಿಂದಲೇ ಪ್ರವಾಸ ಸುರು ಮಾಡಿದರಾಯಿತು."

---

* ಬಹಳ ಉತ್ತಮ

# ೨೦

“ ಏನೆಂದ ಭಯಂಕರರಾವ್ ? ” ಎಂದು ಕೇಳಿದಳು ತಾರಾಬಾಯಿ. “ ನಾಳೆಯೇ ನಾಮಪತ್ರ ಸಲ್ಲಿಸುವ ಕಡೆಯ ದಿನ ಅಲ್ಲವೇನು ? ಮೋಟರು ಕೊಡಿಸುವನೋ ಇಲ್ಲವೋ ? ”

“ ಚುನಾವಣೆ ಮುಗಿದ ಬಳಿಕ ಹೊಸ ಮೋಟರು ಕೊಡಿಸುವನಂತೆ. ಈಗ ಪಾರ್ಟಿಯ ಮೋಟರನ್ನೇ ಉಪಯೋಗಿಸಿಕೊಳ್ಳಿರಿ ಅಂತಾನೆ ” ಎಂದ ಮುದಿಯಪ್ಪ.

“ ನೀವೇನು ಹೇಳಿದಿರಿ ? ”

“ ನಿನ್ನ ಕೇಳದೆ ಏನು ಹೇಳಲಿ ? ವಿಚಾರ ಮಾಡುತ್ತೇನೆ ಅಂತ ಹೇಳಿ ಬಂದೆ. ”

“ ನಿಜವಾಗಿ ಅವನು ಭಯಂಕರರಾವ್ ಇದ್ದ ಹಾಗೇ ಕಾಣುತ್ತಾನೆ. ಅವನ ಮಾತುಗಳೆಲ್ಲಾ ಬರೀ ಬುರುಡೆ ಅಂತ ಕಾಣುತ್ತದೆ. ಚುನಾವಣೆ ಆದ ಮೇಲೆ ಏನು ಕೊಡಿಸುತ್ತಾನೆ ಅವನ ತಲೆ ? ಇನ್ನು ಅವನ ಆಸೆ ಬಿಟ್ಟು ಬೇರೆ ವಿಚಾರ ಮಾಡುವದೇ ಒಳ್ಳೆಯದು. ಮೂರುಸಾವಿರಪ್ಪ ಬರಲೇ ಇಲ್ಲವಲ್ಲ ಈ ಕಡೆಗೆ ? ”

“ ಈಗ ಹ್ಯಾಗೆ ನಮಗೆ ಮುಖ ತೋರಿಸಿಯಾನು ಅವ ! ಅವನೇ ನಿಲ್ಲುತ್ತಾನಂತೆ ಚುನಾವಣೆಗೆ. ಈಗಾಗಲೆ ನಾಮಪತ್ರ ಕೊಟ್ಟುಬಿಟ್ಟಿದ್ದಾನೆ. ”

ತಾರಾಬಾಯಿ ಚಕಿತಳಾಗಿ, ಮೂಗಿನ ಮೇಲೆ ಬೆರಳಿಟ್ಟುಕೊಂಡು ಹೇಳಿದಳು :

“ ಅವನೂ ಭಯಂಕರಪ್ಪನೇ ಇದ್ದಾನಲ್ಲ ಹಾಗಾದರೆ. ನಮಗೊಂದೂ ಪತ್ತೆ ಹತ್ತಗೊಡದೆ ಒಳಗೊಳಗೇ ಮಸಲತ್ತು ಮಾಡಿ ಕಡೆಗೆ ಕೈಕೊಟ್ಟನಲ್ಲಾ.

ಅವನಿಗಾಗಿ ನೂರಾರು ರೂಪಾಯಿ ಹಾಳು ಮಾಡಿಕೊಂಡು ನೀವು ತಿರುಗಿ ಬಂದಿರಿ. ನಿಮ್ಮನ್ನು ಚಲೋ ಮೋಸ ಮಾಡಿದ ಮೂರಸಾವಿರಪ್ಪ.

" ನಾನು ಹೋಗಿ ಅವನ ಬೆಂಬಲಕ್ಕೆ ನಿಲ್ಲದಿದ್ದರೆ ಈ ವೇಳೆಗೆ ಅವನನ್ನು ಗುಂಡಾಕಾಯದೆಯಂತೆ ಗಡೀಪಾರು ಮಾಡುತ್ತಿತ್ತು ಸರಕಾರ. ನಮ್ಮಂಥವರೆಲ್ಲಾ ಅವನಿಗೆ ಸಹಾನುಭೂತಿ ತೋರಿಸಿದ್ದರಿಂದ ಸರಕಾರ ಹೆದರಿ ಸುಮ್ಮನಾಯಿತು. ಅಷ್ಟರಮಟ್ಟಿಗೆ ನಮ್ಮನ್ನು ಉಪಯೋಗ ಮಾಡಿಕೊಂಡು ಈಗ ತಿರುಗಿ ಬಿದ್ದನಲ್ಲಾ.... "

" ಸರಿ. ಅವನನ್ನಾದರೂ ಯಾಕೆ ಬಯ್ಯಬೇಕು? ಮುಖ್ಯ ನಿಮಗೇ ಬುದ್ಧಿಯಿಲ್ಲ. ಸ್ವಲ್ಪ ಕೂಡಾ ಕಾಮನ್ ಸೆನ್ಸ್ ಇಲ್ಲ. ಈಗೇನು ಮಾಡುವವರು ? "

" ಸ್ವತಂತ್ರವಾಗಿ ನಿಂತುಬಿಡಲೇನು ? "

" ಡಿಪಾಜಿಟ್ ಇಡಲು ರೂಪಾಯಿ ? "

" ಇದ್ದೀಯಲ್ಲ ನೀನು ಸಾಹುಕಾರ್ತಿ. ಕೊಡು ಮುಂದೆ ಅಸೆಂಬ್ಲಿಯಿಂದ ಸಂಬಳ ಬಂದಾಗ.... "

" ಹೂಂ. ನೀವು ಅಸೆಂಬ್ಲಿಗೆ ಹೋಗುತ್ತೀರಿ. ನಾನು ನೋಡುತ್ತೇನೆ! ಡಿಪಾಜಿಟ್ ಕಳೆದುಕೊಳ್ಳದಿದ್ದರೇ ದೊಡ್ಡ ಮಾತು! " ಎಂದು ಅಣಕವಾಡಿ ತಾರಾಬಾಯಿ ಒಂದು ನಿಮಿಷ ಸುಮ್ಮನಿದ್ದು, ಮತ್ತೆ ಹೇಳಿದಳು : " ನೀವೂ ಚುನಾವಣೆಗೆ ನಿಲ್ಲುವಿರೆಂದು ಈಗಾಗಲೆ ಎಲ್ಲಾ ಕಡೆಗೂ ಬೊಬ್ಬಾಟವಾಗಿದೆಯಲ್ಲ. ಈಗ ನಿಲ್ಲದಿದ್ದರೆ ಅಸಹ್ಯವಾಗುತ್ತದೆ. ನಾಮಪತ್ರ ಕೊಡುವ ಹಾಗೆ ಕೊಟ್ಟುಬಿಡಿರಿ. ಮುಂದೆ ಏನೇನಾಗುತ್ತದೋ ನೋಡೋಣ. "

" ನೋಡೋಣ ಅಂದರೆ ? "

" ಅಂದರೆ ನಿಮ್ಮ ತಲೆ! ಸುಮ್ಮನೆ ನಾನು ಹೇಳಿದಂತೆ ಮಾಡಬಾರದೇ ? ನೀವು ಸ್ವತಂತ್ರವಾಗಿ ನಿಂತದ್ದು ಗೊತ್ತಾದ ಕೂಡಲೆ ಭಯಂಕರರಾವೇ ಮತ್ತೆ ಓಡಿ ಬರ್‍ತಾನೆ ನಿಮ್ಮ ಕಡೆ. ಆಗ ಮಾಡೋಣ ಅವನಿಗೆ ಮಂಗಳಾರತಿ. ಅವರ ಲೋಕವಿನಾಶ ಪಕ್ಷದ ಪರವಾಗಿ ಮತ್ತೆ ಯಾರಾದರೂ ತಯಾರಾಗಿದ್ದಾರೇನು ನಿಲ್ಲಲಿಕ್ಕೆ ? "

"ಉಗ್ರಪುರದ ವಕೀಲರೊಬ್ಬರು ತಯಾರಿದ್ದಾರಂತೆ."

"ಇರಲಿರಲಿ, ನೋಡಿಕೊಳ್ಳೋಣ" ಎಂದಳು ತಾರಾಬಾಯಿ.

ಮುದಿಯಪ್ಪ ನಾಮಪತ್ರ ಸಲ್ಲಿಸಿದ ಸಂಗತಿ ನಗರದಲ್ಲಿ ಹರಡುತ್ತಲೂ, ತಾರಾಬಾಯಿ ಅಪೇಕ್ಷಿಸಿದಂಥ ಪ್ರತಿಕ್ರಿಯೆಯೇನೂ ಉಂಟಾಗಲಿಲ್ಲ. ಅವಳು ತಿಳಿದಿದ್ದ ಹಾಗೆ ಭಯಂಕರರಾವ್ ಭೀತನಾಗಲೂ ಇಲ್ಲ.

"ಆ ಮುದಿಯನ ಮುಖ ನೋಡಿ ಯಾರು ವೋಟು ಕೊಡ್ತಾರೆ ಬಿಡಿರಿ. ಏನೋ ನಮ್ಮ ಪಕ್ಷದ ಬೆಂಬಲವಿದ್ದರೆ ಆರಿಸಿ ಬರುತ್ತಿದ್ದ. ನಮಗೇನು, ಇವನಾದರೂ ಅಷ್ಟೆ, ಅವನಾದರೂ ಅಷ್ಟೆ" ಎಂದು ಹೇಳಿಕೊಂಡು ಮುದಿಯಪ್ಪನ ವಿಷಯವನ್ನೆ ಕಡೆಗಣಿಸಿಬಿಟ್ಟ ಭಯಂಕರರಾವ್.

ಅವನು ಇಂದು ಬರಬಹುದು, ನಾಳೆ ಬರಬಹುದು ಎಂದು ಮುದಿಯಪ್ಪ ತಾರಾಬಾಯಿ ನಿರೀಕ್ಷಿಸುತ್ತಿದ್ದರು. ಒಂದು ವಾರ ಕಳೆದರೂ ಭಯಂಕರರಾವ್ ಬರದಿರಲು ತಾರಾಬಾಯಿಗೂ ಯೋಚನೆಗಿಟ್ಟುಕೊಂಡಿತು.

"ಡಿಪಾಜಿಟ್ ಹಣವನ್ನು ಕೈಯಾರ ಕಳಕೊಳ್ಳುವೆನೊ ಏನೊ" ಎಂದು ಆಕೆ ಚಿಂತಿಸತೊಡಗಿದಳು. ಬಾಡಿದ ಮುಖ ಹೊತ್ತು ಮನೆಯಲ್ಲಿಯೆ ಕುಳಿತ ಮುದಿಯಪ್ಪ.

ಚುನಾವಣೆಯಲ್ಲಿ ಹೋರಾಡಲಿಚ್ಛಿಸದ ಹುರಿಯಾಳುಗಳು ನಾಮಪತ್ರ ಹಿಂದೆಗೆದುಕೊಳ್ಳುವುದಕ್ಕೆ ಇನ್ನೂ ಸಾಕಷ್ಟು ಅವಧಿಯಿತ್ತು. ಅಷ್ಟರೊಳಗಾಗಿ ಏನಾದರೂ ಆಗಬಹುದೆಂದು ತಾರಾಬಾಯಿ ಆಶಿಸಿದ್ದಳು.

ಅವಳ ಆಶೆ ವ್ಯರ್ಥವಾಗಲಿಲ್ಲ.

ಬಿಡುವಾದಾಗ ಬಂದು ತನ್ನನ್ನು ಕಾಣಬೇಕೆಂದು ಮುದಿಯಪ್ಪನಿಗೆ ಹೇಳಿ ಕಳಿಸಿದ ವೀರಭದ್ರಸೆಟ್ಟಿ. ಹೋರಾಟದ ರಂಗದಿಂದ ಸ್ವತಂತ್ರ ಹುರಿಯಾಳುಗಳನ್ನೆಲ್ಲ ಇಳಿಸಿ ಚುನಾವಣೆಯ ಕದನ ಸುಲಭವಾಗುವಂತೆ ಮಾಡುವುದೇ ಅವನ ಉದ್ದಿಶ್ಯವಾಗಿತ್ತು. ಲೋಕವಿನಾಶ ಪಕ್ಷದ ಹುರಿಯಾಳುವಿನ ವಿಷಯವಾಗಿ ಸೆಟ್ಟಿಗೆ ಕೊಂಚವೂ ವಿವಂಚನೆಯಿರಲಿಲ್ಲ. ಮುದಿಯಪ್ಪನ ಬಗ್ಗೆ ಮಾತ್ರ ಅವನು ಯೋಚಿಸಬೇಕಾಗಿ ಬಂದಿತ್ತು. ಮುದಿಯಪ್ಪನೂ ಜಾತಿಯಿಂದ ವೀರಶೈವ; ವೃತ್ತಿಯಿಂದ ವಕೀಲ. ಪದವಿಗಳನ್ನು ಪಡೆದ ಸುಶಿಕ್ಷಿತ. ಕೆಲವು

ಸಾವಿರ ಮತಗಳಾದರೂ ಅವನಿಗೆ ಲಭಿಸುವ ಸಂಭವವಿತ್ತು. ಅಂತೆಯೆ ಅವನನ್ನು ಚುನಾವಣೆಯ ಕಣದಿಂದ ದೂರಗೊಳಿಸಲು ವೀರಭದ್ರಸೆಟ್ಟಿ ನಿರ್ಧರಿಸಿದ್ದುದು.

ಮುದಿಯಪ್ಪನನ್ನು ಕಂಡೊಡನೆಯೆ ಸೆಟ್ಟಿ ನೇರವಾಗಿ ವಿಷಯ ಪ್ರಸ್ತಾಪಿಸಿ, "ನೋಡಿರಿ ವಕೀಲರೆ. ನೀವೂ ನಮ್ಮವರೆ. ನಿಮಗೂ ನನಗೂ ವಿರೋಧವಿರಬೇಕಾಗಿಲ್ಲ. ನೀವೇ ಆರಿಸಿ ಬಂದರೂ ನನಗೆ ಸಂತೋಷವೆ. ನೀವು ಚುನಾವಣೆಗೆ ನಿಲ್ಲುವ ವಿಷಯ ಮೊದಲೇ ಗೊತ್ತಿದ್ದರೆ ನಿಮ್ಮನ್ನೇ ಕಾಂಗ್ರೆಸ್ ಪತಿಯಿಂದ ನಿಲ್ಲಿಸಲು ನಾನೇ ಯತ್ನಿಸುತ್ತಿದ್ದೆ. ಹೋಗಲಿ. ಇನ್ನೂ ಬೇಕಾದಷ್ಟು ಚುನಾವಣೆಗಳಿವೆಯಲ್ಲ. ಮುಂದಿನ ಸಲ ನಿಮ್ಮನ್ನೇ ನಿಲ್ಲಿಸೋಣ. ಈ ಸಲ ಮಾತ್ರ ನೀವು ನನಗಾಗಿ ಹಿಂದಿಗೆದುಕೊಳ್ಳಬೇಕು" ಎಂದು ಹೇಳಿದ.

ಅರೆಮರುಳನಾದ ಮುದಿಯಪ್ಪ, ಸೆಟ್ಟಿಯ ಮಾತುಗಳ ಹಿಂದಿನ ಕಪಟವನ್ನು ಕಂಡುಕೊಳ್ಳಲಿಲ್ಲ.

"ಮುಂದಿನ ಸಲ ಕಾಂಗ್ರೆಸ್ಸಿನಿಂದಲೇ ನನಗೆ ಸೀಟು ಕೊಡಿಸುತ್ತಾನಂತೆ ನೋಡೇ!" ಎಂದು ಹೆಂಡತಿಯ ಹತ್ತಿರ ಹೇಳಿದ.

"ನಿಮ್ಮ ಬುದ್ಧಿಗೆ ಬೆಂಕಿ ಹಾಕಿತು. ಈ ಕಾಂಗ್ರೆಸಿನವರನ್ನು ನಂಬಿ ಯಾರು ಉದ್ಧಾರವಾಗಿದ್ದಾರೆ? ಆ ಸೆಟ್ಟಿ ಹೇಳಿದ್ದಕ್ಕೆಲ್ಲಾ ಹೂಂ ಅಂದು ಬಂದಿರೇನು ಮತ್ತೆ?"

"ಇಲ್ಲ, ಮಹಾರಾಯಿತಿ. ನಾಳೆ ಹೇಳುತ್ತೇನೆಂತ ಹೇಳಿದ್ದೇನೆ."

"ಚುನಾವಣೆಗೆ ನಿಂತು ವಾಪಸಾಗುವದೆಂದರೇನೂ ಸಣ್ಣ ಮಾತಲ್ಲ. ಇದುವರೆಗೆ ಆದ ಖರ್ಚನ್ನೆಲ್ಲಾ ಆ ಸೆಟ್ಟಿ ತುಂಬಿಕೊಟ್ಟರೆ ಹಿಂದೆಗೆದುಕೊಳ್ಳಲು ಅಡ್ಡಿಯಿಲ್ಲ."

"ಕೊಡಬಹುದೇನು ಅವ?"

"ಅವರಪ್ಪ ಕೊಡ್ತಾನೆ. ಒಂದೊಂದು ವೋಟಿಗೆ ಹತ್ತತ್ತು ರೂಪಾಯಿ ಕೊಡಲು ತಯಾರಾಗುವ ಮಂದಿ ಅವರು. ನಿಮ್ಮಿಂದ ಎರಡು ಸಾವಿರ ವೋಟುಗಳಾದರೂ ಉಳಿದರೆ, ಒಂದು ವೋಟಿಗೆ ಐದು ರೂಪಾಯಿಯಂತೆ ಲೆಕ್ಕ ಹಾಕಿದರೂ ಹತ್ತುಸಾವಿರ ಆದರೂ ಕೊಡಬೇಕಾಗುತ್ತದೆ ಸೆಟ್ಟಿ."

ಮೂರನೆಯ ದಿನ ಮತ್ತೆ ಸೆಟ್ಟಿಯನ್ನು ಕಂಡು ಬಂದ ಮುದಿಯಪ್ಪ ಹೇಳಿದ:

" ಕೆಲಸ ಆಗುವ ಹಾಗೆ ಕಾಣುವದಿಲ್ಲ ತಾರಾ. "

" ನಿಮ್ಮಿಂದ ಯಾವ ಕೆಲಸ ಆದೀತು ? ಹೂಂ. ಏನೆಂದ ಸೆಟ್ಟಿ ? "

" ನಾನು ಹತ್ತುಸಾವಿರ ಅನ್ನುತ್ತಲೂ ಅವರೆಲ್ಲಾ ನಕ್ಕರು. ಚುನಾವಣೆಗಾಗಿ ನೀವು ಖರ್ಚು ಮಾಡಿದ್ದಾದರೂ ಯಾತಕ್ಕಾಗಿ, ಎಷ್ಟು ಅನ್ನುವದರ ಯಾದಿ ಕೊಡಿರಿ ಅಂತ ಕೇಳಿದರು. "

" ನೀವೇನು ಹೇಳಿದಿರಿ ? "

" ಆಗಲಿ. ತಂದುಕೊಡ್ತೇನೆ ಅಂತ ಹೇಳಿದೆ. "

" ಹಾಗ್ಯಾಕೆ ಹೇಳ ಹೋದಿರಿ ? ಯಾದಿ ಯಾತಕ್ಕೆ ಬೇಕು ? ನಮಗಿಷ್ಟು ಖರ್ಚಾಗಿದೆ, ನೀವು ಕೊಡುವದಾದರೆ ನಾಮಪತ್ರ ಹಿಂತೆಗೆದುಕೊಳ್ಳುತ್ತೇನೆ, ಇಲ್ಲವಾದರಿಲ್ಲ ಎಂದೇಕೆ ಹೇಳಲಿಲ್ಲ ? "

ಮುದಿಯಪ್ಪ ನಾಚಿ, ತಲೆ ತಗ್ಗಿಸಿ ಕುಳಿತುಕೊಂಡ.

" ಸುಮ್ಮನೆ ಒಣ ಚರ್ಚೆ ಮಾಡದೆ ಕಡೆಯ ಪಕ್ಷ ಐದು ಸಾವಿರ ಕೊಡುವದಿದ್ದರೆ ಆಗಬಹುದು ಅಂತ ಹೇಳಿ. "

ಸೆಟ್ಟಿ ಐದು ಸಾವಿರಕ್ಕೂ ಸಿದ್ಧನಾಗಲಿಲ್ಲ. ಎರಡು ಸಾವಿರವಾದರೆ ಬಹಳವಾಯಿತೆಂದು ಸ್ಪಷ್ಟವಾಗಿ ಹೇಳಿಬಿಟ್ಟ.

ಅಷ್ಟು ಹಣವನ್ನಾದರೂ ಬಿಡುವುದೇಕೆಂದು ತಾರಾಬಾಯಿ ಒಪ್ಪಿಕೊಂಡಳು.

ಮತ್ತೆ ಅವಳು ದೀರ್ಘವಾಗಿ ಆಲೋಚಿಸಿ, " ಈಗಿಂದೀಗ ನಾಮಪತ್ರ ಹಿಂತೆಗೆದುಕೊಳ್ಳುವದಿಲ್ಲ, ಚುನಾವಣೆ ಒಂದು ವಾರವಿದೆಯೆಂದಾಗ ತೆಗೆದುಕೊಳ್ಳುತ್ತೇನೆ, ಅಂತ ಸೆಟ್ಟಿಗೆ ಹೇಳಿರಿ " ಎಂದು ಗಂಡನಿಗೆ ತಿಳಿಸಿದಳು.

ವೀರಭದ್ರಸೆಟ್ಟಿಗೆ ಆ ಸಂಗತಿ ತಿಳಿಯುತ್ತಲೂ ಅವನು ಸಂದೇಹದ ಧ್ವನಿಯಲ್ಲಿ ಕೇಳಿದ:

" ಯಾಕೆ? ಈಗಲೇ ಯಾಕೆ ತೆಗೆದುಕೊಳ್ಳುವದಿಲ್ಲ ? "

ಆ ಪ್ರಶ್ನೆಗೆ ಸಮಾಧಾನಕರವಾದ ಉತ್ತರವೀಯುವಷ್ಟು ವ್ಯವಹಾರ

ಕುಶಲತೆ ಮುದಿಯಪ್ಪನಿಗಿರಲಿಲ್ಲ. ಅವನು ಏನನ್ನೂ ಹೇಳದೆ ಮೌನ ವಹಿಸಿದ.

" ಕೂಡಲೆ ಹಿಂತೆಗೆದುಕೊಳ್ಳುವದಾದರೆ ಮಾತ್ರ ಹಣ ಕೊಡುತ್ತೇನೆ. ಇಲ್ಲದಿದ್ದರಿಲ್ಲ " ಎಂದು ಹೇಳಿದ ಸೆಟ್ಟಿ.

ಅದೇ ದಿನವೆ, ದರಿದ್ರನಾರಾಯಣ ಪಕ್ಷದ ಮಹಾಲಿಂಗಪ್ಪನ ಪರವಾಗಿ ಭೀಮರಾಯಪ್ಪ ಮುದಿಯಪ್ಪನನ್ನು ಕಾಣಲು ಬಂದ. ನಾಮಪತ್ರ ಹಿಂತೆಗೆದು ಕೊಳ್ಳುವ ವಿಚಾರವಾಗಿಯೆ ಚರ್ಚೆಗಾರಂಭವಾಯಿತು. ಭೀಮರಾಯಪ್ಪನಿಗೆ ಬಿಸಿ ಬಿಸಿ ಉಪ್ಪಿಟ್ಟು, ಚಹ ಮಾಡಿ ಕೊಟ್ಟು, ಸವಿ ಮಾತುಗಳಿಂದ ಅವನನ್ನು ಸಂತುಷ್ಟಗೊಳಿಸಿ ತಾರಾಬಾಯಿಯೆ ಅವನೊಡನೆ ಚರ್ಚೆಗೆ ನಿಂತಳು. ಹತ್ತು ಸಾವಿರದಿಂದ ಮೊದಲಾದ ಬೇಡಿಕೆ ಕೊನೆಗೆ ಒಂದೂವರೆ ಸಾವಿರಕ್ಕಿಳಿಯಿತು.

" ಈಗ ಇಷ್ಟಕ್ಕೇ ಒಪ್ಪಿಕೊಳ್ಳಿರಿ. ಮುಂದೆ ಸಾಹುಕಾರರು ಆರಿಸಿ ಬಂದ ಮೇಲೆ ಮತ್ತೆ ಖುಷಿಯಿಂದ ಕೊಟ್ಟಾರು. "

" ನೀವಿಷ್ಟು ಹೇಳುವಿರೆಂದ ಮೇಲೆ ಇಲ್ಲ ಅಂತ ಅನ್ನುವದು ಕಷ್ಟ. "

ಮೂರನೆಯ ದಿನವೆ ನಾಮಪತ್ರ ಹಿಂದೆಗೆದುಕೊಂಡ ಮುದಿಯಪ್ಪ.

ವೀರಭದ್ರಸೆಟ್ಟಿಯ ಎರಡು ಸಾವಿರ, ಮಹಾಲಿಂಗಪ್ಪನ ಒಂದೂವರೆ ಸಾವಿರ ರೂಪಾಯಿಗಳನ್ನು ತನ್ನ ಪೆಟ್ಟಿಗೆಗೆ ಸೇರಿಸಿ, ತನ್ನ ಬುದ್ಧಿ ಶಕ್ತಿಯ ಬಗ್ಗೆ ತಾನೇ ಹೆಮ್ಮೆಪಟ್ಟುಕೊಳ್ಳುತ್ತ, ಗಂಡನ ಮೂರ್ಖತನವನ್ನು ಹೀಯಾಳಿಸುತ್ತ ಸುಖವಾಗಿ ಕಾಲ ಕಳೆಯತೊಡಗಿದಳು ತಾರಾಬಾಯಿ.

ಮುದಿಯಪ್ಪನನ್ನು ಹಿಂದೆಗೆಸಿದಂತೆ ಮಹಾಲಿಂಗಪ್ಪ ಎರಡು ಸಾವಿರ ರೂಪಾಯಿ ತೆತ್ತು ಮೂರುಸಾವಿರಪ್ಪನನ್ನೂ ಹಿಂದೆಗೆಸಿದ್ದ. ವೀರಭದ್ರಸೆಟ್ಟಿ ಮಾತ್ರ ಮೂರುಸಾವಿರಪ್ಪನನ್ನು ಲಕ್ಷ್ಯಕ್ಕೆ ತಂದುಕೊಂಡಿರಲಿಲ್ಲ.

ಸಮಾಜವಾದಿ ಪಕ್ಷದ ಕೇಶವನನ್ನೂ ಒಡೆಯುವ ಯತ್ನ ನಡೆಯುದಿರಲಿಲ್ಲ.

" ಕಾಂಗ್ರೆಸಿನ ಧ್ಯೇಯಧೋರಣೆಗಳಿಗೂ ಸಮಾಜವಾದಿ ಪಕ್ಷದ ಧ್ಯೇಯ ಧೋರಣೆಗಳಿಗೂ ಅಂಥ ವ್ಯತ್ಯಾಸವೇನಿಲ್ಲ. ನೀವೂ ಕಾಂಗ್ರೆಸ್ಸಿನಲ್ಲಿದ್ದವರೇ. ಈಗೇನೊ ನೀವು ಬೇರೆಯಾಗಿದ್ದರೂ ಕೆಲವು ದಿನ ಹೋದ ಬಳಿಕ ಮತ್ತೆ

ಕಾಂಗ್ರೆಸ್ಸನ್ನೇ ಸೇರಿದರೂ ಸೇರಬಹುದು. ಈಗ ನಾವೂ ನೀವೂ ಬಡಿದಾಡು ವದು ತಪ್ಪು. ”

ಉತ್ತರವಾಗಿ ಕೇಶವ ಏನನ್ನೂ ಹೇಳಲಿಲ್ಲ. ಮುಗುಳ್ನಗೆ ನಕ್ಕು ಸುಮ್ಮ ನಾದ. ಮುದಿಯಪ್ಪ ಮೂರುಸಾವಿರಪ್ಪರನ್ನು ಒಡೆದ ಹಾಗೆ ಕೇಶವನನ್ನು ಹಣದ ಆಸೆ ತೋರಿಸಿ ಹಿಂದೆಗೆಸುವುದೂ ಅಸಾಧ್ಯವೆಂದು ಮನಗಂಡು ವೀರ ಭದ್ರಸೆಟ್ಟಿ ಆ ಯತ್ನ ನಿಲ್ಲಿಸಿದ.

ಕೇಶವನನ್ನು ಗಣನೆಗೆ ತಂದುಕೊಳ್ಳುವ ಅಗತ್ಯವಿಲ್ಲವೆಂದು ವಿಶಾಲಪ್ಪ ಹೇಳಿದರು.

“ ಆ ಹಾರುವನಿಗೆ ಯಾರು ವೋಟು ಕೊಡುತ್ತಾರೆ ಮಹಾಲಿಂಗಪ್ಪ ? ಡಿಪಾಜಿಟ್ ಹಣವನ್ನು ಕಳಕೊಂಡು ಫಜೀತಿಯಾಗುತ್ತಾನೆ ಅವ. ಅಂಥವ ನ್ನೇನು ಮಾತಾಡಿಸುವದು ? ”

“ ಹೌದೌದು ” ಎಂದ ಮಹಾಲಿಂಗಪ್ಪ.

ಕೇಶವ ಚುನಾವಣೆಗೆ ನಿಂತುಕೊಂಡುದರಿಂದ ನರಹರಿರಾಯರಿಗೆ ಕೊಂಚ ಸಂತೋಷವಾಗದಿರಲಿಲ್ಲ. ಚಿಮಣಾಜಿಯೊಡನೆ ಮಾತನಾಡುತ್ತಾ ಅವರು ಹೇಳಿದರು :

“ ಕಾಂಗ್ರೆಸ್ಸೂ ಲಿಂಗಾಯಿತರ ಕೈಯೊಳಗೇ ಸಿಕ್ಕು ಎಲ್ಲಾ ಅವರದೇ ರಾಜ್ಯವಾಗ ಹತ್ತಿತು ಎಂ.ಎಲ್.ಎ. ಗಳಾಗುವವರೂ ಅವರೇ. ಇಡೀ ಕರ್ನಾ ಟಕದಲ್ಲೆಲ್ಲ ಒಬ್ಬ ಬ್ರಾಹ್ಮಣನನ್ನೂ ಅಸೆಂಬ್ಲಿಗೆ ನಿಲ್ಲಿಸಿಲ್ಲ ಈ ಲಿಂಗಪ್ಪಗಳು. ಕೇಶವ ಸೋಶಲಿಸ್ಟ್ ಆದರೂ ಚಿಂತೆಯಿಲ್ಲ. ಒಬ್ಬನಾದರೂ ಬ್ರಾಹ್ಮಣ ಎಂ.ಎಲ್.ಎ. ಆದರೆ ಒಳ್ಳೆಯದು. ”

“ ಜಮೀನ್ದಾರಿಯನ್ನೇ ತೆಗೆದು ಹಾಕಬೇಕೆಂತ ಸೋಶಲಿಸ್ಟರು ಹೇಳು ತ್ತಾರಲ್ಲ ರಾಯರೆ ? ”

“ ಹೇಳಿದ ಮಾತ್ರಕ್ಕೆ ಎಲ್ಲಾ ಆಗುತ್ತದೇನು ? ಒಬ್ಬ ಸೋಶಲಿಸ್ಟ್ ಎಂ. ಎಲ್. ಎ. ಆದ ಕೂಡಲೆ ಸೋಶಲಿಜಂ ಬಂದು ಬಿಡುತ್ತದೇನು ? ನಿಜ ಹೇಳಬೇಕಾದರೆ ಕಾಂಗ್ರೆಸ್ ಅಧಿಕಾರ ಕೈಯಲ್ಲಿ ಹಿಡಿದುಕೊಂಡಿರುವ ಈ ಲಿಂಗ ಪ್ಪಗಳದೇ ಸಂಶಯ ನನಗೆ. ಹೆಸರಿಗೆ ಕಾಂಗ್ರೆಸ್ಸಿಗರಾದರೂ ಪಕ್ಕಾ ಕಮ್ಯುನಿ

ಸ್ಟರಿದ್ದ ಹಾಗಿದ್ದಾರೆ ಇವರು. ಟೆನನ್ಸಿ ಆಕ್ಟ್ ಆಗಲು ಕಾರಣರಾದವರೂ ಇವರೇ ಅಲ್ಲವೇನು ? ”

“ ಕಾಂಗ್ರೆಸ್ಸೂ ಕಮ್ಯುನಿಸ್ಟ್ ಪಾರ್ಟಿಯ ಹಾಗಾಗಬಹುದು ಅಂತೀರಾ ? ”

“ ಕಮ್ಯುನಿಸ್ಟ್ ಮನೋವೃತ್ತಿಯವರ ಕೈಯಲ್ಲಿ ಸಿಕ್ಕರೆ ಆಗೇ ಆಗುತ್ತದೆ. ಆಮೇಲೆ ನಮ್ಮನ್ನು ಯಾರು ಕೇಳಬೇಕು ? ಎಲ್ಲಾ ಈ ಲಿಂಗಪ್ಪಗಳದೇ ಸರ್ವಾಧಿಕಾರವಾಗುತ್ತದೆ. ಅದನ್ನು ತಡೆಯಲು ಕೇಶವನಂಥ ಒಬ್ಬಿಬ್ಬರಾದರೂ ಅಸೆಂಬ್ಲಿಯಲ್ಲಿರಬೇಕು ಚಿಮಣಾಜಿ. ರಾಮಣ್ಣನಿಗೂ ನಾವು ಸಹಾಯ ಮಾಡಬೇಕು. ಅವನೂ ಹೋಗಲಿ ಪಾರ್ಲಿಮೆಂಟಿಗೆ. ಇವರಿಬ್ಬರಿಗೂ ವೋಟು ಹಾಕಬೇಕೆಂದು ನಮ್ಮ ಜನರಿಗೆಲ್ಲಾ ಹೇಳು ಚಿಮಣಾಜಿ. ”

“ ಆದರೆ....ನಾವು ಕಾಂಗ್ರೆಸ್ಸಿಗರು.... ”

“ ಕಾಂಗ್ರೆಸ್ಸಿಗರಾದರೇನಾಯ್ತು ? ಆ ಕೃಷ್ಣಾಜಿಗೆ ಜಾತಿಯ ಅಭಿಮಾನ ಸ್ವಲ್ಪವೂ ಇಲ್ಲ. ಜಿಲ್ಲಾ ಕಾಂಗ್ರೆಸಿನ ಅಧಿಕಾರವನ್ನು ಕಡೆಯ ವರೆಗೂ ತನ್ನ ಕೈಯಲ್ಲೇ ಹಿಡಿದುಕೊಳ್ಳಬೇಕೆಂದು ಅವನು ಲಿಂಗಾಯತರ ಬಾಲ ಬಡಿಯುಯುತ್ತಾನೆ. ನಾವು ಒಳಗೊಳಗೇ ಕೆಲಸ ಮಾಡಿ ಅವನಿಗೂ ಬುದ್ಧಿ ಕಲಿಸಬೇಕು. ”

ಕೇಶವ, ರಾಮಣ್ಣ ಇಬ್ಬರಿಗೂ ಗೊತ್ತಾಗದಂತೆ ಅವರ ಪರವಾಗಿ ಮತದಾರರಲ್ಲಿ ಪ್ರಚಾರ ನಡೆಯತೊಡಗಿತು. ಧರ್ಮಣ್ಣ, ಮಲ್ಲಪ್ಪ ಮೊದಲಾದವರ ಹತ್ತಿರ ಆ ವಿಚಾರವನ್ನೆ ಪ್ರಸ್ತಾಪಿಸಲಿಲ್ಲ ಚಿಮಣಾಜಿ. ಸುಂದರಾಬಾಯಿಯ ಮುಂದೆ ಮಾತ್ರ ನಾಲಗೆ ಬಿಗಿ ಹಿಡಿಯಲಾಗಲಿಲ್ಲ. ಆವಳ ಮೂಲಕ ಆ ಸಂಗತಿ ಸಾವಿತ್ರಿಗೂ, ಸಾವಿತ್ರಿಯಿಂದ ಮಲ್ಲಪ್ಪ, ಸದಾಶಿವರಿಗೂ ಗೊತ್ತಾಯಿತು.

“ ನೀವು ಜಾತಿಯ ಅಭಿಮಾನ ಬಿಟ್ಟರೂ ನಿಮ್ಮ ಜಾತಿಯವರು ನಿಮ್ಮ ಅಭಿಮಾನ ಬಿಡಲಿಲ್ಲ ” ಎಂದು ಕೇಶವನಿಗೆ ಹೇಳಿ ಸದಾಶಿವ ನಕ್ಕುಬಿಟ್ಟ.

“ ಜನಿವಾರವನ್ನು ಎಂದೋ ಹರಿದೊಗೆದ ನನ್ನಂಥ ಅಬ್ರಾಹ್ಮಣನನ್ನು ಬಿಡದಾಯಿತಲ್ಲ ಈ ಜಾತ್ಯಾಭಿಮಾನದ ಕರ್ಮ ! ” ಎಂದು ನುಡಿದು ಕೇಶವನೂ ನಕ್ಕ.

" ಹೋಗಲಿ ಬಿಡಿರಿ. ಸುಲಭವಾಗಿ ಒಂದೆರಡು ಸಾವಿರ ವೋಟು ಸಿಕ್ಕರೆ ನಿಮಗಾಗುವ ಹಾನಿಯೇನು ? " ಎಂದಳು ವನಮಾಲಾ.

ಚಿಮಣಾಜಿಯ ಕಾರಸ್ಥಾನವನ್ನು ಕಂಡು ಮಲ್ಲಪ್ಪ ಮಾತ್ರ ಕಿಡಿ ಕಿಡಿಯಾದ. ಧರ್ಮಣ್ಣ ನೆದುರಿಗೆ ಮಾತನಾಡುತ್ತ,

" ಇವರು ತಮ್ಮ ಜಾತಿಯ ಅಭಿಮಾನ ಹೆಂಗ ಬಿಟ್ಟಾರು ಧರ್ಮಣ್ಣ ? ವೀರಭದ್ರಸೆಟ್ಟಿ ಲಿಂಗಾಯತ ಅಂತ ಇವರಿಗೆ ಹೊಟ್ಟೆಕಿಚ್ಚು. ಒಳಗೊಳಗೇ ಫಿತೂರಿ ನಡಸಿದ್ದಾರೆ. ಇವರವು ಇರುವದಾದರೂ ಎಷ್ಟು ವೋಟು ? ಇವರ ವೋಟನಿಂದ ಆ ಕೇಶವ ಆರಿಸಿ ಬರ್‍ತಾನೇನು ? " ಎಂದ ಮಲ್ಲಪ್ಪ.

ಧರ್ಮಣ್ಣ ಬ್ರಾಹ್ಮಣನೂ ಆಗಿರಲಿಲ್ಲ, ಲಿಂಗವಂತನೂ ಆಗಿರಲಿಲ್ಲ. ಈ ಎರಡು ಜಾತಿಗಳವರ ಜಗಳವನ್ನು ಕಂಡು ಅವನಿಗೆ ಮೋಜೆನ್ನಿಸಿತಷ್ಟೆ.

" ನೀನು ಯಾರ ಕಡೆ ಧರ್ಮಣ್ಣ? ಈಗಲೇ ಹೇಳಿಬಿಡು" ಎಂದ ಮಲ್ಲಪ್ಪ.

" ಕೃಷ್ಣಾಜಿಯಿದ್ದಲ್ಲಿ ನಾನಿರುತ್ತೀನಿ. "

" ಕೃಷ್ಣಾಜಿಯನ್ನೊಮ್ಮೆ ಕೇಳೇ ಬಿಡ್ತೀನಿ. ಈ ಚಿಮಣಾಜಿ ನಡಸಿದ ಕಾರಭಾರ ಅವರಿಗೆ ಗೊತ್ತೈತ್ಯೋ ಇಲ್ಲೋ. "

ಮಲ್ಲಪ್ಪನಿಂದ ಆ ಸಂಗತಿ ಗೊತ್ತಾಗುತ್ತಲೂ ಕೃಷ್ಣಾಜಿ ಗಂಭೀರವಾಗಿ ನುಡಿದ :

" ನರಹರಿರಾಯರೂ ಚಿಮಣಾಜಿಯೂ ಹೀಗೆ ಮಾಡುತ್ತಾರೆನ್ನುವದು ನನಗೂ ಗೊತ್ತಾಗಿತ್ತು. ನನಗೆ ಇಂಥ ಅಪ್ರಾಮಾಣಿಕತನ ಸರಿಬರುವದಿಲ್ಲ. ಕಾಂಗ್ರೆಸ್ ಹುರಿಯಾಳು ಅಂತ ಸೆಟ್ಟರನ್ನು ನಿಲ್ಲಿಸಿದ್ದೇವೆ. ಕಾಂಗ್ರೆಸ್ಸಿಗರೆಲ್ಲಾ ತಮ್ಮ ಜಾತಿಗಳನ್ನು ಮರೆತು ಅವರಿಗೇ ಮತ ಕೊಡಬೇಕು. "

" ಚಿಮಣಾಜಿ ಬ್ರಾಹ್ಮಣರನ್ನು ಒಡೆಯುತ್ತಿದ್ದಾನಲ್ಲ ? "

" ನಾನೊಮ್ಮೆ ನಿಮ್ಮೂರಿಗೆ ಬಂದು ಎಲ್ಲಾ ಸರಿ ಮಾಡುತ್ತೇನೆ " ಎಂದು ಆಶ್ವಾಸನವಿತ್ತು ಮಲ್ಲಪ್ಪನನ್ನು ಸಂತೈಸಿದ ಕೃಷ್ಣಾಜಿ.

ಆಗಲೂ ಪೂರ್ಣವಾಗಿ ಸಮಾಧಾನವಾಗಲಿಲ್ಲ ಮಲ್ಲಪ್ಪನಿಗೆ.

ಬ್ರಾಹ್ಮಣರೆಲ್ಲರೂ ಕೃಷ್ಣಾಜಿಯ ಮಾತು ಕೇಳಬಹುದೆಂಬ ಭರವಸೆ

ಯಾದರೂ ಏನು ?

ಅಂದಿನಿಂದ ಮಲ್ಲಪ್ಪನೂ ತನ್ನ ಜಾತಿಯ ಅಭಿಮಾನ ಹಿಡಿದು ಮತ ದಾರರಲ್ಲೂ ಆ ಅಭಿಮಾನವನ್ನು ಬಿತ್ತತೊಡಗಿದ.

" ವೀರಭದ್ರಪ್ಪನೂ ಲಿಂಗಾಯತ, ಮಹಾಲಿಂಗಪ್ಪನೂ ಲಿಂಗಾಯತನೇ. ನಾವು ವೀರಭದ್ರಪ್ಪನಿಗೆ ಯಾಕೆ ವೋಟು ಕೊಡಬೇಕು ?" ಎಂದು ಮತದಾರರು ಸವಾಲು ಹಾಕತೊಡಗಿದರು.

" ವೀರಭದ್ರಪ್ಪ ಕಾಂಗ್ರೆಸ್ಸಿನವ ಅನ್ನೂದನ್ನು ಮರೆಯಬ್ಯಾಡ್ರಿ. ಕಾಂಗ್ರೆಸ್ಸನ್ನ ಸೋಲಿಸುವ ಶಕ್ತಿ ಹಿಂದೂಸ್ಥಾನದಲ್ಲಿ ಯಾರಿಗೂ ಇಲ್ಲ. ಚುನಾವಣೆಯ ಬಳಿಕ ಮತ್ತೆ ಕಾಂಗ್ರೆಸ್ ಸರಕಾರವೇ ಅಧಿಕಾರಕ್ಕೆ ಬರುವದೂ ಖಾತ್ರಿಯಾಗಿ. ವೀರಭದ್ರಪ್ಪನಿಂದ ಬೇಕಾದ ಕೆಲಸ ಮಾಡಿಸಿಕೊಳ್ಳಬಹುದು ನೀವು " ಎನ್ನುತ್ತಿದ್ದ ಮಲ್ಲಪ್ಪ. ಪ್ರಭಣ್ಣನೂ ಅವನೂ ಜತೆಯಾಗಿ ವೀರಭದ್ರಪ್ಪನ ಪರವಾಗಿ ಬಿರುಸಿನಿಂದ ಪ್ರಚಾರಕ್ಕೆ ತೊಡಗಿದರು.

ದರಿದ್ರನಾರಾಯಣ ಪಕ್ಷದ ಪ್ರಚಾರ ಕಾರ್ಯವೂ ಭರದಿಂದ ಸಾಗಿತ್ತು. ಮತದಾರರನ್ನು ಕಂಡು ಅವರು ಹೇಳುತ್ತಿದ್ದರು :

" ಲಿಂಗಾಯತರನ್ನು ಚುನಾವಣೆಗೆ ನಿಲ್ಲಿಸಿದಂತೆ ನಾಟಕ ಮಾಡಿ ಅಧಿಕಾರವನ್ನೆಲ್ಲಾ ಆ ಕೃಷ್ಣಾಜಿಯೆ ಹಿಡಿದುಕೊಂಡು ಕೂತಿದ್ದಾನೆ. ವೀರಭದ್ರಪ್ಪನಂಥವರೆಲ್ಲ ಕೃಷ್ಣಾಜಿಯ ಕೈಗೊಂಬೆಗಳು. ಅವರಿಂದ ಲಿಂಗಾಯತರಿಗೇನೂ ಲಾಭವಿಲ್ಲ. ಈ ಸಲದ ಚುನಾವಣೆಯಲ್ಲಿ ಕಾಂಗ್ರೆಸ್ಸು ಪೂರಾ ಸೋತು ಹೋಗಿ ನಾವೇ ಅಧಿಕಾರಕ್ಕೆ ಬರುತ್ತೇವೆ. ನಿಮಗೆ ಬೇಕಾದ ಕೆಲಸ ಮಾಡಿಕೊಡುತ್ತೇವೆ ಕಂಟ್ರೋಲು ತೆಗೆದು ಹಾಕುತ್ತೇವೆ. "

ಲೋಕವಿನಾಶ ಪಕ್ಷದವರೂ ಬಂದು ಸುತ್ತಾಡಿಕೊಂಡು ಹೋದರು. ಭಯಂಕರರಾಯನನ್ನೂ ಅವನ ಭೀಮ ಮೀಸೆಯನ್ನೂ ಕಂಡು ಹಳ್ಳಿಗರು ನಕ್ಕರು. " ಹಿಂದೂ ಸಂಸ್ಕೃತಿ, ಸಂಪ್ರದಾಯ " ಮೊದಲಾದ ಅವನ ಮಾತುಗಳು ಯಾರಿಗೂ ಅರ್ಥವಾಗಲಿಲ್ಲ.

ಸದಾಶಿವ, ಕಾಡಪ್ಪ, ಹಣಮಣ್ಣ ಮೊದಲಾದವರ ನೆರವಿನಿಂದ ಸಮಾಜವಾದಿ ಪಕ್ಷದ ಪ್ರಚಾರ ಸಭೆಯೂ ನಡೆಯಿತು ಮಲ್ಲಾಪುರದಲ್ಲಿ. ಸುಂದರಾ

ಬಾಯಿ, ಸಾವಿತ್ರಿಯರ ಪ್ರಯತ್ನದಿಂದಾಗಿ ಹಳ್ಳಿಯ ಹೆಂಗಸರೂ ಭಾಷಣ ಕೇಳಲು ಬಂದಿದ್ದರು.

"ನಾನು ಬಡವ. ನೀವೂ ಬಡವರು. ನಿಮ್ಮಂಥ ಬಡವರ ಪ್ರತಿನಿಧಿಯಾಗಿ ನಾನು ಚುನಾವಣೆಗೆ ನಿಂತಿದ್ದೇನೆ. ಬಡವರ ಕಷ್ಟ ನಿವಾರಣೆಯಾಗಬೇಕಾದರೆ ಬಡವರೇ ಅಸೆಂಬ್ಲಿಗೆ ಆರಿಸಿ ಹೋಗಬೇಕು. ಕಾಂಗ್ರೆಸ್ಸಿನವರೂ ದರಿದ್ರನಾರಾಯಣ ಪಕ್ಷದವರೂ ಶ್ರೀಮಂತರನ್ನು ನಿಲ್ಲಿಸಿದ್ದಾರೆ. ಅವರ ಹತ್ತಿರ ಲಕ್ಷಾಂತರ ಹಣವಿದೆ. ಮೋಟಾರುಗಳಿಗಾಗಿ, ತಿಂಡಿತಿನಿಸಿಗಾಗಿ, ಚಹಕ್ಕಾಗಿ ನೀರಿನಂತೆ ಹಣ ಖರ್ಚು ಮಾಡುವ ಶಕ್ತಿ ಅವರಿಗಿದೆ. ನಿಮ್ಮ ಒಂದೊಂದು ವೋಟಿಗೆ ಹತ್ತು ಹತ್ತು ರೂಪಾಯಿ ಕೊಟ್ಟು ಕೊಂಡುಕೊಳ್ಳಬಲ್ಲರು ಅವರು. ನಿಮಗೆ ಒಂದು ಕಪ್ಪು ಚಹವನ್ನು ಕೂಡ ನಾನು ಕೊಡಲಾರೆ. ನನ್ನ ಈ ದೇಹ, ಈ ಬುದ್ಧಿಯನ್ನು ಮಾತ್ರ ನಿಮ್ಮ ಸೇವೆಗೆ ಇಟ್ಟುಬಿಟ್ಟಿದ್ದೇನೆ. ಶ್ರೀಮಂತರ ರಾಜ್ಯ ಹೋಗಿ ಬಡವರ ರಾಜ್ಯ ಬರಬೇಕೆಂತ ನಿಮ್ಮ ಇಚ್ಛೆಯಿದ್ದರೆ ನನಗೆ ಮತ ಕೊಟ್ಟು ಆರಿಸಿ ತರ್ರಿ" ಎಂದು ಹೇಳಿದ ಕೇಶವ.

"ಕಾಂಗ್ರೆಸ್ಸಿನಿಂದ ಬಡವರ ಉದ್ಧಾರ ಸಾಧ್ಯವಿಲ್ಲ. ಅದಕ್ಕೆಂದೇ ಬಡವರ ಪಕ್ಷವೊಂದನ್ನು ಕಟ್ಟಲು ನಾನು ಇಷ್ಟು ದಿವಸ ಯತ್ನಿಸುತ್ತಿದ್ದೆ. ಅಷ್ಟರಲ್ಲಿ ವಿಶಾಲಪ್ಪ, ಮಹಾಲಿಂಗಪ್ಪ ಮೊದಲಾದ ಸಂಧಿಸಾಧಕರು ಆ ಪಕ್ಷ ಹಿಡಿದುಕೊಂಡು ಅದನ್ನೂ ಕೆಡಿಸಿಬಿಟ್ಟರು. ದರಿದ್ರನಾರಾಯಣ ಪಕ್ಷದ ಸೋಗು ಹಾಕಿಕೊಂಡು ಅವರು ನಿಮ್ಮನ್ನು ಮೋಸಗೊಳಿಸಲು ಹೊರಟಿದ್ದಾರೆ. ಕಾಂಗ್ರೆಸ್ಸಿಗರಿಗಂತೂ ನೀವು ಎಂದೆಂದೂ ವೋಟು ಕೊಡಬೇಡಿರಿ. ದರಿದ್ರನಾರಾಯಣ ಪಕ್ಷದವರನ್ನೂ ನಂಬಬೇಡಿರಿ. ರೈತರಿಗಾಗಿ ಬಡವರಿಗಾಗಿ ಅಂತಃಕರಣಪೂರ್ವಕವಾಗಿ ದುಡಿಯುವವರೆಂದರೆ ಕೇಶವ ಒಬ್ಬರೇ. ಅವರಿಗೇ ನಿಮ್ಮ ಮತ ಕೊಡಿರಿ" ಎಂದು ಹೇಳಿದ ಸದಾಶಿವ.

ವನಮಾಲಾ ಭಾಷಣ ಮಾಡುತ್ತಿದ್ದಾಗಲಂತೂ ಸಭಿಕರ ಮೇಲೆ ಮಿಂಚು ಹರಿದಾಡಿದಂತಾಯಿತು. ಹೃದಯದಿಂದ ನೇರವಾಗಿ ಪುಟಿದು ಬರುತ್ತಿದ್ದ ಅವಳ ಆವೇಶಪೂರ್ಣ ಮಾತುಗಳು ಕೇಳುಗರನ್ನು ಪ್ರಭಾವಿತಗೊಳಿಸದಿರಲಿಲ್ಲ.

"ಇಂದಿನ ಜಗತ್ತಿನಲ್ಲಿರುವ ಜಾತಿ ಎರಡೇ. ಒಂದು ಬಡವರದು, ಇನ್ನೊಂದು ಶ್ರೀಮಂತರದು. ಲಿಂಗವಂತ ಶ್ರೀಮಂತ ಲಿಂಗವಂತ ಬಡವನನ್ನು ಹರಿದು ತಿನ್ನುವದನ್ನು ನೀವು ನೋಡುತ್ತಿದ್ದೀರಿ. ಬ್ರಾಹ್ಮಣ ಶ್ರೀಮಂತ ಬ್ರಾಹ್ಮಣ ಬಡವನನ್ನು ಬಡಿದು ಮುಕ್ಕುವದನ್ನು ನೀವು ನೋಡುತ್ತಿದ್ದೀರಿ. ಬಡವರನ್ನು ಕಡೆಯ ವರೆಗೂ ಅಜ್ಞಾನದಲ್ಲಿಟ್ಟು ಅವರನ್ನು ಸುಲಿದು ತಾವು ಸುಖವಾಗಿರಲೆಂದು ಶೋಷಕರು ಜಾತಿಗಳನ್ನು ನಿರ್ಮಿಸಿದ್ದಾರೆ. ಚುನಾವಣೆಗಳಂಥ ಕಾಲದಲ್ಲಿ ಮಾತ್ರ ಜಾತಿಯ ಅಭಿಮಾನವನ್ನುಪಯೋಗಿಸಿಕೊಂಡು ಸರಕಾರವನ್ನು ಕೈಯಲ್ಲಿ ಹಿಡಿದುಕೊಂಡು ಮತ್ತೆ ನಿಮ್ಮನ್ನು ಸುಲಿದು ತಿನ್ನುತ್ತಾರೆ. ಶ್ರೀಮಂತರ ಈ ಹೊಂಚನ್ನು ಈಗಲಾದರೂ ನೀವು ತಿಳಿದುಕೊಳ್ಳಬೇಕು. ನಾವು ಸಮಾಜವಾದಿಗಳು, ಬಡವರಿಗಾಗಿ ದುಡಿಯುವವರು. ವಿಚಾರ ಮಾಡಿ ನಿಮ್ಮ ಮತ ಕೊಡಬೇಕು" ಎಂದು ವನಮಾಲಾ ಹೇಳಿದಳು.

"ಎಷ್ಟು ಚಲೋ ಮಾತಾಡ್ತಾಳವ್ವಾ ಈಕೆ!" ಎಂದು ಮೆಚ್ಚಿಕೊಂಡರು, ಮಲ್ಲಾಪುರದ ಹೆಂಗಸರು.

"ನೀವು ಗೆದ್ದು ಬಂದರ ನಮಗೇನು ಲಾಭ ಆಗುತ್ತೈತಿ?" ಎಂದು ರೈತನೊಬ್ಬ ಪ್ರಶ್ನಿಸಿದ.

"ಏನಾಗಬೇಕು ಅನ್ನುತ್ತೀರಿ ನೀವು?"

"ನಮಗ ಹೊಲ ಇಲ್ಲ. ಹೊಲ ಕೊಡ್ತೀರೇನು ನೀವು?"

"ನಮ್ಮ ಪಕ್ಷದ ಉದ್ದೇಶಗಳಲ್ಲಿ ಅದೂ ಒಂದು. ಜಮೀನ್ದಾರಿಯನ್ನು ನಿರ್ಮೂಲ ಮಾಡಿ ಹೊಲಗಳನ್ನು ರೈತರಿಗೇ ಕೊಡುವದು."

"ಕಾಂಗ್ರೆಸದವರೂ ಹಿಂಗೇ ಹೇಳುತಿದ್ದರಲ್ಲ ಐದಾರು ವರ್ಷದ ಹಿಂದೆ. ಕೊಟ್ಟರಲ್ಲ ನಮಗವರು ಪರಟಿ!"

"ಕಾಂಗ್ರೆಸಿನವರು ಆಡುವದೊಂದು, ಮಾಡುವದೊಂದು. ಯಾಕಂದರೆ ಅವರೆಲ್ಲಾ ಜಮೀನ್ದಾರರೇ. ತಮ್ಮ ಕಾಲ ಮೇಲೆ ತಾವೇ ಕಲ್ಲು ಹಾಕಿಕೊಳ್ತಾರೇನು ಯಾರಾದರೂ? ಶ್ರೀಮಂತರಿಂದ ಬಡವರ ಉದ್ಧಾರವಾಗಲಾರದು."

"ನೀವೂ ಅವರ ಹಂಗೇ ಮಾಡಲಿಕ್ಕಿಲ್ಲ ಅಂತ ನಂಬುವದು ಹ್ಯಾಂಗ?" ಎಂದನಾ ರೈತ.

ರೈತವರ್ಗದ ಮನಸ್ಸಿನಲ್ಲಿ ಕುದಿಯುತ್ತಿದ್ದ ಸಂದೇಹವನ್ನೆ ಅವನು ಆಡಿ ತೋರಿಸುತ್ತಿದ್ದ ಹಾಗಿತ್ತು.

"ಎಲ್ಲರನ್ನೂ ನಂಬದಿದ್ದರೆ ಹ್ಯಾಗೆ? ಯಾರಾದರೊಬ್ಬರನ್ನು ನಂಬಬೇಕು. ಚೆನ್ನಾಗಿ ಪರೀಕ್ಷೆ ಮಾಡಿ!" ಎಂದ ಸದಾಶಿವ.

"ಯಾರನ್ನೂ ನಂಬದಾಂಗ ಆಗ್ಯೈತಿ ನಮಗ!" ಎಂದನಾ ರೈತ.

ಎಷ್ಟು ಯತ್ನಿಸಿದರೂ, ಒಮ್ಮಿಂದೊಮ್ಮೆಲೆ, ರೈತರ ಆ ಹತಾಶ ಮನೋವೃತ್ತಿಯನ್ನು ಬದಲಿಸುವುದು ಅಸಾಧ್ಯವೆಂಬುದು ಸದಾಶಿವಗೂ ಹೊಳೆಯದಿರಲಿಲ್ಲ. ಬಹುಸಂಖ್ಯ ರೈತರ ಚಿತ್ತವೃತ್ತಿ ಬಧಿರವಾದ ಹಾಗೆ ತೋರುತ್ತಿತ್ತು. ಅವರು ಜಡರೂ ಅಲಸರೂ ಆದ ಹಾಗೆ ಕಾಣುತ್ತಿದ್ದರು. ತಮ್ಮ ಮನೆ, ತಮ್ಮ ಕುಟುಂಬ, ತಮ್ಮ ದೈನಂದಿನ ಜೀವನಗಳನ್ನುಳಿದು ಇನ್ನಾವ ವಿಷಯದಲ್ಲಿಯೂ ಅವರು ಆಸಕ್ತಿ ವಹಿಸುತ್ತಿರಲಿಲ್ಲ. ಶಾಂತವಾಗಿದ್ದ ಗ್ರಾಮೀಣ ವಾತಾವರಣದಲ್ಲಿ ಕಾವೇರಿಸುತ್ತಿದ್ದ ಚುನಾವಣೆಯಲ್ಲಿಯೂ ಹಳ್ಳಿಗರಿಗೆ ವಿಶೇಷ ಆಸ್ಥೆಯುತ್ಪನ್ನವಾಗಿರಲಿಲ್ಲ. ಹಳ್ಳಿಗಳಲ್ಲಿ ಉಪನ್ಯಾಸಗಳು ಜರಗುವುದೊಂದು ಅಪರೂಪದ ವಿಷಯವಾಗಿದ್ದುದರಿಂದ ಬಿಡುವಿದ್ದವರೆಲ್ಲ ಸಭೆಗಳಿಗೆ ಕೂಡುತ್ತಿದ್ದರು. ಭಾಷಣಕಾರರ ಮಾತುಗಳನ್ನು ಅರ್ಥ ಮಾಡಿಕೊಳ್ಳಲು ಯತ್ನಿಸುತ್ತಿದ್ದವರೂ ಕಡಿಮೆಯೆ.

"ಯಾವ ರಾಜ್ಯಾ ಬಂದರೇನೋ, ನಮಗ ರಾಗೀ ಬೀಸೂದು ತಪ್ಪೂದಿಲ್ಲ" ಎಂಬ ಮಾತು ರೈತರ ನಿತ್ಯಪಲ್ಲವಿಯಾಗಿತ್ತು.

ಆ ಭಾವನೆಯನ್ನು ಹೋಗಲಾಡಿಸಿ, ಸಮಾಜವಾದಿ ಪಕ್ಷದ ವಿಷಯವಾಗಿ ಹಳ್ಳಿಗರಲ್ಲಿ ಶ್ರದ್ಧೆಯುತ್ಪನ್ನವಾಗುವಂತೆ ಸದಾಶಿವ ಎಷ್ಟು ಶ್ರಮಿಸಿದರೂ ತತ್ಕಾಲಕ್ಕೆ ಫಲ ದೊರೆಯಲಿಲ್ಲ.

"ಅವರಿವರು ಹೇಳುವದನ್ನ ಕೇಳಿ ಮೋಸ ಹೋಗಬೇಡಿರಿ. ಸ್ವರಾಜ್ಯ ತಂದವರು ನಾವು, ಕಾಂಗ್ರೆಸ್ಸಿನವರು. ನಮ್ಮದು ಗಾಂಧೀ ಪಕ್ಷ, ನೆಹರೂ ಪಕ್ಷ. ಗಾಂಧಿ ನೆಹರೂ ಅಂದರೆ ಬಡವರ ತಂದೆ ತಾಯಿಗಳು. ಕಾಂಗ್ರೆಸ್ಸು ನಿಮ್ಮದೇ. ನಿಮ್ಮ ಬಸವಣ್ಣನೇ ನಮ್ಮ ದೇವರು. ನಿಮ್ಮ ದೇವರ ಗುರುತನ್ನೇ ಇಟ್ಟುಕೊಂಡಿರುವ ಕಾಂಗ್ರೆಸಿಗಲ್ಲದೆ ಬೇರೆಯ ದೇವರಿನವರಿಗೆ ಕೊಡುವಿರೇನು?"

ಎನ್ನುತ್ತಿದ್ದರು ಕಾಂಗ್ರೆಸ್ಸಿಗರು.

ಹಳ್ಳಿಗರಲ್ಲಿ ಕೊಂಚ ದಿಟ್ಟರಾದವರು ಕೇಳುತ್ತಿದ್ದರು :

" ವೋಟು ಕೇಳಾಕಷ್ಟು ಈಗ ಬಂದು ಸವಿ ಸವಿ ಮಾತಾಡಾಕ ಹತ್ತೀರಿ ನೀವು. ಆರೇಳು ವರ್ಷದ ತನಕಾ ನಾವು ಬದುಕಿದ್ದೇವೋ ಸತ್ತಿದ್ದೇವೋ ಅಂತ ನೋಡಾಕ ಕೂಡಾ ಬರಲಿಲ್ಲ ನೀವು. ಅಧಿಕಾರಕ್ಕ ಬಂದು ನೀವು ಚೈನೀ ಹೊಡದರಿ. ನಾವು ಸಾಯುತಾ ಬಿದ್ದೀವಿ .. "

" ಯಾಕೆ? ಅಂಥಾ ಸಂಕಟ ಏನು ಬಂದಿದೆ ನಿಮಗೆ? "

" ನಮಗೆ ತಿನ್ನಾಕ ಸಾಕಷ್ಟು ಕಾಳಿಲ್ಲ, ಕಂಟ್ರೋಲ್ ಧಾರಣಿಗೆ ಬಟ್ಟೆ ಸಿಗೂದಿಲ್ಲ, ನೀವು ನಮಗೆ ರೈತರಿಗೆ ಒಂದು ಹಳಿ ಕೊಡಲಿಲ್ಲ, ಕುಡ ಕೊಡಲಿಲ್ಲ, ಒಂದು ತಗಡು ಕೊಡಲಿಲ್ಲ."...

" ಮಾಲು ಸಾಕಷ್ಟಿರಲಿಲ್ಲವೆಂತ ಹೀಗಾಯಿತು. ಇನ್ನು ಮುಂದೆ ನೀವು ಬೇಡಿದ್ದೆಲ್ಲಾ ಬೇಡಿದ ಕೂಡಲೆ ಕೊಡುತ್ತೇವೆ. ನಮ್ಮಿಂದಲೂ ತಪ್ಪಾಗಿದಾವೆ ದೊಡ್ಡ ಮನಸು ಮಾಡಿ ನಮ್ಮನ್ನೆಲ್ಲಾ ಕ್ಷಮಿಸಿ ನಮ್ಮ ತಪ್ಪು ಹೊಟ್ಟೆಯಲ್ಲಿ ಹಾಕಿಕೊಂಡು ನಮಗೇ ವೋಟು ಕೊಡಿರಿ."

ರೈತರ ಕ್ಷಮೆ ಯಾಚಿಸುವುದೆಂದರೆ ಶಂಕರನ ಹತ್ತಿರ ವರ ಕೇಳಿದ ಹಾಗೆ. ಇಂಥ ಬಣ್ಣದ ಮಾತುಗಳಿಗೆ ರೈತರ ಮನಸ್ಸು ಸುಲಭವಾಗಿ ಕರಗಿಹೋಗುತ್ತದೆ.

" ಕ್ಷಮಾ ಬೇಡುತಾರಂದ ಮ್ಯಾಲ ಇದೊಂದು ಬಾರಿ ಕಾಂಗ್ರೇಸಕ್ಕs ಕೊಡೂಣು ಬಿಡಿರ್ಯೋ," ಎಂದವರು ಕೆಲವರು.

" ತಪ್ಪು ಹೊಟ್ಯಾಗ ಹಾಕ್ಕೊಳ್ರಿ ಅಂತಾರಂದ ಮ್ಯಾಲ ಮುಗದು ಹೋತು. ಇದೊಂದು ಬಾರಿ ಇವರೇ ಇರಲಿ ಬಿಡಿರೋ. ಬ್ಯಾರೆಯವರು ಬಂದರಾದರೂ ನಮಗ ಆಗೂ ಲಾಭ ಅಷ್ಟರಾಗs ಐತಿ," ಎಂದವರು ಕೆಲವರು.

" ಬಸವಣ್ಣನ ಚಿತ್ತಾರ ಮೆರಸುತಾರಂದ ಮ್ಯಾಲ ಅವನ್ನ ಬಿಟ್ಟು ಬ್ಯಾರೆ ಯವರಿಗೆ ವೋಟು ಹಾಕೂದಾದರೂ ಹ್ಯಾಂಗರ್ಯೋ ? " ಎಂದವರು ಕೆಲವರು.

" ಬಸವಣ್ಣನ ಚಿತ್ರ ತೋರಿಸಿ ವೋಟು ತೆಗೆದುಕೊಂಡು ನಾಳೆ ನಿಮ್ಮನ್ನು ಬಾರುಕೋಲಿನಿಂದ ಬಡಿಯುತ್ತಾರೆ. ಕಾಂಗ್ರೆಸ್ಸಿಗರ ಮಾತಿಗೆ ಮೋಸ ಹೋಗಬೇಡಿರಿ," ಎಂದು ಸಮಾಜವಾದಿಗಳು ಪ್ರಚಾರ ನಡಸಿದರಾದರೂ

ಅದರಿಂದ ರೈತರ ಮನಸ್ಸಿನ ಮೇಲೆ ಪರಿಣಾಮವಾಗಲಿಲ್ಲ.

" ಜಗತ್ತಿನ ಯಾವ ದೇಶದಲ್ಲೂ ಇಲ್ಲದಂಥ ಪ್ರಜಾರಾಜ್ಯವನ್ನು ನಾವು ಕಾಂಗ್ರೆಸ್ಸಿಗರು ಸ್ಥಾಪಿಸಿದ್ದೇವೆ. ಬ್ರಿಟಿಷ ಸರಕಾರವಿದ್ದಾಗ ನಿಮಗೆಲ್ಲರಿಗೂ ವೋಟು ಹಾಕುವ ಅಧಿಕಾರ ಇರಲಿಲ್ಲ ನಾವು ಕಾಂಗ್ರೆಸ್ಸಿಗರು ನಿಮಗೆ ಆ ಅಧಿಕಾರ ಕೊಟ್ಟಿದ್ದೇವೆ. ಇದೇನು ಸಣ್ಣ ಅಧಿಕಾರವಲ್ಲ," ಎನ್ನುವರು ಕಾಂಗ್ರೆಸ್ಸಿಗರು.

" ಹೌದೌದೋ ! ಅವರು ಹೇಳೂದೂ ಖರೇವು ! " ಎನ್ನುವರು ರೈತರು.

" ನಾವು ನಿಮಗಾಗಿ ಟೆನನ್ಸಿ ಕಾಯ್ದೆ ಮಾಡಿದ್ದೇವೆ," ಎನ್ನುವರು ಕಾಂಗ್ರೆಸ್ಸಿಗರು.

" ಹೌದೌದೋ ! ಅದೂ ಖರೇವು," ಎನ್ನುವರು ರೈತರು.

" ಮದ್ಯಪಾನ ಪ್ರತಿಬಂಧ ಕಾಯಿದೆ ಮಾಡಿ ಸೆರೆಗಾಗಿ ನಿಮ್ಮ ಮನೆ ಮಾರು ಹಾಳಾಗುತ್ತಿದ್ದುದನ್ನು ನಾವು ತಪ್ಪಿಸಿದ್ದೇವೆ ! " ಎನ್ನುವರು ಕಾಂಗ್ರೆಸ್ಸಿಗರು.

" ಹೌದೌದೋ ! ಅದೂ ಖರೇವು ! " ಎನ್ನುವರು ರೈತರು.

ಕಾಂಗ್ರೆಸ್ ಹುರಿಯಾಳುಗಳು ಕೊಟ್ಟ ಹಣದಿಂದಲೇ ಕಳ್ಳಭಟ್ಟಿ ಸೆರೆ ಕುಡಿದು ಸಭೆಗೆ ಸೇರುತ್ತಿದ್ದ ಜನರು, " ಕಾಂಗ್ರೆಸ್ ಕೀ ಜೈ! " ಎಂದು ಕೂಗುತ್ತಿದ್ದರು.

" ವೋಟು ಯಾರಿಗೆ ? " ಎಂದು ಒಬ್ಬ ಕೇಳುತ್ತಿದ್ದ.

" ಕಾಂಗ್ರೆಸ್ಸಿಗೆ ! " ಎಂದು ಇನ್ನೊಬ್ಬ ಹೇಳುತ್ತಿದ್ದ.

ಅವರಿಬ್ಬರೂ ಕುಡುಕರೇ ಆಗಿರುತ್ತಿದ್ದರು.

ದರಿದ್ರನಾರಾಯಣ ಪಕ್ಷದ ಅಭಿಮಾನಿಗಳಲ್ಲೂ ಕುಡುಕರಿಗೆ ಕೊರತೆಯಿರಲಿಲ್ಲ. ಚುನಾವಣೆಗೆ ಹುರಿಯಾಳಾಗಿದ್ದ ಮಹಾಲಿಂಗಪ್ಪನೂ ಮಡಿವಾಳ ವಕೀಲನೂ ಹೆಸರಾಂತ ಕುಡುಕರು. ಮಹಾಲಿಂಗಪ್ಪನಿಗೆ ದಿನವೂ ಒಂದು ಸೀಸೆಯಷ್ಟಾದರೂ ಮದ್ಯ ಅಗತ್ಯವಾಗಿ ಬೇಕಾಗುತ್ತಿತ್ತು. ಮಡಿವಾಳನಿಗಂತೂ ಇಪ್ಪತ್ನಾಲ್ಕು ಗಂಟೆಗಳ ಕಾಲವೂ ಮದ್ಯದ ಅಮಲು ಅತ್ಯಾವಶ್ಯಕವೆನ್ನಿಸಿತ್ತು. ಪ್ರಚಾರಕ್ಕೆಂದು ಅವರು ಹೋದ ಕಡೆಗಳಲ್ಲೆಲ್ಲ ಸಹಜವಾಗಿಯೆ ಅವರ

ಸುತ್ತಲೂ ಕುಡುಕರ ಗುಂಪು ಸೇರುತ್ತಿತ್ತು. ಶಿವಲಿಂಗಯ್ಯ, ಚೆನ್ನಬಸಪ್ಪ, ಸೋಮಶೇಖರಪ್ಪ ಮೊದಲಾದವರಿಗೆ ಬೇಸರವಾಗಿದ್ದಿತಾದರೂ ಚುನಾವಣೆ ಮುಗಿಯುವ ವರೆಗೂ ತಾಳ್ಮೆವಹಿಸದೆ ಅನ್ಯ ಮಾರ್ಗವಿರಲಿಲ್ಲ.

"ನಿಮ್ಮ ಹುರಿಯಾಳುಗಳೇ ಕುಡೀತಾರಲ್ಲರೀ ?" ಎಂದು ಯಾರಾದರೂ ಕೇಳಿದಾಗ ಶಿವಲಿಂಗಯ್ಯನವರು, ಮನಸ್ಸಿನಲ್ಲಿರದಿದ್ದರೂ ಆ ಅಕೃತ್ಯವನ್ನು ಸಮರ್ಥಿಸಬೇಕಾಗಿ ಬರುತ್ತಿತ್ತು.

"ಅದೇನು ದೊಡ್ಡ ಮಾತು ! ಕಾಂಗ್ರೆಸ್ಸಿನವರು ಕುಡಿಯುವದಿಲ್ಲೇನು ? ದೊಡ್ಡ ದೊಡ್ಡ ಜಡ್ಜಿಗಳು, ಆಫೀಸರುಗಳು ಕುಡಿಯುವದಿಲ್ಲೇನು ?"

"ಹಾಂಗಾದರ ನೀವೂ ಯಾಕೆ ಕುಡೀಬಾರದು ?"

"ನನಗ ಮನಸ್ಸಿಲ್ಲ, ನಾ ಕುಡಿಯುವದಿಲ್ಲ. ಅವರಿಗೆ ಮನಸ್ಸೈತಿ, ಕುಡೀತಾರೆ. ಅವರವರ ಹಾದಿ ಅವರವರಿಗೆ!"

"ಕುಡೀಬಾರದು ಅಂತ ಗಾಂಧಿಯವರು ಹೇಳಿರಲಿಲ್ಲೇನು, ಗಾಂಧಿಯವರ ಶಿಷ್ಯರ ಪಕ್ಷ ನಿಮ್ಮದು ಅಂತೀರಿ. ಮಹಾಲಿಂಗಪ್ಪ ಮಡಿವಾಳಪ್ಪ ಗಾಂಧೀ ಶಿಷ್ಯರೆಂದರ ಯಾರಾದರೂ ನಕ್ಕಾರು."

"ಎಲ್ಲಾರೂ ಗಾಂಧಿಯ ಹಾಂಗ ಆಗೂದು ಶಕ್ಯ ಐತೇನು ?" ಎಂದು ಹೇಳಿ ಅವರ ಬಾಯಿ ಮುಚ್ಚಿಸುತ್ತಿದ್ದರು ಶಿವಲಿಂಗಯ್ಯನವರು.

ಕಾಂಗ್ರೆಸ್ಸಿಗಿಂತ ಹೆಚ್ಚಾಗಿ ಸಮಾಜವಾದಿ ಪಕ್ಷದ ಬಗ್ಗೆ ವಿಶಾಲಪ್ಪನವರಿಗೂ ಅವರ ಹಿಂಬಾಲಕರಿಗೂ ತೀವ್ರವಾದ ವಿವಂಚನೆಯುಂಟಾಗಿತ್ತು. "ಕಾಂಗ್ರೆಸ್ಸಿನ ಬಗ್ಗೆ ಜನತೆಯಲ್ಲಿ ಮೊದಲಿನ ಆದರ ಭಾವವುಳಿದಿಲ್ಲವಾದುದರಿಂದ ಕಾಂಗ್ರೆಸ್ಸೇತರ ಪಕ್ಷಗಳಿಗೇ ವೋಟು ಬೀಳುವದು ಖಂಡಿತ. ಲೋಕ ವಿನಾಶ ಪಕ್ಷಕ್ಕಂತೂ ನಮ್ಮ ಭಾಗದಲ್ಲಿ ಮರ್ಯಾದೆಯಿಲ್ಲ. ಕೇಶವನೊಬ್ಬನೇ ಪ್ರಚಾರಕ್ಕೆ ಹೊರಟಿದ್ದರೆ ಅವನಿಗೂ ಕಿಮ್ಮತ್ತು ಸಿಕ್ಕುತ್ತಿರಲಿಲ್ಲ. ಅವನ ಸಂಗಡ ಈ ಸದಾಶಿವ ಸೇರಿಕೊಂಡು ಪ್ರಚಾರ ಮಾಡುತ್ತಿರುವದು ಮಾತ್ರ ವಿಚಾರ ಮಾಡಬೇಕಾದ ಸಂಗತಿಯಾಗಿದೆ. ಲಿಂಗಾಯತನಾದ ಸದಾಶಿವ ಆ ಬ್ರಾಹ್ಮಣನ ಪಕ್ಷ ಕಟ್ಟುವದೆಂದರೇನು ! ಏನಾದರೂ ಮಾಡಿ ಇವನನ್ನು ಒಡೆಯಬೇಕು," ಎಂದು ಮಹಾಲಿಂಗಪ್ಪನಿಗೆ ಸೂಚನೆಯಿತ್ತರು ವಿಶಾಲಪ್ಪ.

ಮಹಾಲಿಂಗಪ್ಪ ಶಿವಲಿಂಗಯ್ಯನವರಿಗೆ ಹೇಳಿಕೊಂಡ. ಸದಾಶಿವನ ಮನಸ್ಸು ತಿರುಗಿಸುವ ಕೆಲಸವನ್ನು ಅವರು ಚೆನ್ನಬಸಪ್ಪನಿಗೊಪ್ಪಿಸಿದರು.

" ವಿರೋಧಿ ಪಕ್ಷ ಬೇಕೆಂತ ಹೇಳಿ ನಮ್ಮನ್ನೆಲ್ಲಾ ಎಬ್ಬಿಸಿದವರು ನೀವು. ನೀವು ಎದ್ದಿರಿ ಅಂತ ಸೋಮಶೇಖರಪ್ಪ ವಿಶಾಲಪ್ಪ ಕಾಂಗ್ರೆಸ್ ಬಿಟ್ಟುಬಂದರು. ಈಗ ನೀವೇ ನಮ್ಮ ವಿರುದ್ಧ ಹೋದರೆ ಹ್ಯಾಂಗ? " ಎಂದು ಚೆನ್ನಬಸಪ್ಪ ವಾದಿಸಿದ.

" ವಿರೋಧಿ ಪಕ್ಷ ಅಂದರೆ ಸಿಕ್ಕ ಸಿಕ್ಕ ಜನರನ್ನು ಕೂಡಿಸಿ ಅವರನ್ನು ಹುರಿಯಾಳುಗಳನ್ನಾಗಿ ನಿಲ್ಲಿಸುವದಲ್ಲ. ವಿರೋಧಕ್ಕೂ ಒಂದು ತತ್ವ ಒಂದು ನೀತಿ ಬೇಕು. ದರಿದ್ರನಾರಾಯಣ ಪಕ್ಷಕ್ಕೆ ಯಾವ ತತ್ವವೂ ಉಳಿಯಲಿಲ್ಲ. ಅದಕ್ಕೇ ನಾನು ಕೇಶವನ ಬೆಂಬಲಕ್ಕೆ ನಿಂತದ್ದು," ಎಂದ ಸದಾಶಿವ.

" ನಿಮ್ಮ ವ್ಯಾಲ ನಮ್ಮ ಜನರೆಲ್ಲಾ ಸಿಟ್ಟಾಗಿವ್ದಾರೆ."

" ಅವರ ಸಿಟ್ಟಿನಿಂದ ನನಗೇನೂ ಆಗಬೇಕಾಗಿಲ್ಲ. ಇಲ್ಲಿಯ ವರೆಗೂ ಯಾರ ಸಿಟ್ಟಿಗೂ ಹೆದರಿದವನಲ್ಲ ನಾನು. ತಂದೆಯ ವಿರೋಧವನ್ನೇ ಕಟ್ಟಿಕೊಂಡಿದ್ದೇನೆ. ಇನ್ನು ಬೇರೆಯವರ ಮಾತೇನು ? "

" ಇಷ್ಟು ಹಟ ಚಲೋದಲ್ಲ ಸದಾಶಿವಾ ! " ಎಂದು ಸ್ವಲ್ಪ ಬಿರುಸಾಗಿಯೆ ನುಡಿದ ಚೆನ್ನಬಸಪ್ಪ

ಸದಾಶಿವ ಕೊಂಚವೂ ಅಪ್ರತಿಭನಾಗಲಿಲ್ಲ. ವಿಕಾರರಹಿತವಾದ ಧ್ವನಿಯಿಂದಲೇ ಕೇಳಿದ :

" ಯಾಕೆ? ಯಾರಾದರೂ ನನ್ನನ್ನು ಹೊಡೆಯಲು ಬರಬಹುದು, ಅನ್ನುತ್ತೀರಾ ? "

" ಹೇಳಿ ಕೇಳಿ ಚುನಾವಣೆಯ ಗದ್ದಲ. ಇದೂ ಒಂದು ಲಢಾಯಿ ಇದ್ದ ಹಾಂಗ. ತಲೆ ಬಿಸಿಯಾದಾಗ ಯಾರು ಏನು ಮಾಡಿಯಾರು ಅನ್ನುವ ಭರವಸೆಯಿಲ್ಲ. ಅದರಾಗ ಕುಡುಕರ ಗ್ಯಾಂಗು ಬ್ಯಾರೆ...."

" ಇರಲಿರಲಿ. ಇಂಥ ಸಾವಿರ ಕುಡುಕರನ್ನು ನಾನೂ ಕಂಡಿದ್ದೇನೆ," ಎಂದು ಮಾತನ್ನು ಮುಗಿಸಿದ ಸದಾಶಿವ.

ದರಿದ್ರನಾರಾಯಣ ಪಕ್ಷದ ವಿರುದ್ಧವಾಗಿ ಲೇಖನಗಳನ್ನು ಬರೆಯ

ಕೂಡದೆಂದು ಈಶ್ವರನಿಗೂ ಎಚ್ಚರಿಕೆ ಕೊಡಲಾಯಿತು.

"ಇವತ್ತೇ ಜೀವ ಹೋದರೂ ಚಿಂತೆಯಿಲ್ಲ. ಗುಂಡಾಗಳಿಗೆ ಅಂಜಿ, ನನಗನ್ನಿಸಿದ್ದನ್ನು ಬರೆಯುವದನ್ನು ಎಂದೂ ಬಿಡುವದಿಲ್ಲ," ಎಂದು ಸ್ಪಷ್ಟವಾಗಿ ಉತ್ತರವಿತ್ತ ಈಶ್ವರ.

ಚೆನ್ನಬಸಪ್ಪ ಶಿವಲಿಂಗಯ್ಯನವರ ಹತ್ತಿರ ಹೋಗಿ, ನಡೆದುದೆಲ್ಲವನ್ನೂ ತಿಳಿಸಿ,

"ಅವರಿಬ್ಬರೂ ಯಾರ ಮಾತೂ ಕೇಳುವವರಲ್ಲ ಅಣ್ಣಾವರೆ. ಇನ್ನೇನು ಮಾಡುವದು ?" ಎಂದು ಕೇಳಿದ.

"ಹೇಳಿ ನೋಡಿದ್ದಂತೂ ಆಯಿತಲ್ಲ! ನಮ್ಮ ಕರ್ತವ್ಯ ನಾವು ಮಾಡಿದೆವು. ಇನ್ನು ಉಪಾಯವಿಲ್ಲ."

"ಯಾರಾದರೂ ಹುಂಬರು ಅವರಿಗೇನಾದರೂ ಬಡಿದು ಹೊಡಿದು ಮಾಡಿದರೆ ?"

"ಹಾಂಗ ಆಗದಂತೆ ನಾವು ನೋಡಿಕೋಬೇಕು. ಗದ್ದಲದಾಗ ಎಲ್ಲಾ ನಾವೇ ನೋಡಿಕೊಳ್ಳೂದೆಲ್ಲಿ ಶಕ್ಯ ಐತಿ ? ಆ ಊರು ಈ ಊರು ತಿರುಗುತಾ ಇರುವಾಗ ಯಾರಾದರೂ ಏನಾದರೂ...."

"ಅಂಥಾದ್ದು ಆಗದಿರಲಿ ಅಂತ ದೇವರನ್ನ ಬೇಡಿಕೊಳ್ಳೂದಷ್ಟು ನಮ್ಮ ಕೈಯಾಗಿರೂದು. ಮುಂದಿದ್ದು ಮಾದೇವನಿಗೇ ಕೂಡಿದ್ದು," ಎಂದರು ಶಿವ ಲಿಂಗಯ್ಯನವರು.

೨೧

ಸೈಕ್ಲೊಸ್ಟೈಲ್ ಯಂತ್ರದೊಡನೆ ತಾನೂ ಒಂದು ಯಂತ್ರವಾದ ಹಾಗೆ ವಿಮನಸ್ಕತೆಯಿಂದ ಕೆಲಸ ಮಾಡುತ್ತಿದ್ದಳು ಸಾವಿತ್ರಿ. ಯಂತ್ರಕ್ಕೆ ಕಾಗದ ಹಾಕಿ ಅಚ್ಚು ಮಾಡುತ್ತಿದ್ದ ಈಶ್ವರ. ಆಯಾಸವಾಗಿ ಮೇಲುಸಿರು ಬಿಡುತ್ತಿದ್ದುದೂ ಅವಳ ಗಮನಕ್ಕೆ ಬಂದಿರಲಿಲ್ಲ. ಅಂದು ಮಧ್ಯಾಹ್ನ ಸುಂದರಾಬಾಯಿಯಿಂದ ತಿಳಿದು ಬಂದಿದ್ದ ಆ ಭಯಂಕರ ಸಂಗತಿ ಸಾವಿತ್ರಿಯನ್ನು ನಿರ್ವಿಣ್ಣಳನ್ನಾಗಿಸಿತ್ತು.

" ಸದಾಶಿವಗೆ ಹುಷಾರಾಗಿರಲಿಕ್ಕೆ ಹೇಳು ಸಾವಿತ್ರೀ. ಗುಂಡಾ ಮಂದಿ ಅವನ್ನ ಬಡಿಯಬೇಕೆಂತ ವಿಚಾರ ಮಾಡಿದ್ದಾರಂತೆ," ಎಂದು ಹೇಳಿದ್ದಳು ಸುಂದರಾಬಾಯಿ.

ಸಾವಿತ್ರಿಯ ಹೃದಯದ ಮಿಡಿತವೇ ನಿಂತುಹೋದಂತಾಗಿತ್ತು.

" ಬಡೀತಾರೆ? ಯಾಕೆ? ಯಾರು ಹೇಳಿದರು ನಿಮಗೆ? "

" ರಾಮಾಪುರದಲ್ಲಿ ಮಾತಾಡುತಾ ಇದ್ದರಂತೆ ಯಾರೋ. ನಮ್ಮವರು ಹೇಳುತ್ತಿದ್ದರು ನಿನ್ನೆ ರಾತ್ರಿ."

ಹೆಚ್ಚು ಮಾತು ಬೆಳೆಸದೆ ಸಾವಿತ್ರಿ ಮನೆಗೆ ಬಂದಿದ್ದಳು. ಎರಡು ದಿನಗಳ ಹಿಂದೆ ಪ್ರಚಾರಕ್ಕೆಂದು ಹಳ್ಳಿಗಳ ಕಡೆ ಹೋಗಿದ್ದ ಸದಾಶಿವನಿನ್ನೂ ಮರಳಿ ಬಂದಿರಲಿಲ್ಲ.

ಮಹಾದೇವಪ್ಪನ ಮುಖ ದೃಷ್ಟಿಗೆ ಬೀಳುತ್ತಲೂ ಸಾವಿತ್ರಿಗೆ ಅಳುವುಕ್ಕಿ ಬಂದಿತ್ತು. ಸೀರೆಯ ಸೆರಗನ್ನು ಮುಖಕ್ಕೆ ಹಾಕಿಕೊಂಡು ಬಿಕ್ಕಿ ಬಿಕ್ಕಿ ಅತ್ತು ಬಿಟ್ಟಿದ್ದಳು.

ನೂಲುತ್ತ ಕುಳಿತಿದ್ದ ಮಹಾದೇವಪ್ಪನೂ ಕೊಂಚ ಗಾಬರಿಗೊಂಡು ಪ್ರಶ್ನಿಸಿದ್ದ :

" ಯಾಕೆ ಸಾವಿತ್ರೀ ? ಏನಾತು ? "

ಅಳುತ್ತಿದ್ದ ಹಾಗೆಯೆ ಅವಳು ಎಲ್ಲವನ್ನೂ ಹೇಳಿದಾಗ ಮಹಾದೇವಪ್ಪ ನಿಗೂ ಚಿಂತೆಗಿಟ್ಟುಕೊಂಡಿತ್ತು. ಚುನಾವಣೆಯ ಗದ್ದಲದಲ್ಲಿ ಎಂಥ ಘಟನೆ ಯಾದರೂ ನಡೆಯಬಹುದೆಂಬುದನ್ನು ಅವನೂ ಬಲ್ಲ. ಅದರಲ್ಲೂ, ಈ ಸಲದ ಚುನಾವಣೆ ಹಿಂದಿನ ಎಲ್ಲ ಚುನಾವಣೆಗಳಿಗಿಂತ ದೊಡ್ಡದು. ಹಿಂದಿನ ಚುನಾ ವಣೆಗಳ ಕಾಲಕ್ಕೆ ಹೆಚ್ಚು ಜನರಿಗೆ ಮತಾಧಿಕಾರವಿರಲಿಲ್ಲ. ಅಧಿಕಾರಕ್ಕಾಗಿ ಇಷ್ಟೊಂದು ಸ್ಪರ್ಧೆಯೂ ಇರಲಿಲ್ಲ. ಆಗ ಗಾಂಧೀಜಿಯವರು ಬದುಕಿದ್ದರಾ ದುದರಿಂದ ಕಾಂಗ್ರೆಸ್ಸಿಗರೆಲ್ಲ ಶಾಂತ ರೀತಿಯಿಂದ ಕೆಲಸ ಮಾಡುತ್ತಿದ್ದರು. ಕುಡುಕರು ಮತ್ತು ಪುಂಡರನ್ನು ಅವರು ತಮ್ಮೊಡನೆ ಸೇರಿಸಿಕೊಳ್ಳುತ್ತಿರಲಿಲ್ಲ. ಇಂದಿನ ಪರಿಸ್ಥಿತಿಯೆ ವಿಪರೀತವಾಗಿರುವುದನ್ನು ಮಹಾದೇವಪ್ಪನೂ ಕಂಡು ಕೊಂಡಿದ್ದ. ಕಾಂಗ್ರೆಸ್ಸಿಗರಲ್ಲಿಯೆ ಆಗಲಿ, ಕಾಂಗ್ರೆಸ್ಸೇತರರಲ್ಲಿಯೆ ಆಗಲಿ ಯಾರಲ್ಲಿಯೂ ನೀತಿಯೆಂಬುದು ಕಾಣಿಸುತ್ತಿರಲಿಲ್ಲ. ಕುಡಿದು ಗದ್ದಲ ಮಾಡುವ ಜನರು ತಮ್ಮ ಪಾಶವೀಶಕ್ತಿ ಮತ್ತು ದರ್ಪಗಳ ಬಲದಿಂದ ಕಾಂಗ್ರೆಸ್ ಹುರಿಯಾಳನ್ನು ಆರಿಸಿ ತರಲು ಯತ್ನಿಸುವುದನ್ನು ನಿರೀಕ್ಷಿಸಿದ ಹಾಗೇ ಮಹಾ ದೇವಪ್ಪನ ಹೃದಯಕ್ಕೆ ಆಘಾತವಾಗಿತ್ತು. ಕಾಂಗ್ರೆಸ್ಸಿನ ಪರಮ ಭಕ್ತನಾಗಿದ್ದ ಮಹಾದೇವಪ್ಪ ಉಭಯ ಸಂಕಟಕ್ಕೆ ಸಿಲುಕಿಕೊಂಡು ತೊಳಲುತ್ತಿದ್ದ. ಕಾಂಗ್ರೆಸ್ಸಿನ ಬಗೆಗಿದ್ದ ಅಭಿಮಾನವನ್ನೂ ಬಿಟ್ಟುಕೊಡಲಾರ ; ಕಾಂಗ್ರೆಸ್ಸಿಗರು ನಡಸುತ್ತಿದ್ದ ಅನೈತಿಕ ವ್ಯವಹಾರವನ್ನೂ ಸಹಿಸಲಾರ. ಸತ್ಯ ಅಹಿಂಸೆಗಳ ಆರಾಧಕರಾದ ಕಾಂಗ್ರೆಸ್ಸಿಗರು ಹೀಗೆ ಅಡ್ಡ ಹಾದಿ ಹಿಡಿಯ ಬಾರದೆಂದು ಅವನು ಬೋಧಿಸುತ್ತಿದ್ದುದೆಲ್ಲ ವ್ಯರ್ಥವಾಗಿತ್ತು. " ಚುನಾವಣೆ ಅಂದ ಮ್ಯಾಲ ಇಂಥಾದ್ದೆಲ್ಲಾ ನಡಿಯೂದೇ," ಎಂದಿಷ್ಟೆ ಹೇಳಿ ಅವನ ಬಾಯಿ ಮುಚ್ಚಿಸಿದ್ದ ಮಲ್ಲಪ್ಪ. ಮಹಾದೇವಪ್ಪ ಆಮೇಲೆ ಯಾರೊಡನೆಯೂ ಆ ವಿಚಾರ ಚರ್ಚೆ ಗಿಳಿದಿರಲಿಲ್ಲ. ಸದಾಶಿವ ಕಾಂಗ್ರೆಸ್ ವಿರೋಧಿಯಾಗಲು ಕಾರಣವೇನೆಂಬುದು

ಆಗ ಅವನಿಗೆ ನಿಧಾನವಾಗಿ ಅರ್ಥವಾಗತೊಡಗಿತ್ತು; ಕಾಂಗ್ರೆಸ್ ಸಂಸ್ಥೆಗಾಗಿ ಮೂವತ್ತು ವರ್ಷಗಳ ಕಾಲ ದುಡಿದವರೂ ಗಾಂಧೀಜಿಯುವರ ಪ್ರೀತಿಯ ಶಿಷ್ಯ ರಾಗಿದ್ದವರೂ ಕಾಂಗ್ರೆಸ್ಸನ್ನು ಬಿಡಲು ಕಾರಣವೇನೆಂಬುದು ಅವನಿಗೆ ತಿಳಿಯ ಲಾರಂಭವಾಗಿತ್ತು. ಆ ಅರಿವು ಮೂಡುತ್ತ ಬಂದ ಹಾಗೆ ತನ್ನ ಮಗನ ಬಗ್ಗೆ ಕೇಶವನ ಬಗ್ಗೆ ಸಹಾನುಭೂತಿಯೂ ಉತ್ಪನ್ನವಾಗುತ್ತ ಬಂದಿತ್ತು. ಆದರೂ, ಆಗಲೂ ಸಹ ಕಾಂಗ್ರೆಸ್ಸಿಗೆ ಅಪಜಯವಾಗಲೆಂದು ಅವನ ಮನಸ್ಸು ಆಶಿಸಲಿಲ್ಲ. ಪರಮ ನೀಚನಾದ ಪತಿಯನ್ನೂ ದ್ವೇಷಿಸದೆ ನಿಷ್ಠೆಯಿಂದಿರುವ ಪತಿವ್ರತೆಯ ಹಾಗಾಗಿತ್ತು ಅವನ ಮನಸ್ಸು. ಅಂತೆಯೆ, ಅವನು ಚುನಾವಣೆಯ ಗದ್ದಲ ದಲ್ಲಿ ಯಾವ ಭಾಗವನ್ನೂ ವಹಿಸದೆ ತಟಸ್ಥನಾಗಿದ್ದುಕೊಂಡು ನಿತ್ಯದ ಕೆಲಸ ಗಳನ್ನು ಶಾಂತನಾಗಿಯೆ ನೆರವೇರಿಸುತ್ತ ಬಂದಿದ್ದ.

ಸಾವಿತ್ರಿಯ ಮಾತಿನಿಂದಾಗಿ ಅವನ ಮನಶ್ಯಾಂತಿಯೂ ಹೊಯ್ದಾಡ ತೊಡಗಿತ್ತು. ಆದರೂ, ಧೈರ್ಯ ತಂದುಕೊಂಡು ಸಾವಿತ್ರಿಯನ್ನು ಸಂತೈ ಸುತ್ತಾ,

" ಇಷ್ಟಕ್ಕೆಲ್ಲಾ ಕಣ್ಣೀರು ಹಾಕುತಾರೇನೇ ಹುಚ್ಚೀ? ದೇವರ ದಯ ವೊಂದು ಇದ್ದರೆ ಸದಾಶಿವನಿಗೇನೂ ಆಗುವದಿಲ್ಲ. ಸಮಾಧಾನ ಮಾಡಿಕೋ," ಎಂದು ಹೇಳಿದ್ದ.

ಆಗಲೂ ಸಾವಿತ್ರಿಗೆ ಸಮಾಧಾನವಾಗಿರಲಿಲ್ಲ. ಸದಾಶಿವನ ಆಗಮನ ವನ್ನೆ ನಿರೀಕ್ಷಿಸುತ್ತ ಅವಳು ಯಾಂತ್ರಿಕವಾಗಿ ಕೆಲಸದಲ್ಲಿ ತೊಡಗಿದ್ದಳು. ಮಧ್ಯಾಹ್ನ ಅವಳು ಶಾಲೆಗೂ ಹೋಗಿರಲಿಲ್ಲ. ರಜೆಯ ಚೀಟಿ ಕಳುಹಿಸಿಕೊಟ್ಟು, ಈಶ್ವರನ ಜತೆಗೆ ಕುಳಿತು ಹಸ್ತಪತ್ರಿಕೆಗಳನ್ನು ಮುದ್ರಿಸುವ ಕಾರ್ಯದಲ್ಲಿ ಮಗ್ನ ಳಾಗಿದ್ದಳು. ಕೆಲವು ದಿನಗಳಿಂದ ಈಶ್ವರನೂ ಅದೇ ಕಾರ್ಯದಲ್ಲಿ ತೊಡಗಿ ಕೊಂಡಿದ್ದ. ಸದಾಶಿವನ ಮನೆಯೇ ಕೇಶವನ ಚುನಾವಣಾ ಕಛೇರಿಯಾ ದಂತಾಗಿತ್ತು. ಕಾಂಗ್ರೆಸ್ಸು, ದರಿದ್ರನಾರಾಯಣ ಪಕ್ಷ, ಲೋಕವಿನಾಶ ಪಕ್ಷ ಗಳನ್ನು ಟೀಕಿಸಿ ದಿನವೂ ಒಂದು ಲೇಖನ ಬರೆಯುತ್ತಿದ್ದ ಈಶ್ವರ. ಸೈಕ್ಲೊ ಸ್ಟೈಲ್ ಯಂತ್ರದ ಮೇಲೆ ಪ್ರತಿಗಳನ್ನು ತೆಗೆದು ಹಳ್ಳಿಗಳಿಗೆಲ್ಲ ಕಳಿಸುತ್ತಿದ್ದರು.

ರಾತ್ರಿ ಹನ್ನೆರಡು ಗಂಟೆಯ ವರೆಗೂ ಆ ಕೆಲಸ ನಡೆಯುತ್ತಿತ್ತು. ಸಾವಿತ್ರಿಯೂ ಪರಮ ನಿಷ್ಠೆಯಿಂದ ಆ ಕೆಲಸದಲ್ಲಿ ಭಾಗವಹಿಸಿ ದುಡಿಯುತ್ತಿದ್ದಳು. ಮಲ್ಲಪ್ಪ ಎಷ್ಟು ವಿರೋಧಿಸಿದರೂ ಅವಳು ಅದನ್ನು ನಿಲ್ಲಿಸಿರಲಿಲ್ಲ.

" ಸ್ವಂತ ಮಗಳೇ ನನ್ನ ವಿರುದ್ಧ ಕೆಲಸ ಮಾಡುವದೆಂದರೇನು? ನೀನು ನನ್ನ ಮಾನ ಕಳೆಯುತ್ತೀ ಸಾವಿತ್ರೀ," ಎಂದು ಗದರಿಸಿದ್ದ ಮಲ್ಲಪ್ಪ.

" ಈ ಒಂದು ವಿಷಯದಲ್ಲಿ ನೀನು ನನಗೇನೂ ಹೇಳಬೇಡ ಅಪ್ಪಾ," ಎಂದು ದೃಢಸ್ವರದಲ್ಲಿ ಉತ್ತರವಿತ್ತಿದ್ದಳು ಸಾವಿತ್ರಿ.

ತಂದೆ ಮಗಳ ಕಲಹ ವಿಕೋಪಕ್ಕೆ ಹೋಗಿ ಮಗಳು ಮನೆ ಬಿಟ್ಟು ಹೋದರೂ ಹೋಗಬಹುದೆಂದು ಹೆದರಿದ ಸಾವಿತ್ರಿಯ ತಾಯಿ, ತನ್ನ ಗಂಡನಿಗೆ, " ಅವಳೇನಾದರೂ ಮಾಡಿಕೊಳ್ಳಲಿ. ನೀವು ಅವಳ ತಂಟೆಗೆ ಹೋಗಬ್ಯಾಡ್ರಿ. ಬೆಳೆದ ಹುಡುಗಿ. ತಲೆ ಕೆಟ್ಟು ಮನೆ ಬಿಟ್ಟು ಹೋಗಿಬಿಟ್ಟರೆ ಮುಂದೆ ಗತಿಯೇನು?" ಎಂದು ಬುದ್ಧಿ ಹೇಳಿದ್ದಳು.

" ಏನಾದರೂ ಹಾಳಾಗಲೊಲ್ಲ್ಯಾಕೆ?" ಎಂದುಕೊಂಡು ಅಂದಿನಿಂದ ಆ ವಿಷಯವಾಗಿ ಮೌನ ವಹಿಸಿದ್ದ ಮಲ್ಲಪ್ಪ.

" ತಂದೆ ಕಾಂಗ್ರೆಸ್ಸಿನವ, ಮಗಳು ಸೋಶಲಿಸ್ಟ. ಮಜಾನೇ ಆತು ಬಿಡಪ್ಪ!" ಎಂದು ಹೇಳಿ ನಗುತ್ತಿದ್ದ ಧರ್ಮಣ್ಣ.

" ನಾನಾದರೂ ಏನು ಮಾಡಲೋ ಧರ್ಮಣ್ಣ?"

" ಆಗಲೆ ಅವಳಿಗೊಂದು ಮದುವೆ ಮಾಡಿಬಿಟ್ಟಿದ್ದರೆ ಇಂಥಾ ಪಂಚೇತಿ ಎಲ್ಲಿ ಬರ್ತಿತ್ತು? ಈಗ ನೋಡು. ಏನೇನಾತು? ನಾಳೆ ಇವಳೂ ಆ ವನಮಾಲಳ ಹಾಂಗ ಸಭೆಯೊಳಗ ಭಾಷಣಾ ಮಾಡುತಾ ತಿರುಗಿದರೂ ತಿರುಗಬಹುದು."

" ನೀವು ಅವಳಿಗೆ ಅಷ್ಟ್ಯಾಕೆ ಸ್ವಾತಂತ್ರ್ಯ ಕೊಟ್ಟೀರಿ ಮಲ್ಲಪ್ಪ? ಹೆಂಗಸೆಂದರೆ ಹೆಂಗಸಿನ ಹಾಂಗಿರಬೇಕು. ಒಂದು ಕಪಾಳಿಗೆ ಬಡದು ಮನಿಯೊಳಗ ಕುಂಡ್ರಿಸರೆಲ್ಲ!" ಎನ್ನುತ್ತಿದ್ದ ಪ್ರಭಣ್ಣ.

ದಂಡೋಪಾಯವೂ ನಡೆಯುವಂತಿಲ್ಲವೆಂಬುದನ್ನು ಬಲ್ಲ ಮಲ್ಲಪ್ಪ ಏನೂ ಆಡದೆ ಸುಮ್ಮನಿದ್ದು ಬಿಡುತ್ತಿದ್ದ.

ವನಮಾಲಾ ಬಂದಾಗಲೆಲ್ಲ ಅವಳೊಡನೆ ಸಾವಿತ್ರಿ ಸಮೀಪದ ಹಳ್ಳಿಗಳಿಗೂ ಹೋಗಿ ಹೆಂಗಸರನ್ನು ಕಂಡು, ಕೇಶವನಿಗೇ ಮತ ಹಾಕುವಂತೆ ಪ್ರಚಾರ ಮಾಡಿ ಬರುತ್ತಿದ್ದಳು. ವನಮಾಲಳಂತೆ ಸಾವಿತ್ರಿಯೂ ಉತ್ಸಾಹದಿಂದ ಕೆಲಸ ಮಾಡುವುದನ್ನು ವೀಕ್ಷಿಸಿದಾಗಲೆಲ್ಲ ಸದಾಶಿವನಿಗೆ ಸಂತೋಷವಾಗುತ್ತಿತ್ತು, ಸಾವಿತ್ರಿಯ ವಿಷಯವಾಗಿ ಮೊದಲಿನಿಂದಲೂ ಅವನಲ್ಲಿದ್ದ ಅಭಿಮಾನ ಅಧಿಕವಾಗುತ್ತಿತ್ತು. ಒಂದೆರಡು ಸಲ ಮಮತೆಯಿಂದ ಅವಳ ಬೆನ್ನು ತಟ್ಟಿ, ಮೂಕವಾಗಿಯೆ ತನ್ನ ಮೆಚ್ಚುಗೆಯನ್ನು ವ್ಯಕ್ತಗೊಳಿಸಿದ್ದ. ಅದರಿಂದಾಗಿ ಸಾವಿತ್ರಿಯ ಉತ್ಸಾಹ ಸಾವಿರ ಪಾಲು ಅಧಿಕವಾಗಿತ್ತು. ಸದಾಶಿವನನ್ನು ಮೆಚ್ಚಿಸಲು ಯಾವ ಕೆಲಸವನ್ನೂ ಮಾಡಲು ಅವಳು ಸಿದ್ಧವಾಗಿದ್ದಳು. "ಇಂಥದನ್ನು ಮಾಡು" ಎಂದು ಅವನೆಂದೂ ಬಾಯಿ ಬಿಟ್ಟು ಹೇಳುತ್ತಿರಲಿಲ್ಲ. ಅವನು ಹಾಗೆ ಹೇಳುವುದರ ಆವಶ್ಯಕತೆಯೂ ಇರಲಿಲ್ಲ ಸಾವಿತ್ರಿಗೆ.

ಮೋಟಾರು ಸೈಕಲ್ ಏರಿ, ಹಿಂದಿನ ಸ್ಥಳದಲ್ಲಿ ಕೇಶವನನ್ನು ಕೂಡಿಸಿಕೊಂಡು ಹಳ್ಳಿ ಹಳ್ಳಿ ತಿರುಗುತ್ತಿದ್ದ ಸದಾಶಿವ. ಕಲ್ಲನಗೌಡ, ವನಮಾಲಾ, ಕಾಡಪ್ಪ, ಹಣಮಣ್ಣ ಮತ್ತಿತರರು ಬೈಸಿಕಲುಗಳ ಮೇಲೆ ಅವರನ್ನು ಹಿಂಬಾಲಿಸುತ್ತಿದ್ದರು. ಹೊತ್ತಿಗೆ ಸರಿಯಾಗಿ ಊಟ ಸಿಕ್ಕುತ್ತಿರಲಿಲ್ಲ. ಒಂದೊಂದು ದಿನ ನೆಲಗಡಲೆಕಾಯಿಯಿಂದಲೇ ಹಸಿವೆಯನ್ನು ಶಾಂತಗೊಳಿಸಬೇಕಾಗುತ್ತಿತ್ತು. ಇವರ ಅಭಿಮಾನಿಗಳೆಲ್ಲರೂ ಬಹಳ ಬಡವರಾದ ರೈತರು, ಕೂಲಿಗಾರರು. ಅವರು ಪ್ರೀತಿಯಿಂದ ಕೊಟ್ಟ ರೊಟ್ಟಿ ಖಾರವನ್ನೇ ಪ್ರೀತಿಯಿಂದ ತಿಂದು ಸಾರ್ವಜನಿಕ ದೇವಸ್ಥಾನಗಳಲ್ಲಿ ಇರುಳು ಕಳೆದು ಮತ್ತೆ ಪ್ರಯಾಣಕ್ಕೆ ತೊಡಗಬೇಕಾಗುತ್ತಿತ್ತು. ಕೆಲವೆಡೆಗಳಲ್ಲಿ ಇವರ ಸಭೆಗಳಿಗೆ ಜನರೇ ಸೇರುತ್ತಿರಲಿಲ್ಲ. ಕಾಂಗ್ರೆಸ್ ಪಕ್ಷಕ್ಕೋ, ದರಿದ್ರನಾರಾಯಣ ಪಕ್ಷಕ್ಕೋ ಅಂಟಿಕೊಂಡ ಹಳ್ಳಿಯ ಹಿರಿಯರಿಗಂಜಿ ಬಡ ರೈತರಾರೂ ಸಮಾಜವಾದಿ ಪಕ್ಷದ ಸಭೆಗೆ ಬರುತ್ತಿರ

ಲಿಲ್ಲ. ತಮಾಷೆ ನೋಡಲು ಬಂದು ನಿಂತ ನಾಲ್ಕೈದು ಜನ ನಿರುದ್ಯೋಗಿಗಳೆದುರಿಗೇ ನಾಲ್ಕೈದು ಮಾತು ಹೇಳಿ ಮುಂದಕ್ಕೆ ಪಯಣ ಬೆಳೆಸಬೇಕಾಗುತ್ತಿತ್ತು.

" ಹೀಗಾಗಬಹುದೆಂದು ನನಗೆ ಆಗಲೆ ಅನ್ನಿಸಿತ್ತು ಕೇಶವ್. ರೈತರಲ್ಲಿ ಎಷ್ಟೋ ಜನ ನಿಮ್ಮ ಪಕ್ಷದ ಹೆಸರನ್ನೂ ಕೇಳಿಲ್ಲ. ಇದಕ್ಕೆ ಕಾರಣ ಸಂಘಟನೆಯಿಲ್ಲದಿರುವದು."

" ನಾನಾದರೂ ಏನು ಮಾಡಲಿ ಸದಾಶಿವ? ಸಂಘಟನೆ ಮಾಡಲು ಕಾರ್ಯಕರ್ತರು ಬೇಕು. ಅವರೇ ಇಲ್ಲ."

" ಇಲ್ಲ ಅಂತ ಕೂತರೆ ಯಾವದೂ ಆಗುವದಿಲ್ಲ. ಪ್ರಯತ್ನ ಮಾಡಬೇಕು. ಸುಮ್ಮನೆ ಅಲ್ಲಿ ಇಲ್ಲಿ ತಿರುಗುವದಕ್ಕಿಂತ ಒಂದು ಕಡೆ ಕೂತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ಸಂಘಟನೆ ಮಾಡುವದೊಳ್ಳೆಯದು."

" ಮುಂದಿನ ಚುನಾವಣೆಯೊಳಗಾಗಿ ಮಾಡೋಣ," ಎಂದು ಹೇಳಿ ನಗುತ್ತಿದ್ದ ಕೇಶವ.

" ಚುನಾವಣೆಯನ್ನು ಬಿಟ್ಟರೆ ಬೇರೆ ವಿಚಾರವೇ ಇಲ್ಲ ನಿಮಗೆ. ಸೋಶಲಿಸ್ಟ್ ಪಾರ್ಟಿ ಹೀಗಾಗಲು ಇದೂ ಒಂದು ಕಾರಣ " ಎಂದು ವನಮಾಲಾ ಟೀಕಿಸುತ್ತಿದ್ದಳು.

ಕೇಶವ ಮತ್ತೆ ನಗುತ್ತಾ, " ಈ ಚುನಾವಣೆ ಮುಗಿಯುವ ತನಕ ಆದರೂ ನಮ್ಮನ್ನು ಟೀಕಿಸದೆ ಪುಣ್ಯ ಕಟ್ಟಿಕೋ ಅರುಣಾ ಶಿಷ್ಯಳೇ! " ಎನ್ನುತ್ತಿದ್ದ.

ಅವಳೂ ನಗುತ್ತ ಹೇಳುತ್ತಿದ್ದಳು : " ನಿಮ್ಮನ್ನೇ ಕಟ್ಟಿಕೊಂಡಿದ್ದೇನೆಂದ ಮೇಲೆ ನಿಮ್ಮ ಪಾರ್ಟಿ ಹ್ಯಾಗಿದ್ದರೂ ನಾನೂ ದುಡಿಯಲೇಬೇಕಲ್ಲ? ನಿಮಗಾದರೂ ಇವರ ಪಕ್ಷದ ಮೇಲೆ ನಂಬಿಕೆಯಿದೆಯೇನ್ರೀ ಸದಾಶಿವ ? "

" ಈಗ ಯಾಕೆ ಆ ಮಾತು? ನಾನು ಯಾವಾಗಲೂ ಬಡವರ ಮತ್ತು ಪ್ರಾಮಾಣಿಕರ ಪಕ್ಷದವ. ಈಗ ಚುನಾವಣೆಗೆ ನಿಂತಿರುವವರಲ್ಲೆಲ್ಲ

ಇವರೇ ವಾಸಿ ಅಂತ ಅನ್ನಿಸಿದ್ದರಿಂದ ನಿಮ್ಮ ಸಂಗಡ ಬಂದಿದ್ದೇನೆ. ದರಿದ್ರ ನಾರಾಯಣ ಪಕ್ಷದಿಂದಾಗಿ ನನಗಾದ ಅತೃಪ್ತಿಯನ್ನು ನಾನು ಮರೆಯ ಬೇಕಾಗಿದೆ."

ಹಾಗೆ ಮರೆಯಲು ಅವಕಾಶ ಮಾತ್ರ ಲಭಿಸಲಿಲ್ಲ. ಪ್ರತಿಯೊಂದು ಊರಿನಲ್ಲೂ ದರಿದ್ರನಾರಾಯಣ ಪಕ್ಷದ ಜನರು ಅಸಭ್ಯ ರೀತಿಯಿಂದ ವರ್ತಿಸಿ ಸದಾಶಿವನ ಅಸಮಾಧಾನವನ್ನು ಹೆಚ್ಚಿಸುತ್ತಿದ್ದರು. ಸಭೆ ಸೇರಿಸುವುದಕ್ಕೂ ಸಹ ಎಷ್ಟೋ ಕಡೆ ಆತಂಕವಾಗುತ್ತಿತ್ತು. ಕಾಂಗ್ರೆಸ್ಸಿಗರು ಸುಮ್ಮನಿದ್ದರೂ ದರಿದ್ರನಾರಾಯಣ ಪಕ್ಷದವರು ಸುಮ್ಮನಿರದೆ ಕೇಶವನ ಗುಂಪಿಗೆ ಕಿರುಕುಳ ಕೊಡುತ್ತಿದ್ದರು. ಭಾಷಣ ನಡೆದಿದ್ದಾಗ ಗಲಭೆ ಮಾಡುವದು, ಕೋಳಿ ಮೊಟ್ಟೆ, ಕಲ್ಲು ಎಸೆಯುವುದು, ಅಶ್ಲೀಲವಾಗಿ ಬಯ್ಯುವುದು. ಎಲ್ಲವನ್ನೂ ಸಹಿಸಿಕೊಳ್ಳದೆ ಅನ್ಯ ವಿಧಿಯಿರಲಿಲ್ಲ. ಪೋಲೀಸಿನವರಿಗೆ ದೂರು ಕೊಡುವು ದರಿಂದ ಏನೂ ಉಪಯೋಗವಾಗುತ್ತಿರಲಿಲ್ಲ. ಗಲಭೆಗೆ ಪ್ರತಿಯಾಗಿ ಗಲಭೆ, ಕಲ್ಲಿಗೆ ಪ್ರತಿಯಾಗಿ ಕಲ್ಲು, ಬಯ್ಗಳಿಗೆ ಪ್ರತಿಯಾಗಿ ಬಯ್ಗಳನ್ನೂ ಅವಲಂಬಿ ಸುವಂತಿರಲಿಲ್ಲ. ನೂರಾರು ಮಂದಿ ಪುಂಡರೆದುರಿಗೆ ಈ ಹತ್ತು ಜನರ ಆಟ ನಡೆಯುವಂತಿರಲಿಲ್ಲ. ಅಂತೆಯೆ ಎಲ್ಲ ಅವಹೇಳನವನ್ನೂ ಸಹಿಸಿಕೊಂಡು ಶಾಂತವಾಗಿಯೆ ಹೊರಡಬೇಕಾಗುತ್ತಿತ್ತು. ಅನ್ಯಾಯಗಳನ್ನು ಸಹಿಸುವ ಅಭ್ಯಾಸವಿಲ್ಲದ ಸದಾಶಿವನಿಗೆ ರೊಚ್ಚು ಕೆರಳುತ್ತಿದ್ದಿತಾದರೂ ಈಚೆಗೆ ಅದನ್ನು ತಡೆ ಹಿಡಿಯುವ ಪ್ರಯತ್ನ ನಡಸಿ ಸಾಕಷ್ಟು ಯಶಸ್ವಿಯಾಗಿದ್ದ. "ಚುನಾವ ಣೆಯಕಾಳಗದಲ್ಲಿ ಭಾಗವಹಿಸಿದರೆ ಎಂಥ ಶೀಘ್ರಕೋಪಿಯೂ ಸಂಯಮಿ ಯಾಗುತ್ತಾನೆ," ಎಂದು ತನ್ನಲ್ಲಿಯೆ ಹೇಳಿಕೊಂಡು ನಕ್ಕುಬಿಡುತ್ತಿದ್ದ ಸದಾಶಿವ. ಅವನ ಗಾಂಭೀರ್ಯವನ್ನು ಗಮನಿಸಿದಾಗಲೆಲ್ಲ ಕಲ್ಲನಗೌಡನಿಗೆ ಮೋಜೆನ್ನಿಸದಿರ ಲಿಲ್ಲ. "ಸದಾಶಿವಣ್ಣ ಸುಧಾರಿಸುತ್ತಿದ್ದಾನೆ. ಚುನಾವಣೆ ಮುಗಿಯುವದ ರೊಳಗಾಗಿ ಇವನೂ ತನ್ನ ತಂದೆಯ ಹಾಗೇ ಆಗಬಹುದು," ಎಂದು ಅವನು ತನ್ನಲ್ಲಿಯೆ ಹೇಳಿಕೊಳ್ಳುತ್ತಿದ್ದ. ಸದಾಶಿವನೊಬ್ಬನನ್ನೆ ಎಲ್ಲಿಗೂ ಬಿಡದೆ ನೆರಳಿನಂತೆ ಅವನನ್ನು ಹಿಂಬಾಲಿಸುತ್ತ ಅಂಗರಕ್ಷಕನಂತೆ ಎಚ್ಚರಿಕೆ ವಹಿಸು

ತ್ತಿದ್ದ ಕಲ್ಲನಗೌಡ. ಅವನ ಜತೆಯಿದ್ದುದರಿಂದ ಕೇಶವನಿಗೂ ತುಂಬಾ ಧೈರ್ಯವಿರುತ್ತಿತ್ತು.

ಸಾವಿತ್ರಿಗೆ ಮಾತ್ರ ಧೈರ್ಯವುಳಿಯಲಿಲ್ಲ. ಸುಂದರಾಬಾಯಿಯ ಮಾತು ಕೇಳಿದಂದಿನಿಂದ ಅವಳು ಸದಾಶಿವನ ಸುರಕ್ಷಿತತೆಯ ಬಗ್ಗೆ ಹಗಲಿರುಳೂ ಚಿಂತಿಸತೊಡಗಿದಳು.

" ಸಾವಿತ್ರಿಗೆ ಸಮಾಧಾನ ಹೇಳಿರಿ ಸದಾಶಿವ. ಅವಳು ಬಹಳ ಗಾಬರಿ ಯಾಗಿದ್ದಾಳೆ " ಎಂದು ಈಶ್ವರನೊಮ್ಮೆ ಮಾತು ತೆಗೆದಾಗ ಸದಾಶಿವ ಮುಗು ಳ್ನಗೆ ನಕ್ಕು ಹೇಳಿದ :

" ಅವಳೊಬ್ಬಳು ಹುಚ್ಚಿ. ಸುಮ್ಮನೆ ಏನೇನೊ ಕಲ್ಪನೆ ಮಾಡಿಕೊಂಡು ಅಂಜುತ್ತಾಳೆ. "

" ಕಲ್ಪನೆಯಲ್ಲ ಸದಾಶಿವ. ನಾನೂ ಕೇಳಿದ್ದೇನೆ. ಕೇಶವನಿಗಿಂತ ಹೆಚ್ಚಾಗಿ ನಿಮ್ಮ ಮೇಲೆ ಸಿಟ್ಟಿದೆಯಂತೆ ಎಷ್ಟೋ ಮಂದಿಗೆ. "

ಸದಾಶಿವ ಆ ಮಾತನ್ನು ಅಲ್ಲಗಳೆಯುವಂತಿರಲಿಲ್ಲ. ಈರ್ಷೆಗೊಳ ಗಾದ ಒರಟು ಜನರು ಹಿಂಸೆಗೂ ಹೇಸುವವರಲ್ಲವೆನ್ನುವುದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಅಂಥವರ ಬಗ್ಗೆ ಅವನಿಗೆ ಕೊಂಚವೂ ಅಂಜಿಕೆ ಯಿರಲಿಲ್ಲ. ಗಂಡಾಂತರಗಳನ್ನೆದುರಿಸುವುದೆಂದರೆ ಎಂದಿಗೂ ಅವನಿಗೂ ಉತ್ಸಾಹವೆ.

ಮತದಾನದ ದಿನವೂ ಬಂತು.

ಆ ದಿನವಂತೂ ತನ್ನನ್ನು ತಾನೆ ಮರೆತು ದೈತ್ಯನಂತೆ ದುಡಿದ ಸದಾಶಿವ. ಸುತ್ತುಮುತ್ತಲಿನ ಐವತ್ತು ಹಳ್ಳಿಗಳಲ್ಲೆಲ್ಲ ಅವನ ಮೋಟರು ಸೈಕಲಿನ ಸದ್ದು ದುಮುದುಮಿಸಿತು. ಮತದಾರರನ್ನು ಮನೆಗಳಿಂದ ಹೊರಡಿಸುವುದು, ಅವ ರನ್ನು ಮತಗಟ್ಟೆಗಳಿಗೆ ಕರೆದೊಯ್ದು ಬಿಡುವುದು, ಅನುಯಾಯಿಗಳಿಗೆ ಸೂಚ ನೆಗಳನ್ನಿತ್ತು ಮುಂದಿನ ಹಳ್ಳಿಗೆ ಧಾವಿಸುವುದು. ಆ ಚಿಕ್ಕ ಗುಂಪಿನಲ್ಲಿದ್ದ ಹತ್ತು ಜನ ಕಾರ್ಯಕರ್ತರು ಒಂದು ನಿಮಿಷವೂ ವಿರಮಿಸದೆ ಊರೂರು ಸುತ್ತಿ ದರು. ಅವರ ದುಡಿತವೆಲ್ಲ ವ್ಯರ್ಥವಾಗುವ ಚಿಹ್ನೆಗಳು ಅದೇ ದಿನವೆ ಕಾಣಿಸ

ತೊಡಗಿದ್ದುವು. ಕಾಂಗ್ರೆಸ್ಸಿನ ಎತ್ತುಗಳನ್ನು ಕಂಡು ಅಜ್ಞ ಮತದಾರರು ಕಾಂಗ್ರೆಸ್ ಬಿಡಾರದ ಕಡೆಗೇ ತಿರುಗಿ ನಂಬರು ಚೀಟಿಗಳನ್ನು ಅಲ್ಲಿಯೆ ಪಡೆದುಕೊಂಡು, ಮತಗಟ್ಟೆಗಳಿಗೆ ಹೋಗಿ, ಬಸವಣ್ಣನ ಚಿತ್ರವಿದ್ದ ಪೆಟ್ಟಿಗೆಗೆ ನಮಸ್ಕರಿಸಿ ಅದರಲ್ಲಿ ಮತ ಹಾಕಿ ಬರುತ್ತಿದ್ದರು. ಆ ಚಿತ್ರಕ್ಕೆ ವಿಭೂತಿ ಹಚ್ಚಿ, ಕುಂಕುಮವಿಟ್ಟು ಮತ ಹಾಕುವವರಿಗೂ ಕೊರತೆಯಿರಲಿಲ್ಲ. “ನಮ್ಮನ್ನ ಜೋಪಾನ ಮಾಡುವವ ಬಸವಣ್ಣ. ಅವನೇ ಬೇಕು ನಮಗೆ” ಎಂಬುದಷ್ಟೆ ಅವರಿಗೆ ಗೊತ್ತು. ದರಿದ್ರನಾರಾಯಣ ಪಕ್ಷದ ಗುರುತಾದ ಕಸದ ಬುಟ್ಟಿಯಾಗಲಿ, ಸಮಾಜವಾದಿ ಪಕ್ಷದ ಗಿಡವಾಗಲಿ, ರೈತರ ಗಮನ ಸೆಳೆಯಲಿಲ್ಲ. ಕಾಂಗ್ರೆಸ್ ಬಿಡಾರದಲ್ಲಿ ಲಾಡು, ಖಾರಾಸೇವು ತಿಂದು, ಚಹ ಕುಡಿದು, ಬೀಡಿ ಸೇದಿ, ‘ಬಸವಣ್ಣಸಿಗೆ’ ಮತ ಕೊಟ್ಟು ಮನೆಗೆ ಹೋದವರೇ ಬಹಳ ಮಂದಿ. ದರಿದ್ರನಾರಾಯಣ ಪಕ್ಷದ ಬಿಡಾರದಲ್ಲಿ ತಿಂಡಿ ತಿಂದು, ಅವರಿಂದ ಹಣವನ್ನು ತೆಗೆದುಕೊಂಡು, ಕಸದ ಬುಟ್ಟಿಗೇ ಮತ ಹಾಕುವುದಾಗಿ ಹೇಳಿ, ಮತಗಟ್ಟೆಯೊಳಗೆ ಹೋದ ಬಳಿಕ ಬಸವಣ್ಣಸಿಗೆ ಕೈಮುಗಿದು ಅವನಿಗೇ ಮತ ಪತ್ರ ಅರ್ಪಿಸಿ, “ಹ್ಯಾಂಗ ಕೈಕೊಟ್ಟೆವು ಕಸದ ಬುಟ್ಟಿಯವರಿಗೆ!” ಎಂದು ಮನಸ್ಸಿನಲ್ಲಿಯೆ ನಗುತ್ತಾ ಮನೆಯ ಹಾದಿ ಹಿಡಿದವರೂ ಬಹಳ ಮಂದಿ.

ಸದಾಶಿವನೂ ಅವನ ಗುಂಪಿನವರೂ ಹಳ್ಳಿಗಳನ್ನು ಸುತ್ತಿ, ಮತಗಟ್ಟೆಗಳಿಗೆ ಕರೆದುಕೊಂಡು ಬಂದ ಮತದಾರರಿಗೆ ಲಂಚ ಕೊಟ್ಟು ಅವರ ಮತಗಳನ್ನು ದೊರಕಿಸಲು ದರಿದ್ರನಾರಾಯಣ ಪಕ್ಷದ ಏಜಂಟರು ಯತ್ನಿಸಿದಾಗ ರಾಮಾಪುರದಲ್ಲಿ ಉಭಯ ಪಕ್ಷಗಳವರಲ್ಲಿ ಜಗಳವೆದ್ದು ಕೈಗೆ ಕೈ ಹತ್ತುವ ಪ್ರಸಂಗ ಬಂತು. ಹೆಂಡ ಕುಡಿದು ಮತ್ತರಾಗಿದ್ದ ಪುಂಡರು ಕೆಲವರು ಸದಾಶಿವನ ಮೋಟರು ಸೈಕಲ್ ತಡೆದು ನಿಲ್ಲಿಸಿ ಅವನನ್ನು ಹೊಡೆಯಲೂ ಯತ್ನಿಸಿದರು. ಜನ ನೆರೆಯಿತು. ಆ ವಾರ್ತೆ ಕಿವಿಗೆ ಬಿದ್ದೊಡನೆ ಶಿವಲಿಂಗಯ್ಯನವರು ಓಡಿ ಬಂದು ಪುಂಡರನ್ನು ಗದರಿಸಿಕೊಂಡು ಅನಾಹುತವನ್ನು ತಪ್ಪಿಸಿದರು.

“ಇವತ್ತೇನೋ ಪಾರಾದನಿವ. ಇನ್ನೊಮ್ಮೆ ಕೈಗೆ ಸಿಗಲಿ, ಎಲುಬು

ಕೂಡಾ ಉಳಿಯಗೊಡುವದಿಲ್ಲ" ಎಂದು ಹೇಳಿಕೊಳ್ಳುತ್ತಾ ಪುಂಡರು ಹೊರಟು ಹೋದರು.

ಸದಾಶಿವನ ಮೋಟರು ಸೈಕಲ್ಲು ಮಲ್ಲಾಪುರದತ್ತ ಹೊರಟಿತು.

ಮತಗಟ್ಟೆಗಳನ್ನು ಸುತ್ತುತ್ತಿದ್ದ ಎಡ್ವರ್ಡನ ಮೋಟರು ಹಾದಿಯಲ್ಲಿ ಎದುರಾಯಿತು. ಸಮಾಜವಾದಿ ಪಕ್ಷಕ್ಕೊದಗಿದ ಗತಿಯೇ ಪುರೋಗಾಮಿ ಪಕ್ಷಕ್ಕೂ ಒದಗಿತ್ತು.

"ಹೇಗಾಗಿದೆ ಸದಾಶಿವ? ಆಸೆಯಿದೆಯೊ?" ಉತ್ಸಾಹದ ಧ್ವನಿಯಲ್ಲಿಯೆ ಕೇಳಿದ ಎಡ್ವರ್ಡ್.

"ಇದೆ, ಮುಂದಿನ ಚುನಾವಣೆಗೆ!" ಎಂದು ಹೇಳಿದವನೆ ಸದಾಶಿವ ಅಲ್ಲಿ ನಿಲ್ಲದೆ ಮೋಟರನ್ನು ಭೀಕರ ವೇಗದಿಂದ ಓಡಿಸತೊಡಗಿದ.

## ೨೨

ಸಾವಿತ್ರಿ ಕಾದು ಕುಳಿತಿದ್ದಳು.

ಮಹಾದೇವಪ್ಪನೂ ಕಾದು ಕುಳಿತಿದ್ದ, ಈಶ್ವರನೂ ಕಾದು ಕುಳಿತಿದ್ದ.

ಚುನಾವಣೆಯ ಫಲಿತಾಂಶವನ್ನು ತಿಳಿದುಕೊಂಡು ಬರಲೆಂದು ಬೆಳಿಗ್ಗೆ ಮೋಟರು ಸೈಕಲ್ ಬಿಟ್ಟುಕೊಂಡು ಉಗ್ರಪುರಕ್ಕೆ ಹೋಗಿದ್ದ ಸದಾಶಿವ ಸಂಜೆಯಾದರೂ ಹಿಂದಿರುಗಿ ಬರಲಿಲ್ಲ.

ಅಷ್ಟು ದೂರ ಅವನು ಹೋಗಬೇಕಾದ ಅಗತ್ಯವೇನೂ ಇರಲಿಲ್ಲ. ಮತದಾನ ನಡೆದ ದಿನವೆ ಸ್ಪಷ್ಟವಾಗಿತ್ತು ಫಲಿತಾಂಶದ ಮುನ್ಸೂಚನೆ—ಕೇಶವ ವಿಜಯಿಯಾಗಬಹುದೆಂಬ ಆಸೆ ಯಾರಿಗೂ ಉಳಿದಿರಲಿಲ್ಲ. ಬೇರೆ ಬೇರೆ ಮತದಾರ ಕ್ಷೇತ್ರಗಳ ಫಲಿತಾಂಶ ಪ್ರಕಟಗೊಂಡು, ಎಲ್ಲ ಕಡೆಗೂ ಕಾಂಗ್ರೆಸ್ ಹುರಿಯಾಳುಗಳೇ ಆರಿಸಿ ಬಂದ ಹಾಗೆ ಉಗ್ರಪುರ ಮತದಾರ ಕ್ಷೇತ್ರದ ಫಲಿತಾಂಶವೂ ತಿಳಿದಂತೆಯೆ ಆಗಿತ್ತು. ವಿಶಾಲಪ್ಪ, ಸೋಮಶೇಖರಪ್ಪ, ಬಸಪ್ಪ, ಇನಾಂದಾರ್ ಶಿವಪ್ಪ, ವೀರಣ್ಣ, ಶಾಂತಣ್ಣ ಎಲ್ಲರೂ ಸೋತು ಹೋಗಿದ್ದರು. ಕಾಂಗ್ರೆಸ್ಸೇತರ ವರ್ತುಲಗಳಲ್ಲೆಲ್ಲ ವಿಷಾದದ ವಾತಾವರಣವುತ್ಪನ್ನವಾಗಿತ್ತು.

ಉಗ್ರಪುರ ಕ್ಷೇತ್ರದ ಫಲಿತಾಂಶವೂ ಮಧ್ಯಾಹ್ನವೆ ಗೊತ್ತಾಗಿಹೋಗಿತ್ತು —ರೈಲಿಗೆ ಬಂದ ಜನರ ಮೂಲಕ. ಕೇಶವ, ಮಹಾಲಿಂಗಪ್ಪ, ಮತ್ತಿತರ ಹುರಿಯಾಳುಗಳನ್ನು ಸೋಲಿಸಿ ವಿಜಯಿಯಾಗಿದ್ದ ವೀರಭದ್ರಸೆಟ್ಟಿ.

ಕೇಶವನ ಅಪಜಯವನ್ನು ನಿರೀಕ್ಷಿಸಿಕೊಂಡಿದ್ದ ಈಶ್ವರ, ಸಾವಿತ್ರಿ ಮೊದಲಾದವರಿಗೆ ಆ ವಾರ್ತೆಯಿಂದಾಗಿ ಅಂಥ ವ್ಯಸನವೇನೂ ಉಂಟಾಗಿರಲಿಲ್ಲ. ಸಂಜೆಯಾದರೂ ಸದಾಶಿವ ಮರಳಿ ಬರಲಿಲ್ಲವೆಂದು ಅವರು ಚಿಂತಾಕ್ರಾಂತ

ರಾಗಿದ್ದರು. ಸಂಶಯ, ಭಯ. ಮೋಟರು ಸೈಕಲ್ ಮೇಲೆ ಹೋಗದೆ ರೈಲಿನಲ್ಲಿ ಹೋಗಿ ಬರಲು ಈಶ್ವರ ಸೂಚಿಸಿದ್ದನಾದರೂ ಸದಾಶಿವ ಅದಕ್ಕೆ ಕಿವಿಗೊಡದೆ ಕಾಡಪ್ಪನನ್ನು ಹಿಂದೆ ಕೂಡಿಸಿಕೊಂಡು ಹೊರಟುಹೋಗಿದ್ದ.

" ಇಷ್ಟೊತ್ತು ಏನು ಮಾಡುತ್ತಿದ್ದಾನು ? " ಎಂದ ಮಹಾದೇವಪ್ಪ.

" ಪರಿಣಾಮ ಮಧ್ಯಾಹ್ನವೇ ಹೊರಬಿತ್ತಲ್ಲ. ಕೇಶವನೂ ಇವನೂ ಕೂಡಿ ಕಳ್ಳೀಕಾಯಿಗೆ ಹೋದರೋ ಏನೊ " ಎಂದ ಈಶ್ವರ.

" ಮೋಟರು ಸೈಕಲಿದೆಯಲ್ಲ. ಅದನ್ನು ಬಿಟ್ಟು ಹ್ಯಾಗೆ ಹೋಗುತ್ತಾರೆ ?" ಎಂದಳು ಸಾವಿತ್ರಿ.

" ಕಲ್ಲನಗೌಡನಾದರೂ ಅವನ ಸಂಗಡ ಇದ್ದರೊಳ್ಳೆಯದಾಗುತಿತ್ತು. ಅವನು ಜಡ್ಡಾಗಿ ಮಲಗಿದ.... "

ಹೊರಗಡೆ ಬೀದಿಯಲ್ಲಿ ಹಳ್ಳಿಯ ವಾದ್ಯಗಳ ಗರ್ಜನೆಗಾರಂಭವಾಗಿತ್ತು. ಕಾಂಗ್ರೆಸ್ ಹುರಿಯಾಳುವಿನ ವಿಜಯದ ನಿಮಿತ್ತವಾಗಿ ಎತ್ತುಗಳ ಮೆರವಣಿಗೆ ಹೊರಟಿತ್ತು. ಅಲಂಕರಿಸಿದ ಹೋರಿಗಳಿಗೆ ಸೆರೆ ಕುಡಿಸಿ, ತಾವೂ ಸೆರೆ ಕುಡಿದು, ಮೈಗೆ ಗುಲಾಲು ಬಳಿದುಕೊಂಡು ಬೀದಿಯಲ್ಲಿ ಚುರಮುರಿ ಹಾರಿಸಿ ಕುಣಿಯುತ್ತಾ ಕೇಕೆ ಹಾಕುತ್ತಾ ಹೊರಟಿದ್ದರು ಕಾಂಗ್ರೆಸ್ ಪಕ್ಷಪಾತಿ ಜನರು. ಹಳ್ಳಿಯನ್ನೆಲ್ಲ ನಡುಗಿಸುವಂಥ ಧ್ವನಿಯಲ್ಲಿ ಕಾಂಗ್ರೆಸ್ಸಿನ ಜಯಜಯಕಾರ ನಡೆದಿತ್ತು.

" ಎಲ್ಲಾ ಊರುಗಳಲ್ಲೂ ಹೀಗೇ ಗದ್ದಲ ನಡೆದಿರಬಹುದಲ್ಲ ? " ಎಂದಳು ಸಾವಿತ್ರಿ.

" ಇಂಥಾ ಜನರು ಎಲ್ಲಾ ಕಡೆಗೂ ಇರುವವರೇ. ಗದ್ದಲ ನಡೆಯುವದೇ " ಎಂದ ಈಶ್ವರ.

" ಎಲ್ಲಿದ್ದೀರ್‍ರ್ಯೋ ದರಿದ್ರನಾರಾಯಣ ಪಕ್ಷದ ಮಂದಿ ? ಬರ್‍ರ್ರ್ಯೋ ಹೊರಗೆ ! " ಬೀದಿಯಲ್ಲಿ ಕುಡುಕರು ಕೂಗುತ್ತಿದ್ದರು.

" ಗಾಂಧೀ ಮಾರಾಜಕೀ ಜೈ ! ಬರ್‍ರ್ರ್ಯೋ ಮನೀ ಬಿಟ್ಟು ನಿಮ್ಮ ಮಾರೀ ಆದ್ರೂ ನೋಡೂಣು ! "

ಎರಡೂ ಕೈಗಳಿಂದ ಕಿವಿಗಳನ್ನು ಮುಚ್ಚಿಕೊಂಡು ಮಹಾದೇವಪ್ಪ ತಲೆ ತಗ್ಗಿಸಿ ಕುಳಿತುಕೊಂಡ.

ಮೆರವಣಿಗೆ ಮುಂದೆ ಸಾಗುತ್ತಿತ್ತು. ಚೀಲಗಳಿಂದ ಚುರುಮುರಿಯನ್ನು ತೆಗೆದು ' ಹೋ ' ಎಂದು ಕೇಕೆ ಹಾಕುತ್ತಾ ಎತ್ತುಗಳ ಮೇಲೆ ಹಾರಿಸುತ್ತಿದ್ದರು. ಅರ್ಧ ಗಂಟೆಯಷ್ಟು ಅವಧಿಯಲ್ಲಿ ನಾಲ್ಕು ಚೀಲಗಳು ಖಾಲಿಯಾಗಿದ್ದುವು.

ಬಸವಣ್ಣನ ದೇವಾಲಯದಲ್ಲಿ ಅಂದು ವಿಶೇಷ ಉತ್ಸವ. ಹಳ್ಳಿಯಲ್ಲೆಲ್ಲ ತಳಿರು ತೋರಣಗಳ ಅಲಂಕಾರ. ಡಪ್ಪು, ಢಕ್ಕೆ, ಢೋಲು ಮೊದಲಾದುವೆಲ್ಲ ಅರ್ಭಟಿಸುತ್ತಿದ್ದುವು. ಕೊಂಬು ಕಹಳೆ ಮೊಳಗುತ್ತಿದ್ದುವು. ಮದ್ದಿನ ಬಾಣಗಳೂ ಹಾರುತ್ತಿದ್ದುವು.

ಸದಾಶಿವನ ಮನೆಯಲ್ಲಿ ಮಾತ್ರ ಮೂರು ಎದೆಗಳು ವೇಗವಾಗಿ ಬಡಿದು ಕೊಳ್ಳುತ್ತಿದ್ದುವು ಕತ್ತಲೆ ಹೆಚ್ಚಿದ ಹಾಗೆಲ್ಲ ಕಳವಳವೂ ಹೆಚ್ಚುತ್ತಿತ್ತು. ನಿಮಿಷ ಗಳು ವರ್ಷಗಳಾಗಿದ್ದುವು.

ಆ ಕಾತರದ ಸ್ಥಿತಿಯಲ್ಲಿ ಹೆಚ್ಚು ಹೊತ್ತು ಕುಳಿತುಕೊಳ್ಳಲಾರದೆ ಎದ್ದು ನಿಂತ ಈಶ್ವರ.

" ರಾಮಾಪುರದ ತನಕ ಹೋಗಿ ನೋಡಿ ಬರಲೇ ಸಾವಿತ್ರೀ ? "

ಬೇಡವೆಂದು ಅವಳು ಹೇಳಲಿಲ್ಲ

" ನಾನೂ ಬರಲೇನು ಈಶ್ವರಣ್ಣ ? "

" ಹುಚ್ಚೀ. ಇಂಥ ಕತ್ತಲಲ್ಲಿ ನೀನೆಲ್ಲಿ ಬರುತ್ತೀ? ಯಾರನ್ನಾದರೂ ಕರೆದುಕೊಂಡು ನಾನೇ ಹೋಗಿ ಬರ್ತೇನೆ. "

ಲಾಟೀನು ಹೊತ್ತಿಸಿಕೊಂಡು ಮಹಾದೇವಪ್ಪನೂ ಹೊರಟು ನಿಂತ. ಹಣಮಣ್ಣನನ್ನೂ ಇನ್ನೊಬ್ಬ ರೈತನನ್ನೂ ಜತೆ ಮಾಡಿಕೊಂಡು ಅವರು ರಾಮಾಪುರದ ಹಾದಿ ಹಿಡಿದು ಹೊರಟರು.

ರಾಮಾಪುರಕ್ಕೆ ಹೋಗುವವರು ನವಲಾಪುರದಲ್ಲಿ ಹಾದು ಹೋಗ ಬೇಕಾಗುವುದು. ಅವರು ನವಲಾಪುರದ ಹತ್ತಿರ ಬರುತ್ತಿದ್ದ ಹಾಗೆ ಎದುರಿ ನಿಂದ ನಾಲ್ಕೈದು ಜನರು ಓಡುತ್ತ ಬರುವುದು ಕಾಣಿಸಿತು. ಲಾಟೀನು ಕಂಡು ಅವರು ನಿಂತುಕೊಂಡರು.

" ಯಾರು ? ಚೆನ್ನಬಸಪ್ಪ ? " ಎಂದ ಈಶ್ವರ.

" ಏನಾಯಿತು ಚೆನ್ನಬಸಪ್ಪ ? " ಉಸಿರು ಬಿಗಿ ಹಿಡಿದು ಕೇಳಿದ ಮಹಾದೇವಪ್ಪ.

" ಘಾತ ಆಯ್ತು ಮಹಾದೇವಣ್ಣ. ನಿಮ್ಮನ್ನ ಕರಕೊಂಡು ಹೋಗುವದಕ್ಕೇ ಬಂದಿದ್ದೆ ನಾನೂ. "

" ಏನಾಯಿತು ಚೆನ್ನಬಸಪ್ಪ ? "

" ಯಾವ ಬಾಯಿಂದ ಹೇಳಲಿ ಈಶ್ವರಣ್ಣ ? " ಎಂದವನೆ ಚೆನ್ನಬಸಪ್ಪ ಹಾದಿಯಲ್ಲಿಯೆ ಕುಸಿದು ಕುಳಿತ. ಅವನ ಕಣ್ಣುಗಳಿಂದ ದಳದಳನೆ ಸುರಿಯ ತೊಡಗಿತು ಕಣ್ಣೀರು.

ಅವನ ಜತೆಗೆ ಬಂದವರಲ್ಲೊಬ್ಬ ಮಾತನಾಡಿದ :

" ಇಲ್ಲಿ ಕುಂಡ್ರುವದಕ್ಕ ವ್ಯಾಳೆ ಇಲ್ಲ. ಲಗೂ ಲಗೂ ಓಡಿ ರಾಮಾಪುರಕ್ಕ ಹೋಗಾಕಬೇಕು. ಸದಾಶಿವಣ್ಣನ್ನ ಕುಡಗೋಲಿನಿಂದ ಕಡಿದಿದ್ದಾರ. ಇನ್ನೂ ಜೀವ ಐತಂತೆ. ಏಳಿರಿ, ಏಳಿರಿ. "

ಕಂಬನಿಗಳನ್ನೊರೆಸಿಕೊಂಡು ಚೆನ್ನಬಸಪ್ಪ ಎದ್ದು ಓಡತೊಡಗಿದ. ಉಳಿದವರೂ ಅವನನ್ನು ಹಿಂಬಾಲಿಸಿಕೊಂಡು ನಡೆದರು.

ಮಹಾದೇವಪ್ಪ, ಚೆನ್ನಬಸಪ್ಪರನ್ನು ಕರೆದು ತರಲು ಶಿವಲಿಂಗಯ್ಯನವರು ಕಳಿಸಿದ್ದ ಆಳಿನ ಮೂಲಕ ವಿವರಗಳೆಲ್ಲ ತಿಳಿದುಬಂದುವು.

ಸೂರ್ಯಾಸ್ತ ಸಮಯದಲ್ಲಿ ಸದಾಶಿವನೂ ಕಾಡಪ್ಪನೂ ಮೋಟರು ಸೈಕಲ್ ಮೇಲೆ ಬರುತ್ತಿದ್ದಾಗ ರಾಮಾಪುರದಿಂದ ಮೂರು ಮೈಲು ದೂರದಲ್ಲಿರುವ ಹಳ್ಳದ ಬಳಿ ಐದು ಜನ ಕುಡುಕರು ಅವರನ್ನು ತಡೆದು ಕುಡಗೋಲುಗಳಿಂದ ಹೊಡೆದಿದ್ದರು. ಮೋಟರು ಸೈಕಲನ್ನು ಸುಟ್ಟುಬಿಟ್ಟಿದ್ದರು. ಕಾಡಪ್ಪ ಸದಾಶಿವರ ಬಳಿ ಶಸ್ತ್ರಗಳಿರಲಿಲ್ಲವಾದುದರಿಂದ ಆತ್ಮಸಂರಕ್ಷಣೆ ಮಾಡಿಕೊಳ್ಳುವುದು ಅಶಕ್ಯವಾಗಿತ್ತು. ಅವರಿಬ್ಬರನ್ನೂ ಯಥೇಚ್ಛವಾಗಿ ಗಾಯಗೊಳಿಸಿ ಪುಂಡರು ಓಡಿಹೋಗಿದ್ದರು.

" ಜೀವ ಉಳೀಬಹುದೇನಪ್ಪ ? " ಎಂದು ಕೇಳಿದ ಈಶ್ವರ.

" ಈಗಿಂದೀಗ ಸಿವಿಲ್ ಆಸ್ಪಿಟೇಲಿಗೊಯ್ದರೆ ಉಳಿದರೂ ಉಳೀಬಹುದಂ ಣರೆ ಗೌಡರು. ಇನ್ನೂ ಪಂಚನಾಮಾ ಆಗಬೇಕಲ್ಲರಿ ? "

" ಹಿಂಗೇನಾದರೂ ಆದೀತಂತ ಆವಾಗಲೆ ಅನಿಸಿತ್ತು ನನಗೆ. ನಮ್ಮ ಮಂದಿ ಬಹಳ ಹುಂಬರು. ಈ ಸೋಶಲಿಸ್ಟ್ ಪಾರ್ಟಿಯ ಸಂಗತಿ ಬ್ಯಾಡಾ ಅಂದರೆ ನೀವು ಕೇಳಲಿಲ್ಲ " ಎಂದ ಚೆನ್ನಬಸಪ್ಪ.

ಆ ದುಷ್ಕೃತ್ಯವೆಸಗಿದ ಪುಂಡರಾರೆಂದು ಕೇಳಬೇಕಾಗಿಯೆ ಇರಲಿಲ್ಲ. ಮತದಾನ ದಿನದಂದು ರಾಮಾಪುರದಲ್ಲಾದ ಘರ್ಷಣೆಯ ಸಮಾಚಾರ ತಿಳಿದಾಗಲೆ ಈಶ್ವರನ ಮನಸ್ಸಿನಲ್ಲಿ ದುಗುಡವುತ್ಪನ್ನವಾಗಿತ್ತು.

" ಬೆಳಗಿನಾಗ ಸದಾಶಿವಣ್ಣ ಉಗ್ರಪುರಕ್ಕ ಹೊಂಟದ್ದು ನೋಡಿಕೊಂಡು ಆ ಜಾಗದಾಗ ಹೊಂಚು ಹಾಕಿ ಕಾಯುತ್ತ ಕುಂತಿರಬೇಕು ಅವರು. ಮಾಲಿಂಗಪ್ಪ ಸೋತದ್ದು ಗೊತ್ತಾಗಿ ತಲೆ ಕೆಟ್ಟು ಇಂಥಾ ಹೇಸಿ ಕೆಲಸಕ್ಕ ಕೈಹಾಕಿರಬೇಕು " ಎಂದ, ರಾಮಾಪುರದ ರೈತ.

" ಅವರು ಹೀಗೆ ಮಾಡಬಹುದು ಅಂತ ನಿಮಗಾರಿಗೂ ಗೊತ್ತಿರಲಿಲ್ಲವೇನು ? "

" ಹ್ಯಾಂಗ ಗೊತ್ತಾಗಬೇಕ್ರೀ ? ನಮ್ಮ ಹೊಲಮನಿ ಕೆಲಸs ನಮಗ ಆಗುವದಿಲ್ಲ. ಈ ಕುಡುಕರ ಉಸಾಬರಿಗೆ ಯಾರು ಹೋಗುತಾರು ? ಅಣ್ಣಾಗೋಳಿಗೂ ಗೊತ್ತಾಗಲಿಲ್ಲ. ಯಾರ ಮಾತೂ ಕೇಳುವ ಮಂದಿ ಅಲ್ಲ ಅದು. ಸ್ವತಃ ಮಾಲಿಂಗಪ್ಪನೇ ಈ ಕುಡುಕರಿಗೆ ರೊಕ್ಕ ಕೊಟ್ಟಿದ್ದಾನಂತೆ.... "

" ಲಗೂ ಲಗೂ ನಡೀರಿ " ಎಂದು ಅವಸರ ಮಾಡಿದ ಚೆನ್ನಬಸಪ್ಪ.

ಎಲ್ಲರೂ ಮೇಲುಸಿರು ಬಿಡುತ್ತಾ ರಾಮಾಪುರದ ಹಾದಿಯಲ್ಲಿ ಧಾವಿಸುತ್ತಿದ್ದರು.

ಅನಾಹುತದ ಸಮಾಚಾರವನ್ನರಿಯದ ಸಾವಿತ್ರಿ, ಸದಾಶಿವನ ಮಾರ್ಗ ಪ್ರತೀಕ್ಷೆ ಮಾಡುತ್ತಾ ಮಲ್ಲಾಪುರದಲ್ಲಿ ಕಾದು ಕುಳಿತಿದ್ದಳು.

# ಈ ಲೇಖಕರ ಇತರ ಕೃತಿಗಳು

## ಕಾದಂಬರಿಗಳು

ಸ್ವಾತಂತ್ರ್ಯದೆಡೆಗೆ
ಮಾಡಿ ಮಡಿದವರು
ಜ್ವಾಲಾಮುಖಿಯ ಮೇಲೆ
ಮೋಹದ ಬಲೆಯಲ್ಲಿ
ಬೀದಿಯಲ್ಲಿ ಬಿದ್ದವಳು
ಜರತಾರಿ ಜಗದ್ಗುರು
ಮಣ್ಣು ಮತ್ತು ಹೆಣ್ಣು
ಖಾನಾವಳಿಯ ನೀಲಾ
ನೀ ನನ್ನ ಮುಟ್ಟಬೇಡ
ಜನಿವಾರ ಮತ್ತು ಶಿವದಾರ

## ಕಥಾಸಂಗ್ರಹಗಳು

ಕಾರವಾನ್
ಗುಲಾಬಿ ಹೂ
ಆಗಸ್ಟ್ ಒಂಭತ್ತು
ಸೆರೆಯಿಂದ ಹೊರಗೆ
ಜೋಳದ ಬೆಳೆಯ ನಡುವೆ

## ಜೀವನ ಚರಿತ್ರೆ

ಸೇನಾಪತಿ ಚೆನ್ನಪ್ಪ ವಾಲಿ